ಪ್ರತಿಭಾ ಗ್ರಂಥಮಾಲೆ, ಧಾರವಾಡ :: ಹನ್ನೆರಡನೆ ವರುಷ, ಮೂರನೆಯ ಕಿರಣ.

# ವಿದ್ಯಾಧರೆ

ಸಾಮಾಜಿಕ ಕಾದಂಬರಿ

'ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ'



ಲೇಖಕರು:

ಶ್ರೀನಿವಾಸರಾವ್ ಕೊರಟಿ

ಅಕ್ಟೋಬರ ೧೯೫೪ ★ ಬೆಲೆ: ೧—೪—೦

ಮುದ್ರಕರು :
ಭಾಲಚಂದ್ರ ಘಾಣೇಕರ
ಪ್ರತಿಭಾ ಮುದ್ರಣ
ಧಾರವಾಡ.

---



---

ಪ್ರಕಾಶಕರು :
ಭಾಲಚಂದ್ರ ಘಾಣೇಕರ
ಪ್ರತಿಭಾ ಗ್ರಂಥಮಾಲೆ,
ಧಾರವಾಡ.

# ಅರಿಕೆ

ನನ್ನ 'ಕಣ್ಣೀರಿನ ಕಡಲು' ಕಾದಂಬರಿಯಲ್ಲಿ ಒಂದು ನಿಲುಗಡೆಗೆ ಬಂದ ಕಥೆ 'ವಿದ್ಯಾಧರಿ' ಯಲ್ಲಿ ಮುಂದುವರೆದಿದೆ. ಶಾರದೆ ಮಕ್ಕಳನ್ನು ದೈವದ ಪಾಲು ಮಾಡಿ ಮಡಿಕೇರಿಗೆ ಬಂದನಂತರದ ಕಥೆಯೇ ಈ ಕಾದಂಬರಿಯ ವಸ್ತು. ಅನಾಥರಾದ ಆ ಮಕ್ಕಳ ಕಥೆಯನ್ನು 'ಮಂಗಳ ದೀಪ' ಕಾದಂಬರಿ ಯಲ್ಲಿ ಚಿತ್ರಿಸಿದ್ದೇನೆ. ನನ್ನ ಇತರ ಕಾದಂಬರಿಗಳಂತೆಯೇ ಇದೂ ಓದುಗರ ವಿಶ್ವಾಸಕ್ಕೆ ಪಾತ್ರವಾಗುವುದೆಂದು ಬಗೆದಿದ್ದೇನೆ.

ಈ ಕಾದಂಬರಿಯಲ್ಲಿ ವಿದ್ಯಾಕಾಂಕ್ಷಿಯಾದ ಒಬ್ಬ ಹೆಣ್ಣುಮಗಳ ಕಥೆ ಯನ್ನು ಕೊಟ್ಟಿದ್ದೇನೆ. ವಿದ್ಯಾಪ್ರಗತಿಗೆ ಅಡ್ಡವಾಗಿ ಬಂದ ಅನೇಕ ಅಗ್ನಿಪರೀಕ್ಷೆ ಗಳನ್ನು ಅವಳು ಹೇಗೆ ಹಾಯ್ದು ತನ್ನ ಆದರ್ಶ ಸಾಧನೆಯಲ್ಲಿ ಮುಂಬರೆದಳೆಂಬ ಕಥೆ ಹೇಳಿದೆ. ಇಂದು ವಿದ್ಯೆ—ಜ್ಞಾನ ಸಂಪಾದನೆ ಕೇವಲ ಗಂಡಿನ ಗುತ್ತಿಗೆ ಯಾಗಿ ಉಳಿದಿಲ್ಲ. ಇದುವರೆಗೆ ಅಡಿಗೆಯ ಮನೆಯೇ ತನ್ನ ಕಾರ್ಯರಂಗ ವೆಂದು ತಿಳಿದಿದ್ದ ಹೆಣ್ಣು ಇಂದು ಸಾಮಾಜಿಕ ಹಾಗೂ ಸಾಂಸ್ಕೃತಿಕ ರಂಗದಲ್ಲಿ ಗಂಡಿನೊಂದಿಗೆ ಹೊಯ್‌ಕೈಯಾಗಿ ನಿಂತಿದ್ದಾಳೆ. ಇದು ಸಮಾಜದ ಪ್ರಗತಿಗೆ ಎಷ್ಟರಮಟ್ಟಿಗೆ ಸಾಧಕ ಬಾಧಕವೆನ್ನುವುದನ್ನು ಇಲ್ಲಿ ಚರ್ಚಿಸಿಲ್ಲ. ಆದರೂ ಸ್ತ್ರೀಸಮಸ್ಯೆಯ ಹಲವು ಮುಖಗಳು ಈ ಕಾದಂಬರಿಯಲ್ಲಿ ಸೂಚ್ಯವಾಗಿ ಬಂದಿವೆ. ವಿಧವಾ ವಿವಾಹ, ಅಂತರ್‌ಜಾತೀಯ ವಿವಾಹಗಳು ಇಂದು ನಮ್ಮ ಜನಜೀವನ ದಲ್ಲಿ ಸಹಜವೆನಿಸುವ ಮಟ್ಟಿಗೆ ಬೆರತುಹೋಗಿವೆ. ಇದು ಸಾಮಾಜಿಕ ಜಾಗ್ರ ತಿಯ ಜೀವಂತ ಕುರುಹು. ಆದರೂ ಕಾದಂಬರಿಯಲ್ಲಿ ಶಾರದೆ ಹೇಳುವಂತೆ "ಹೆಣ್ಣಿನ ಅನಕ್ಷರತೆ ಹೋಗದ ಹೊರತು ಅವರು ಎಚ್ಚೆತ್ತುಕೊಳ್ಳರು. ತಮ್ಮ ಹಕ್ಕುಬಾಧ್ಯತೆಗಳೇನೆಂದು ತಿಳಿದುಕೊಳ್ಳಲಾರರು............... ಸಮಾಜದಲ್ಲಿ ಎಷ್ಟೊಂದು ರೋಗರುಜಿನಗಳಿವೆ ? ಅದರಲ್ಲಿಯೂ ಹೆಣ್ಣು ಸಾವಿರ ಬಗೆಯ ರೋಗಗಳಿಗೆ ತುತ್ತಾಗಿದ್ದಾಳೆ. ಹೆರಿಗೆ ಮೊದಲಾದ ಕಡ್ಡಾಯ ಆಪತ್ತುಗಳಿಗೆ ಬಲಿಯಾಗಿ ಎಷ್ಟೊಂದುಜನ ಬಾಲಮಾತೆಯರು ಜೀವನ್ಮೃತರಾಗಿಲ್ಲ? ವಿಷಯ

ಲಂಪಟ, ದುರ್ವ್ಯಸನಿ ಗಂಡಂದಿರ ಸಂಪರ್ಕದಿಂದ ಎಷ್ಟು ಮಂದಿ ಗೃಹಿಣಿಯರು ನರಕ ಯಾತನೆಯನ್ನು ಅನುಭವಿಸುತ್ತಿಲ್ಲ?" ಇಂಥವರ ಸೇವೆ–ಉದ್ಧಾರ ನಮ್ಮ ವಿದ್ಯಾವತಿಯರಾದ ಹೆಣ್ಣುಮಕ್ಕಳಿಂದ ಆಗಬೇಕಾಗಿದೆ. ನಮ್ಮ ನಾಡಿನ ವಿದ್ಯಾವತಿಯರೆಲ್ಲ ಅಜ್ಞಾನ ಕೂಪದಲ್ಲಿ ತೊಳಲುತ್ತಿರುವ ಸೋದರಿಯರಿಗೆ ದಾರಿದೀಪವಾದರೆ ಅವರು ಕಷ್ಟಪಟ್ಟು ವಿದ್ಯಾರ್ಜನೆ ಮಾಡಿದುದಕ್ಕೆ ಸಾರ್ಥಕ. ಈ ಆದರ್ಶ ನಮ್ಮ ನಾಡಿನ ಹೆಣ್ಣುಮಕ್ಕಳ ಕಣ್ಣುಮುಂದೆ ಬರಬೇಕೆಂಬುದೇ ಲೇಖಕನ ಆಶಯ. ವಿದ್ಯಾಧರೆಯಾದ ಸುಮಿತ್ರೆ ಹೇಗೆ ತನ್ನ ಆದರ್ಶದತ್ತ ನಡೆದು ಸಮಾಜಕ್ಕೆ ತನ್ನಿಂದಾಗುವ ಸೇವೆ ಸಲ್ಲಿಸಿದಳೆಂಬುದನ್ನು ನನ್ನ 'ಮಿಸ್ ಲೀಲಾವತಿ' ಯಲ್ಲಿ ಚಿತ್ರಿಸಿದ್ದೇನೆ.

ಈ ಕಾದಂಬರಿಯನ್ನು ಯಾವ ಒಂದು ವ್ಯಕ್ತಿ ಸಂಸ್ಥೆಯನ್ನು ಉದ್ದೇಶಿಸಿ ಬರೆದಿಲ್ಲ. ಎಲ್ಲವೂ ನನ್ನ ಕಾಲ್ಪನಿಕ ಲೋಕದಿಂದ ಹೊರಹೊಮ್ಮಿದ ವ್ಯಕ್ತಿಗಳು.

ಈ ಕಾದಂಬರಿ ಇಷ್ಟು ಬೇಗ ಓದುಗರ ಕೈಸೇರಲು ಕಾರಣರಾದ ಪ್ರತಿಭಾ ಗ್ರಂಥಮಾಲೆಯ ಶ್ರೀ. ಘಾಣೇಕರ ಅವರಿಗೂ, ಹಸ್ತ ಪ್ರತಿಯನ್ನು ತಯಾರಿಸಿಕೊಟ್ಟ ಮಿತ್ರರಾದ ಕೆ. ಎಸ್. ಎನ್. ಸ್ವಾಮಿ ಮತ್ತು ಶ್ರೀ. ವೇಣು ಗೋಪಾಲ್ ಅವರಿಗೂ ವಂದನೆಗಳು. ಹಸ್ತಪ್ರತಿಯನ್ನು ಓದಿ ಉಪಯುಕ್ತ ಸಲಹೆಗಳನ್ನಿತ್ತ ಸೌ. ಮಂಜುಳೆಗೂ ಋಣಿಯಾಗಿದ್ದೇನೆ. ಕಾದಂಬರಿಗೆ ಕಳೆ ಗಟ್ಟುವಂತೆ ಅಂದವಾದ ಮುಖಚಿತ್ರ ಬರೆದುಕೊಟ್ಟ ಶ್ರೀ. ಮೂರ್ತಿ ಅವರಿಗೂ ನನ್ನ ವಂದನೆಗಳು.

ಗಾಂಧೀ ಜಯಂತಿ
೨–೧೦-೫೪

ಇತಿ
**ಶ್ರೀನಿವಾಸರಾವ್ ಕೊರಟಿ.**

# ಅ ರ್ಪ ಣೆ



ಸ್ತ್ರೀ ವಿದ್ಯಾಪಕ್ಷಪಾತಿಗಳಾದ
ನನ್ನ ಅತ್ತೆಮಾವಂದಿರಿಗೆ
ಪ್ರೇಮಪೂರ್ವಕವಾಗಿ

# ೧

ಮಲೆನಾಡಿನ ಕಣ್ಣಾದ ಮಡಿಕೇರಿಯಲ್ಲಿ ಹಿಡಿದ ಜಡಿಮಳೆ ಇನ್ನೂ ಬಿಟ್ಟಿರಲಿಲ್ಲ. ಮಳೆಗಾಲದ ಕಾರ್ಮುಗಿಲು ಗಿರಿ ಕಾನನಗಳ ಮೇಲೆ ದಟ್ಟವಾಗಿ ಕವಿದು ಅನೇಕ ದಿನಗಳಿಂದ ಹಗಲು ರಾತ್ರಿಗಳ ಭೇದ ಜನರ ಮನಸ್ಸಿನಿಂದ ಮರೆಯಾಗುವಂತೆ ಮಾಡಿತ್ತು. ಜನ ಸೂರ್ಯೋದಯ, ಸೂರ್ಯಾಸ್ತಗಳನ್ನು ಮರೆತು ಮಬ್ಬುಕವಿದ ಹಗಲಿನಲ್ಲೇ, ಸೋನೆ ಸುರಿಯುವ ಮಳೆಯಲ್ಲೇ ದೈನಂದಿನ ಕೆಲಸದಲ್ಲಿ ತೊಡಗಿದ್ದರು. ಹಳ್ಳಿಗಾಡಿನ ರೈತರಿಗೆ ಜಡಿಮಳೆಯಲ್ಲೇ ದಿನನಿತ್ಯದ ಕೆಲಸಗಳನ್ನು ಮಾಡುವುದು ಅಭ್ಯಾಸವಾಗಿತ್ತು. ಜಡಿಮಳೆ 'ಘೋರ್' ಎಂದು ಸುಯ್ಯುತ್ತಿರುವಾಗಲೇ, ಗದ್ದೆ ಉಳುವುದು, ಬಿತ್ತುವುದು, ಪೈರನ್ನು ನಾಟುವುದು, ಕಳೆ ಕೀಳುವುದು, ತೋಟದ ಮೆಣಸು, ಏಲಕ್ಕಿ, ಕಿತ್ತಳೆ, ಕಾಫಿ ಸಸಿಗಳಿಗೆ ಹತ್ತಿರುವ ಹುಳುಗಳನ್ನು ಬಿಡಿಸುವುದು, ಅವುಗಳ ಪಾತಿ ಸರಿಮಾಡಿ ಗೊಬ್ಬರ ಹಾಕುವುದು—ಇತ್ಯಾದಿ ಕೆಲಸಗಳಲ್ಲಿ ತೊಡಗಿದ್ದರು. ಮಳೆಹನಿಯಿಂದ ಉಟ್ಟ ಬಟ್ಟೆಗಳು ತೊಯ್ದು ಒದ್ದೆಮುದ್ದೆಯಾದರೂ ಕೆಲಸದಲ್ಲಿ ಅವರಿಗೆ ಆಲಸಿಕೆಯಾಗಲೀ, ಬೇಸರವಾಗಲೀ ಇಲ್ಲ. ಮಳೆಯಲ್ಲಿ ಕೆಲಸ ಮಾಡಲು ಅವರಲ್ಲಿ ಮಕ್ಕಳ ಉತ್ಸಾಹವಿದ್ದು, ಅವರ ಆರೋಗ್ಯ ಆ ಬಗೆಯ ಹವೆಗೆ ಒಗ್ಗಿತ್ತು. ಆದರೆ ಪೇಟೆಯಲ್ಲಿ ಕೆಲಸ ಮಾಡುವ ನಾಜೂಕಿನ ಜನಕ್ಕಾದರೆ ಮಳೆಗಾಲ ಆರಂಭವಾಯಿತೆಂದರೆ ಎದೆಯಲ್ಲಿ ಢವಢವಗುಟ್ಟಲು ಪ್ರಾರಂಭ. ಏಕೆಂದರೆ ತಮ್ಮ ಹಳೆಯ ಕಾಹಿಲೆಯ ಜೊತೆಗೆ ಹೊಸ ಕಾಹಿಲೆಗಳು ಬಂದು ಕಾಡುವುವೆನ್ನುವ ಭಯ. ಯಾವುದು ಇಲ್ಲದಿದ್ದರೂ ಮಲೇರಿಯ ಅಂತೂ ಇದ್ದೇ ಇರುತ್ತಿತ್ತು.

ಈ ಬಾರಿ ವೆಂಕಪ್ಪಯ್ಯನವರ ಮನೆಯಲ್ಲಿ ಎಲ್ಲರೂ ಒಂದಲ್ಲ ಒಂದು ಕಾರಣದಿಂದ ಹಾಸಿಗೆ ಹಿಡಿದುಬಿಟ್ಟಿದ್ದರು. ವೆಂಕಪ್ಪಯ್ಯನವರ ಹೆಂಡತಿ ಸೀತಮ್ಮ ಈಗೆಂಟು ದಿನಗಳಿಂದ ಮಲೇರಿಯ ಜ್ವರದಿಂದ ನರಳುತ್ತಾ ಹಾಸಿಗೆ ಹಿಡಿದಿದ್ದರು. ಅವರ ಜತೆಗೆ ಅವರ ಕಿರಿಯ ಮಕ್ಕಳಿಬ್ಬರೂ ಜ್ವರದಿಂದ ಮಲಗಿದ್ದರು. ವೆಂಕಪ್ಪಯ್ಯನವರೇ ಅಡಿಗೆ ಕೆಲಸಗಳನ್ನು ನೋಡಿಕೊಂಡು—ಕಾಹಿಲೆ ಮಲಗಿದವರಿಗೆ ಹೊತ್ತುಹೊತ್ತಿಗೆ ಒಂದಿಷ್ಟು ಗಂಜಿ, ಕಷಾಯ ಕಾಸಿ ಕೊಡುತ್ತಿದ್ದರು. ಮಗಳು ಸುಮಿತ್ರೆ ತನ್ನಿಂದಾಗುವಷ್ಟು ಸಹಾಯ ಮಾಡುತ್ತಿದ್ದರೂ, ಅವಳು ಆ ವರ್ಷವಷ್ಟೇ ಮಿಡಲ್ ಸ್ಕೂಲ್ ಪರೀಕ್ಷೆಗೆ ಕಟ್ಟುವ ಹುಡುಗಿ. ಅವಳಿಗೆ ಶಾಲೆಗೆ ತಪ್ಪಿಸಿಕೊಂಡು ಪಾಠಗಳನ್ನು ಹಾಳುಮಾಡಿಕೊಳ್ಳಲು ಇಷ್ಟವಿಲ್ಲ. ಅವಳು ತನ್ನ ವಿರಾಮದಲ್ಲಿ ತಾಯಿಯ ಶುಶ್ರೂಷೆ ಮಾಡಿ ತಂದೆಗೆ ಅಡಿಗೆ ಕೆಲಸದಲ್ಲಿ ನೆರವಾಗುತ್ತಿದ್ದಳು. ಪಾತ್ರೆಗಳನ್ನು ತೊಳೆಯುವುದು, ಹಂಡೆ ಗಂಗಾಳಗಳಿಗೆ ನೀರು ಭರ್ತಿ ಮಾಡುವುದು—ಇದಿಷ್ಟು ಅವಳ ಕೆಲಸ. ಅನಂತರ ಹತ್ತು ಗಂಟೆಗೆ ಊಟ ಮಾಡಿ, ಶಾಲೆಗೆ ಹೊರಟಳೆಂದರೆ ಮಧ್ಯಾಹ್ನ ದೊರೆಯುತ್ತಿದ್ದ ವಿರಾಮದಲ್ಲೇ ಅವಳು ಮನೆಗೆ ಬರುತ್ತಿದ್ದುದು. ಮಳೆಯಾಗಲೀ, ಬಿಸಿಲಾಗಲೀ ಮನೆಯಲ್ಲಿ ಎಂತಹ ಸಂದರ್ಭವಿದ್ದರೂ ಸುಮಿತ್ರೆ ಮಾತ್ರ ತರಗತಿಗಳಿಗೆ ತಪ್ಪಿಸಿಕೊಳ್ಳುತ್ತಿರಲಿಲ್ಲ. ಅವಳಿಗೆ ಶಾಲೆಗೆ ಹೋಗುವುದರಲ್ಲಿ ಅಷ್ಟು ವಿದ್ಯಾಸಕ್ತಿ ಇತ್ತು. ಶಾಲೆಯಿಲ್ಲದೆ ಇರುವಾಗ ಮನೆಯಲ್ಲಿ ಒಂದು ನಿಮಿಷ ಹೊತ್ತು ಕಳೆಯುವುದು ಅವಳಿಗೆ ಬೇಸರವಾಗುತ್ತಿತ್ತು. ಅವಳ ಓರಗೆಯ ಹುಡುಗಿಯರು ಆಟಪಾಟಗಳಲ್ಲಿ ವಿನೋದವಾಗಿ ಹೊತ್ತು ಕಳೆಯುತ್ತಿದ್ದರೆ ಸುಮಿತ್ರೆ ಮಾತ್ರ ಯಾವುದಾದರೂ ಪುಸ್ತಕವನ್ನು ಓದುತ್ತಾ ಕುಳಿತುಕೊಳ್ಳುತ್ತಿದ್ದಳು. ಲೆಖ್ಖವಾದರೆ ಲೆಖ್ಖ. ಪಾಠವಾದರೆ ಪಾಠ—ಕಥೆ ಪುಸ್ತಕವಾದರೆ ಅವಳಿಗೆ ಬೆಲ್ಲ ಸಿಕ್ಕಿದಂತೆ. ಅದೂ ಪದ್ಯದ ಪುಸ್ತಕವಾದರೆ ತೀರಿತು. ಪದ್ಯವನ್ನು ರಾಗವಾಗಿ ಓದಿಕೊಳ್ಳುತ್ತಾ ಕುಳಿತಳೆಂದರೆ ಜಗತ್ತನ್ನೇ ಮರೆತುಬಿಡುತ್ತಿದ್ದಳು. ಮೂರು ಹೊತ್ತು ಪದ್ಯಗಳನ್ನು ಓದುವ ಸುಮಿತ್ರೆಯನ್ನು ನೋಡಿ ವೆಂಕಪ್ಪಯ್ಯನವರು ಗದರಿಸುತ್ತಿದ್ದರು. ಆದರೆ ತಾಯಿ ಸೀತಮ್ಮನಿಗೆ ಸುಮಿತ್ರೆ ಓದಿಕೊಳ್ಳುವ ಪದ್ಯಗಳನ್ನು ಕೇಳಿದರೆ ಏನೋ ಒಂದು ಬಗೆಯ ಆನಂದ, ಮನಶ್ಶಾಂತಿ ಸಿಗುತ್ತಿತ್ತು. ಅವರು ಮಗಳನ್ನು ಪರೋಕ್ಷವಾಗಿ ಪ್ರೋತ್ಸಾಹಿಸುತ್ತಿದ್ದರು. ಗಂಡನ ವಿರುದ್ಧ

ಮಗಳಪರ ವಾದಿಸುವ ಎದೆಗಾರಿಕೆ ಅವರಲ್ಲಿ ಇರಲಿಲ್ಲ. ವೆಂಕಪ್ಪಯ್ಯ ಮೊದಲಿ ನಿಂದಲೂ ದರ್ಪದ ಗಂಡನಾಗಿದ್ದ ವ್ಯಕ್ತಿ. "ಹೋಗಲಿ ಬೇರೆ ಏನಾದರೂ ಓದಿಕೋ ಮಗು" ಎಂದು ಸೀತಮ್ಮ ಹೇಳಿ ಮಗಳಿಗೆ ಸಮಾಧಾನ ಮಾಡುತ್ತಿದ್ದರು.

ಸುಮಿತ್ರೆ ಇಂಗ್ಲಿಷ್ ಶಾಲೆಗೆ ಸೇರಿದುದೇ ವೆಂಕಪ್ಪಯ್ಯನವರಿಗೆ ಇಷ್ಟವಿರಲಿಲ್ಲ. ಅವರ ಇಷ್ಟದ ವಿರುದ್ಧ ಅವಳು ಶಾಲೆಗೆ ಸೇರಿದ್ದಳು. "ಇಂಗ್ಲಿಷ್ ಕಲಿತು ನೀನು ಮಾಡುವುದು ಅಷ್ಟರಲ್ಲಿಯೇ ಇದೆ" ಎಂದು ವೆಂಕಪ್ಪಯ್ಯನವರು ಮಗಳನ್ನು ನಿರುತ್ಸಾಹಗೊಳಿಸಿದರೂ ಸುಮಿತ್ರೆಗೆ ತಾಯಿಯ ಬೆಂಬಲವಿತ್ತು. ಮಿಡ್ಲ್ ಸ್ಕೂಲಿನಲ್ಲಿ ಕಲಿತಷ್ಟು ಕಾಲ ಅವಳ ತರಗತಿಗೆ ಅವಳೇ ಪ್ರಥಮ ವಿದ್ಯಾರ್ಥಿನಿ. ತನ್ನ ಸ್ಥಾನವನ್ನು ಇತರರಿಗೆ ಅವಳೆಂದೂ ಬಿಟ್ಟುಕೊಟ್ಟಿರಲಿಲ್ಲ. ಅವಳನ್ನು ಕಂಡರೆ ಉಪಾಧ್ಯಾಯರಿಗೆಲ್ಲ ತುಂಬಾ ಪ್ರೀತಿ. ಶಾಲೆಯಲ್ಲಿ ತನ್ನ ನಮ್ರ ನಡವಳಿಕೆ ಸೌಜನ್ಯಗಳಿಂದ ಎಲ್ಲರಿಗೂ ಅಚ್ಚುಮೆಚ್ಚಾಗಿದ್ದಳು. ಶಾಲೆಯಲ್ಲಿ ಅವಳಿಗೆ 'ಮೆರಿಟ್ ಸ್ಕಾಲರಶಿಪ್' ಬರುತ್ತಿತ್ತು. ಇದರಿಂದಾಗಿ ಅವಳ ಪುಸ್ತಕಗಳೇ ಮೊದಲಾದ ಖರ್ಚುಗಳು ವೆಂಕಪ್ಪಯ್ಯನವರ ತಲೆಯಮೇಲೆ ಬಿದ್ದಿರಲಿಲ್ಲ. ಹೀಗಿದ್ದರೂ ವೆಂಕಪ್ಪಯ್ಯನವರಿಗೆ ತನ್ನ ಇಚ್ಛೆಗೆ ವಿರುದ್ಧ ಸುಮಿತ್ರೆ ಇಂಗ್ಲಿಷ್ ಶಾಲೆಗೆ ಸೇರಿಕೊಂಡಳಲ್ಲ ಎಂದು ಒಂದು ಬಗೆಯ ಅಸಹನೆ ಇದ್ದೇ ಇತ್ತು.

ಸುಮಿತ್ರೆ ತನ್ನ ತಂದೆ ತನ್ನ ಮೇಲೆ ರೇಗದಿರಲಿ ಎಂದು ಮನೆಗೆಲಸಗಳಲ್ಲಿ ತಾಯಿಗೆ ಎಷ್ಟೋ ನೆರವಾಗುತ್ತಿದ್ದಳು. ಮನೆಗೆಲಸಗಳ ನಡುವೆ ಅವಳ ಓದಿಗೆ ವಿರಾಮ ಸಿಕ್ಕುತ್ತಿದ್ದುದೇ ಅಪರೂಪ. ತಾಯಿ ಸೀತಮ್ಮನವರು ಮಗಳಿಂದ ಹೆಚ್ಚು ದುಡಿಸಿಕೊಳ್ಳದೆ ಅವಳ ಕೆಲಸಗಳನ್ನೆಲ್ಲ ತಾವೇ ನೋಡಿಕೊಳ್ಳುತ್ತಿದ್ದರೂ ಸದಾಕಾಲ ಮಡಿಯಲ್ಲಿ ಇರುತ್ತಿದ್ದ ಅವರು ಮಕ್ಕಳ ಕೆಲಸ ನೋಡಿಕೊಳ್ಳಬೇಕಾದರೆ ಸುಮಿತ್ರೆಯ ನೆರವು ಬೇಕಾಗುತ್ತಿತ್ತು. ಮಕ್ಕಳಿಗೆ ಸ್ನಾನ ಮಾಡಿಸುವುದು, ಒಗೆದ ಬಟ್ಟೆ ಉಡಿಸುವುದು, ತಲೆ ಬಾಚುವುದು, ಎಂಜಲು ಗೋಮೆ ಮಾಡುವುದು ಇತ್ಯಾದಿ ಕೆಲಸಗಳು ಸುಮಿತ್ರೆಯ ಪಾಲಿಗೆ ಬೀಳುತ್ತಿದ್ದವು. ಸುಮಿತ್ರೆ ಇಲ್ಲದಾಗ ಈ ಕೆಲಸಗಳು ನಿರ್ವಾಹವಿಲ್ಲದೆ ವೆಂಕಪ್ಪಯ್ಯನವರ ಪಾಲಿಗೆ ಬೀಳುತ್ತಿದ್ದವು. ಅವರು ಸುಮಿತ್ರೆಯ ಮೇಲೆ ರೇಗಿಕೊಂಡು ಅಷ್ಟು ಕೆಲಸವನ್ನು ಬೇಕಾಬಿಟ್ಟಿಯಾಗಿ ಮಾಡಿ ಮುಗಿಸುತ್ತಿದ್ದರು.

ಈಗೊಂದು ವಾರದಿಂದ ಮನೆಯ ಎಲ್ಲ ಕೆಲಸ ವೆಂಕಪ್ಪಯ್ಯನವರ ಮೇಲೆ ಬಿದ್ದಿತ್ತು. ಮೂರು ಹೊತ್ತು ಶಾಲು ಹೆಗಲಿಗೇರಿಸಿ, ದರ್ಭೆ ಸಮಿತ್ತುಗಳನ್ನು ಕೈಲಿ ಹಿಡಿದು—ಹಳ್ಳಿಯಿಂದ ಹಳ್ಳಿಗೆ, ಮನೆಯಿಂದ ಮನೆಗೆ, ಮದುವೆ, ಮುಂಜಿ ತಿಥಿ ಪಕ್ಷವೆಂದು ಶುಭ ಅಶುಭ ಕೆಲಸಗಳನ್ನು ಅರಸಿಕೊಂಡು ಹೊರಟು ಬಿಡುತ್ತಿದ್ದ ವೈದಿಕ ವೃತ್ತಿಯ ವೆಂಕಪ್ಪಯ್ಯನವರಿಗೆ ಈಗ ರೋಗಿಗಳ ಶುಶ್ರೂಷೆಯ ಕೆಲಸವೇ ದೊಡ್ಡ ಕೆಲಸವಾಗಿತ್ತು. ಅವರು ಸುಮಿತ್ರೆಯನ್ನು ಸೀತಮ್ಮನವರ ಕಾಹಿಲೆ ವಾಸಿಯಾಗುವ ತನಕ ಶಾಲೆಗೆ ಹೋಗದೆ ಮನೆಯಲ್ಲಿಯೇ ಇರಲು ಹೇಳಿದ್ದರೂ ಅವರ ಮಾತನ್ನು ಕೇಳಲಿಲ್ಲ. ಅವರು ಸದಾ ಗೊಣಗುಟ್ಟಿಕೊಳ್ಳುತ್ತಾ ತಮ್ಮ ಆರೈಕೆ ಮಾಡುವುದನ್ನು ನೋಡಲಾರದೆ ಸೀತಮ್ಮನವರೇ ಮೈಯಲ್ಲಿ ಜ್ವರವಿದ್ದರೂ ಮನೆಗೆಲಸವನ್ನು ಮಾಡಲು ಹೋಗುತ್ತಿದ್ದರು. ಇದರಿಂದ ಶರೀರಕ್ಕೆ ಇನ್ನಷ್ಟು ದಣಿವು ಮಾಡಿಕೊಳ್ಳುತ್ತಿದ್ದರು. ಕೇವಲ ಮೂರು ನಾಲ್ಕು ದಿನಕ್ಕೆ ವಾಸಿಯಾಗಬೇಕಿದ್ದ ಜ್ವರ ಅವರು ಮಾಡಿಕೊಂಡ ಅಲಸಿಕೆಯಿಂದಾಗಿ ವಾಸಿಯಾಗುವ ಬದಲು ಹೆಚ್ಚುತ್ತಲೇ ಇತ್ತು. ಮಕ್ಕಳೇನೋ ಸರಿಯಾದ ಔಷಧ ಪಥ್ಯಗಳಿಂದ ಗುಣಮುಖರಾದರೂ ಸೀತಮ್ಮನವರು ಮಾತ್ರ ಚೇತರಿಸಿಕೊಳ್ಳಲಿಲ್ಲ. ಮಳೆಯಲ್ಲಿ ಓಡಾಡಿದ ಪರಿಣಾಮವಾಗಿ ಜ್ವರ ನ್ಯೂಮೋನಿಯಾಕ್ಕೆ ತಿರುಗಿಕೊಂಡಿತ್ತು. ಇದು ವೆಂಕಪ್ಪಯ್ಯನವರ ಹಾಗೂ ಸುಮಿತ್ರೆಯ ಕಳವಳಕ್ಕೆ ಕಾರಣವಾಗಿತ್ತು. ನ್ಯೂಮೋನಿಯಾಕ್ಕೆ ಇಂಗ್ಲಿಷ್ ಔಷಧಿಗಳನ್ನು ತೆಗೆದುಕೊಳ್ಳಲೊಪ್ಪದೆ ಸೀತಮ್ಮ ಯಾವುದೋ ಆಯುರ್ವೇದದ ಬೇರನ್ನೇ ನಂಬಿಕೊಂಡಿದ್ದರು. ಇಂಗ್ಲಿಷ್ ಔಷಧಿಗಳಿಗೆ ಮದ್ಯ ಮಾಂಸಗಳನ್ನು ಬೆರಸಿರುವರೆಂಬ ಭಾವನೆ. ತಾವು ರೋಗದಿಂದ ಸತ್ತರೂ ಇಂಗ್ಲಿಷ್ ಔಷಧಗಳನ್ನು ಸೇವಿಸುವುದಿಲ್ಲವೆಂದು ಹಟ ಹಿಡಿದಿದ್ದರು. ಹೀಗಾಗಿ ಅವರ ದೇಹಸ್ಥಿತಿ ದಿನೇ ದಿನೇ ಕೆಡುತ್ತಾ ಹೋಗಿತ್ತು.

ಈ ದಿನ ಸುಮಿತ್ರೆ ಮಧ್ಯಾಹ್ನದ ವಿರಾಮದಲ್ಲಿ ಮನೆಗೆ ಬಂದಾಗ, ಮನೆಯಲ್ಲಿ ಒಂದು ವಿಚಿತ್ರ ದೃಶ್ಯ ಕಂಡಳು. ವೆಂಕಪ್ಪಯ್ಯನವರು ಮುಲುಕುತ್ತಾ ಹಜಾರದಲ್ಲಿ ಮಲಗಿದ್ದರು. ಅವರು ನರಳುವ ಧ್ವನಿ ಸೂರು ಹಾರಿಸುವಂತಿತ್ತು. ಅದನ್ನು ಕೇಳಿ ಸುಮಿತ್ರೆ ಗಾಬರಿಗೊಂಡು ತಂದೆಯ ಬಳಿ ಬಂದು, ಏನು ವಿಷಯವೆಂದು ವಿಚಾರಿಸಿದಳು. ಬಡಪೆಟ್ಟಿಗೆ ವೆಂಕಪ್ಪಯ್ಯನವರು

ಬಾಯಿಬಿಟ್ಟರಲ್ಲವೆ? ಹನ್ನೊಂದು ವರ್ಷದ ಸುಮಿತ್ರೆ ಯಾವ ದೊಡ್ಡ ಮನು ಷ್ಯಳೆಂದು ಅವಳಿಗೆ ನಡೆದ ಸಂಗತಿಯನ್ನು ತಿಳಿಸಬೇಕು? ಸುಮಿತ್ರೆ ಎಷ್ಟು ಕೇಳಿದರೂ ವೆಂಕಪ್ಪಯ್ಯ ಉದಾಸೀನರಾಗಿ, ಮುಸುಕೆಳೆದು ಮಲಗಿದವರು ನಡೆ ದುದೇನೆಂದು ಹೇಳಲಿಲ್ಲ. ಕಡೆಗೆ ತಾಯಿ ಸೀತಮ್ಮ ನಡೆದುದನ್ನು ಸೂಕ್ಷ್ಮ ವಾಗಿ ತಿಳಿಸಿದರು.

ವೆಂಕಪ್ಪಯ್ಯನವರು ಅಡಿಗೆ ಮಾಡುತ್ತಿರುವಾಗ, ಮಡಿನೀರು ಬೇಕಾಗಿ, ಹಿತ್ತಲ ಭಾವಿಯಿಂದ ಒಂದು ಕೊಡ ನೀರು ಸೇದಿಕೊಂಡು ಬರುವಾಗ ಜಾರಿ ಬಿದ್ದರಂತೆ. ಕೈಲಿದ್ದ ಬಿಂದಿಗೆಯನ್ನು ಅಲ್ಲೇ ಕುಕ್ಕಿ, ನೋವಿನ ಧ್ವನಿಯನ್ನು ಹೊರಡಿಸುತ್ತಾ ಬಾಯಿಗೆ ಬಂದಂತೆ ಹೆಂಡತಿಯನ್ನು ಬೈಯುತ್ತಾ ಬಂದು ಅಲ್ಲೇ ಇದ್ದ ಚಾಪೆಯ ಮೇಲೆ ಮುಲುಕುತ್ತಾ ಮಲಗಿದರು.

ದೇವರ ದಯದಿಂದ ಅಂತಹ ಗಾಯವಾಗಿರಲಿಲ್ಲ. ಕಾಲು ಕೈಗಳು ಕೆಲವೆಡೆ ಊದಿಕೊಂಡಿದ್ದವು. ಹಾಗೇ ಬಿಟ್ಟರೆ ನೋವು ಹೆಚ್ಚುವುದೆಂದು ಕೂಡಲೆ ಅವಕ್ಕೆ ಏನಾದರೊಂದು ಮುಲಾಮು ಮಾಡಬೇಕೆಂದು ಸೀತಮ್ಮ ಹೇಳಿ ದರೂ ಆ ಮಾತನ್ನು ವೆಂಕಪ್ಪಯ್ಯ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಅವರು ಮುಲುಕುತ್ತಲೇ ಮಲಗಿದ್ದರು.

ಸುಮಿತ್ರೆ ತಾಯಿಯಿಂದ ಎಲ್ಲ ವಿಷಯ ತಿಳಿದ ಮೇಲೆ ತಂದೆಯ ಬಳಿಗೆ ಹೋಗಿ ಅವರ ನೋವಾಗುವ ಭಾಗಗಳನ್ನು ಮೆಲ್ಲನೆ ಮುಟ್ಟಿದಳು. ಅನಂತರ ತಾಯಿಯ ಸಲಹೆಯಂತೆ ಊದಿದ್ದ ಭಾಗಗಳಿಗೆ ಬಿಸಿಯ ಕಾವು ಕೊಟ್ಟು ಸುಣ್ಣ ಹಾಗೂ ಹುಣಿಸೆಹಣ್ಣನ್ನು ಪಟ್ಟು ಹಾಕಲು ಅಡಿಗೆಯ ಮನೆಗೆ ಹೊರ ಟಳು. ಅಡಿಗೆ ಮನೆಯಲ್ಲಿ ವೆಂಕಪ್ಪಯ್ಯನವರು ಆರಂಭಿಸಿದ್ದ ಅಡಿಗೆ ಆರಿ ತಣ್ಣ ಗಾಗಿತ್ತು. ಅನ್ನದ ಪಾತ್ರೆ ಇನ್ನೂ ಒಲೆಯ ಮೇಲೇ ಇದ್ದು ಸೀದು ಹೋದ ವಾಸನೆ ಬರುತ್ತಿತ್ತು. ಮನೆಯಲ್ಲಿದ್ದ ಹುಣಿಸೆಹಣ್ಣು ಮುಗಿದು ಬಂದಿತ್ತು. ಉಪ್ಪು, ಬೆಲ್ಲದ ಗುಡಾಣವನ್ನು ಸರಿಯಾಗಿ ನೋಡಿಕೊಳ್ಳದೆ ಇದ್ದುದರಿಂದ ಹೆಂಚಿನ ಮೂಲಕ ಸೋರಿದ ಮಳೆನೀರಿನಿಂದ ತೊಯ್ದು ಹೋಗಿತ್ತು. ಸುಮಿತ್ರೆ ಅನ್ನದ ಪಾತ್ರೆಯನ್ನು ಕೆಳಗೆ ಇಳಿಸಿ, ಉಪ್ಪಿನ ಮರಗಿಯನ್ನು ನೋಡಿದಳು. ಅದರಲ್ಲಿ ಉಪ್ಪು ಇರಲಿಲ್ಲ. ದಾಸ್ತಾನು ಮಾಡಿದ್ದ ಉಪ್ಪಿನ ಹರವಿಯಲ್ಲಿ ಉಪ್ಪಿನ ಬದಲು ನೀರು ಕೈಗೆ ಹತ್ತಿತು. ಈ ವಿಷಯವನ್ನು ತಾಯಿ ಸೀತಮ್ಮ

ನವರಿಗೆ ತಿಳಿಸಿದಾಗ, ಅವರು ತಮ್ಮ ಸುದಾಮ ಸಂಸಾರವನ್ನು ಕಂಡು ವ್ಯಥೆ ಪಡದೆ ಇರಲಿಲ್ಲ.

ವೆಂಕಪ್ಪಯ್ಯನವರಿಗೆ ವರ್ಷದಲ್ಲಿ ಕೆಲವು ತಿಂಗಳು ಒಳ್ಳೆಯ ಸಂಪಾದನೆ ಇದ್ದರೂ ಮತ್ತೆ ಕೆಲವು ತಿಂಗಳಲ್ಲಿ—ಅವರನ್ನು ತಮ್ಮ ಮನೆಗೆ ಬನ್ನಿ ಎಂದು ಕರೆಯುವವರು ದಿಕ್ಕಿರಲಿಲ್ಲ. ಅದರಲ್ಲಿಯೂ ಮಳೆಗಾಲ ಬಂತೆಂದರೆ ಅವರ ವೈದಿಕವೃತ್ತಿಗೆ ಬಲವಾದ ಪೆಟ್ಟು ಬೀಳುತ್ತಿತ್ತು. ಆ ವೇಳೆಯಲ್ಲಿ ಹಿಂದೆ ಗಳಿಸಿದ್ದನ್ನೇ ತಿಂದುಕೊಂಡಿರಬೇಕಾಗುತ್ತಿತ್ತು. ವೆಂಕಪ್ಪಯ್ಯನವರ ಪಿತ್ರಾರ್ಜಿತವಾದ ಆಸ್ತಿ ಅವರದಾಗಿಯೇ ಉಳಿದಿದ್ದರೆ ಎರಡು ಹೊತ್ತಿನ ಊಟಕ್ಕಾಗಿ ಅವರು ಇಷ್ಟು ಭವಣೆ ಬೀಳಬೇಕಿರಲಿಲ್ಲ. ಆದರೆ ಅವರ ತಂದೆಯ ಕಾಲಕ್ಕೆ ತಾತ ಸಂಪಾದಿಸಿದ್ದ ಬಹುಪಾಲಿನ ಆಸ್ತಿ ಇಸ್ಪೀಟು ಆಟದಿಂದಾಗಿ ಕೈ ಬಿಟ್ಟು ಹೋಗಿತ್ತು. ಈಗ ಉಳಿದ ಸ್ಥಿರಾಸ್ತಿ ಎಂದರೆ ನಾಪೂಕ್ಲ ಬಳಿಯ ಒಂದು ಎಕರೆ ತರಿ, ಮಡಕೇರಿಯ ಆ ಹಳೆಯ ಮನೆ. ವೆಂಕಪ್ಪಯ್ಯನ ಮೊದಲನೆಯ ಮಗಳು ಸರೋಜಳ ಮದುವೆಗೆ ಮಾಡಿದ್ದ ಸಾಲಕ್ಕೆ ಆ ತರೀ ಜಮೀನೂ ಅಡಕವಾಗಿತ್ತು. ಮಗಳ ಮದುವೆಯಾಗಿ ಹತ್ತು ವರ್ಷ ಸಂದಿದ್ದರೂ ಅದನ್ನು ಇನ್ನೂ ಬಿಡಿಸಿಕೊಳ್ಳಲು ಅವರಿಂದ ಆಗದೆ ಹೋಗಿತ್ತು. ಹೀಗಾಗಿ ಬೇರಾವ ವರಮಾನವಿಲ್ಲದೆ ವೆಂಕಪ್ಪಯ್ಯನ ಸಂಸಾರ ಅಹನ್ಯಹನಿ ಕಾಲಕ್ಷೇಪ ಮಾಡುತ್ತಿತ್ತು. ಸೀತಮ್ಮನವರು ಆರೋಗ್ಯವಾಗಿ ಇದ್ದಿದ್ದರೆ ಅವರು ಹೇಗೋ ಸಂಸಾರ ತೂಗಿಸಿಕೊಂಡು ಹೋಗುತ್ತಿದ್ದರು. ಅವರು ಹದಿನೈದು ಇಪ್ಪತ್ತು ದಿನಗಳಿಂದ ಹಾಸಿಗೆ ಹಿಡಿದುಬಿಟ್ಟಿದ್ದು ಸಂಸಾರ ಎದ್ವಾತದ್ವವಾಗಿ ಬಿಟ್ಟಿತ್ತು.

ಸೀತಮ್ಮನವರಿಗೆ ಬೇರೇನೂ ಮಾಡಲು ತೋಚದೆ ಎಲ್ಲ ರೀತಿಯಲ್ಲಿ ತಮ್ಮ ಸಂಸಾರಕ್ಕೆ ಆಪದ್ಬಾಂಧವರಂತಿದ್ದ ಶಂಕರಮ್ಮನವರ ಮನೆಗೆ ಸುಮಿತ್ರೆಯನ್ನು ಅಟ್ಟಿದರು. ಶಂಕರಮ್ಮನವರ ಯಜಮಾನರಾದ ಶಾಂತಮಲ್ಲಯ್ಯನವರು ಇಡೀ ಮಡಿಕೇರಿಗೇ ಬೇಕಾದ ವ್ಯಕ್ತಿ. ದಾನಧರ್ಮಗಳಲ್ಲಿ ಅವರದು ಎತ್ತಿದ ಕೈ. ಅವರು ಕಾಫೀಬೀಜ, ಏಲಕ್ಕಿ, ಕಿತ್ತಳೆಗಳ ಸುಪ್ರಸಿದ್ಧ ವ್ಯಾಪಾರಿಗಳು. ಜತೆಗೆ ಸಾವಿರಾರು ರೂಪಾಯಿಗಳ ಲೇವಾದೇವಿಯೂ ಇತ್ತು. ಶಂಕರಮ್ಮನೂ ಸೀತಮ್ಮನೂ ಒಂದೇ ಊರಿನ ಹೆಣ್ಣುಮಕ್ಕಳಾಗಿದ್ದುದರಿಂದ ಅವರವರಲ್ಲಿ ವಾತ್ಸಲ್ಯವೇರ್ಪಟ್ಟಿತ್ತು.

ಸೀತಮ್ಮನವರ ಕಷ್ಟಸುಖಗಳಲ್ಲಿ, ಅವರ ಆಪತ್ತಿನಲ್ಲಿ ಶಂಕರಮ್ಮ ತಂಗಿಯಂತೆ ನೆರವಾಗುತ್ತಿದ್ದರು. ಅವರು ವೀರಶೈವರಾಗಿದ್ದುದರಿಂದ ಅವರ ಮನೆಯಲ್ಲಿ ಉಂಡು ತಿಂದು ಮಾಡುವುದು ಬಿಟ್ಟು ಉಳಿದ ಎಲ್ಲ ವಿಷಯಗಳಲ್ಲಿ ವೆಂಕಪ್ಪಯ್ಯನ ಮನೆಯವರಿಗೆ ಸಲಿಗೆ ಇತ್ತು. ಅದರಲ್ಲಿಯೂ ಸುಮಿತ್ರೆಗೆ ಶಾಂತಮಲ್ಲಯ್ಯನವರ ಮನೆ ಒಂದು ನೆರಮನೆಯಾಗಿರಲಿಲ್ಲ. ಅವಳ ಸಮವಯಸ್ಕಳೂ ಸಹಾಧ್ಯಾಯಿಯೂ ಆಗಿದ್ದ ಶಾಂತಮಲ್ಲಯ್ಯನವರ ಏಕಮಾತ್ರ ಪುತ್ರಿ ಶೈಲಜೆಯೊಂದಿಗೆ ಆತ್ಮೀಯವಾದ ಗೆಳೆತನವಿತ್ತು. ಅವರು ಪರಸ್ಪರ ಅಕ್ಕತಂಗಿಯರಂತೆ ಇದ್ದರು.

ಶೈಲಜೆ ಸುಮಿತ್ರೆಯನ್ನು ಬಿಟ್ಟು ಒಂದು ಆಟವಾಡುತ್ತಿರಲಿಲ್ಲ. ತಾನೂ ಹೊಸ ಬಟ್ಟೆ ಹೊಲಿಸಿಕೊಂಡರೆ ಅದರಲ್ಲಿ ಸುಮಿತ್ರೆಗೆ ಪಾಲು. ತಾವು ಬಟ್ಟೆ ಹೊಲಿಸಿಕೊಟ್ಟರೆ ಸ್ವಾಭಿಮಾನಿಯಾದ ವೆಂಕಪ್ಪಯ್ಯನವರು ತೆಗೆದುಕೊಳ್ಳದೆ ಹೋಗುವರೆಂದು ಸೀತಮ್ಮನವರ ಮುಖಾಂತರ ಸುಮಿತ್ರೆಗೆ ಹೊಸ ಬಟ್ಟೆಗಳನ್ನು ಹೊಲಿಸಿ ಕೊಡುತ್ತಿದ್ದಳು. ತಾನು ಆಗರ್ಭ ಶ್ರೀಮಂತ ಪುತ್ರಿಯಾಗಿದ್ದರೂ ನಿರ್ಗತಿಕ ವೆಂಕಪ್ಪಯ್ಯನವರ ಮಗಳು ಸುಮಿತ್ರೆಯೊಂದಿಗೆ ಹೆಚ್ಚಿನ ಸಲಿಗೆ ಬೆಳಸಬಾರದೆನ್ನುವ ಸಂಕುಚಿತ ಮನೋಭಾವ, ಆ ಮುಗ್ಧೆಗೆ ಇರಲಿಲ್ಲ. ಬಡವರನ್ನು ಕಂಡರೆ ಕನಿಕರಿಸುತ್ತಿದ್ದ ಶಾಂತಮಲ್ಲಯ್ಯ ದಂಪತಿಗಳ ಹೊಟ್ಟೆಯಲ್ಲಿ ಹುಟ್ಟಿದ್ದ ಶೈಲಜೆ ತಂದೆ ತಾಯಿಗಳ ಸದ್ಗುಣಗಳನ್ನು ಸಹಜವಾಗಿಯೆ ಹೊಂದಿದ್ದಳು. ಶಂಕರಮ್ಮನೂ ಶಾಂತಮಲ್ಲಯ್ಯನವರೂ ಯಾರಿಗೆ ಇಲ್ಲವೆಂದರೂ ವೆಂಕಪ್ಪಯ್ಯನ ಮನೆಯವರು ಏನು ಹೇಳಿದರೂ ಇಲ್ಲವೆನ್ನುತ್ತಿರಲಿಲ್ಲ. ಅವರವರ ನಡುವೆ ಅಂತಹ ಸ್ನೇಹವಿತ್ತು.

ತಾಯಿಯ ಅಣತಿಯಂತೆ ಸುಮಿತ್ರೆ ಶಾಂತಮಲ್ಲಯ್ಯನವರ ಮನೆಗೆ ಮಳೆಯಲ್ಲಿಯೇ ನೆನೆಯುತ್ತಾ ಹೋದಳು. ಅವರ ಮನೆಗೂ ಸುಮಿತ್ರೆಯ ಮನೆಗೂ ಸುಮಾರು ಅರ್ಧ ಮೈಲಿ ಫಾಸಲೆ. ಮಳೆಯಲ್ಲಿ ತೊಯ್ದುಕೊಂಡು ಬಂದ ಸುಮಿತ್ರೆಯನ್ನು ನೋಡಿ ಶಂಕರಮ್ಮ ಶೈಲಜೆಯರಿಗೆ ಗಾಬರಿಯಾಯಿತು. ಅವರ ತಾಯಿ ಸೀತಮ್ಮನಿಗೆ ಏನೋ ಆಗಿರಬೇಕೆಂದು ಶಂಕಿಸಿ ಒಮ್ಮೆಲೇ ಏಕೆ? ಏನು? ಎಂದು ವಿಚಾರಿಸಿಕೊಂಡರು. ಕೆಲವು ದಿನಗಳ ಹಿಂದೆ ಬಂದಿದ್ದ ನ್ಯೂಮೋನಿಯಾದಿಂದ ಕ್ರಮಕ್ರಮವಾಗಿ ಗುಣಮುಖರಾಗುತ್ತಿದ್ದ ಸೀತಮ್ಮನಿಗೆ ಮತ್ತೇನಾ

ಯಿತೋ ಎಂದು ಸುಮಿತ್ರೆಯ ಕಳೆಗುಂದಿದ ದೈನ್ಯಮುಖ ನೋಡಿ ಅವರು ಗಾಬರಿ ಬಿದ್ದರು. ಸುಮಿತ್ರೆಯಿಂದ ಎಲ್ಲ ವಿಷಯ ತಿಳಿದ ಮೇಲೆ ಅವರ ಮನಸ್ಸಿಗೆ ಕೊಂಚ ಸಮಾಧಾನವಾದರೂ—ವೆಂಕಪ್ಪಯ್ಯ ಜಾರಿಬಿದ್ದು ಕಾಲು ಹೊರಳಿಸಿಕೊಂಡಿರುವ ಸುದ್ದಿ ಕೇಳಿ ಮರುಗದೆ ಇರಲಿಲ್ಲ. ಈ ಬಡ ಸಂಸಾರಕ್ಕೆ ಮೇಲಿಂದ ಮೇಲೆ ಒದಗುತ್ತಿರುವ ವಿಪತ್ತುಗಳನ್ನು ನೆನೆದು ತುಂಬಾ ನೊಂದುಕೊಂಡರು. ಆ ವೇಳೆಯಲ್ಲಿ ಶಂಕರಮ್ಮನನ್ನು ಕಾಣಲು ಯಾರೋ ಹೊಸಬರೊಬ್ಬರು ಬಂದರು. ಅವರನ್ನು ನೋಡುತ್ತಲೇ ಸುಮಿತ್ರೆ ಶೈಲಜೆಯನ್ನು ಕೇಳಿದಳು.

" ಶೈಲಜಾ, ಯಾರೇ ಅವರು ? "

" ಅವರ ಹೆಸರು ಶಾರದಮ್ಮ ಅಂತ. ಅವರು ಬೆಂಗಳೂರಿನವರಂತೆ. ಮೊನ್ನೆ ತಾನೇ ಬಂದರು. ನಮ್ಮ ಮನೆ ಒಂದು ಖಾಲಿ ಇತ್ತಲ್ಲ—ಅದಕ್ಕೆ ಬಾಡಿಗೆಗೆ ಬಂದಿದ್ದಾರೆ. ತುಂಬಾ ಒಳ್ಳೆಯವರು. " ಎಂದಳು ಶೈಲಜೆ.

ಶಂಕರಮ್ಮ ಶಾರದೆಯನ್ನೇ ತದೇಕ ದೃಷ್ಟಿಯಲ್ಲಿ ನೋಡುತ್ತಿದ್ದ ಸುಮಿತ್ರೆಯನ್ನು ಪರಿಚಯ ಮಾಡಿಕೊಟ್ಟಳು. ಅನಂತರ—

" ನೋಡಿ ಶಾರದಮ್ಮ— ಇವಳು ಸುಮಿತ್ರೆ ಅಂತ. ನಿಮಗೆ ಹೇಳ್ತಿದ್ದೆನಲ್ಲ ಯಾರೋ ಜಾರಿ ಬಿದ್ದು ಕಾಲು ಮುರಿದುಕೊಂಡ್ರು ಅಂತ–ಅವರ ಮಗಳು. ಇವಳೂ ನಮ್ಮ ಶೈಲಜೆಯೂ ಒಂದೇ ಕ್ಲಾಸು. ಅವರ ತಾಯಿಯೂ ನಾನೂ ಒಂದೇ ಊರಿನವರು........ನೀವು ಬೇಜಾರು ಕಳೆಯೋಕ್ಕೆ ಅಂತ ಇಲ್ಲಿಗೆ ಬಂದ್ರಿ. ಆದರೆ ನೀವು ಏನೂ ತಿಳಿದುಕೊಳ್ಳದೆ ಇದ್ದರೆ, ನಾನು ಇವರ ಮನೆತನಕ ಹೋಗಿ ಬರಬೇಕೂಂತ ಇದ್ದೇನೆ. ಇವರ ಮನೆಯಲ್ಲಿ ಎಲ್ಲರಿಗೂ ಕಾಹಿಲೆ. ನೋಡಿಕೊಳ್ಳೋರೆ ದಿಕ್ಕಿಲ್ಲ. ಇವಳೇ ಸದ್ಯಕ್ಕೆ ಮನೆಗೆ ಯಜಮಾನಿ ! ಇವಳಿಂದ ಏನು ಆಗುತ್ತೆ ಪಾಪ! ಇವರ ತಂದೆ ಭಾವಿಯಿಂದ ನೀರು ತರ್ತಿರೋವಾಗ ಜಾರಿ ಬಿದ್ದರಂತೆ. ಎಲ್ಲಿ ಗಾಯವಾಯಿತೋ, ಎಲ್ಲಿ ನರ ಹೊರಳಿತೋ, ಅಂತೂ ಬಹಳ ನರಳುತ್ತಿದ್ದಾರಂತೆ. ಕಷ್ಟಗಳು ಬಂದರೆ ಹೀಗೇನೇ. ಎಲ್ಲ ಒಟ್ಟಿಗೆ ಧಾಳಿ ಇಡುತ್ವೆ.... " ಎಂದು ಅನುಕಂಪದಿಂದ ಮಾತನಾಡಿದರು ಶಂಕರಮ್ಮ. ಅವರಿಗೆ ಶಾರದೆಯನ್ನು ಬಿಟ್ಟುಹೋಗಲು ಮನಸ್ಸಿಲ್ಲ, ಅಲ್ಲೇ ಇರಲೂ ಮನಸ್ಸಿಲ್ಲ. ಈ ಜಿಜ್ಞಾಸೆಯಲ್ಲಿರುವಾಗ ಶಾರದೆ ಹೇಳಿದಳು—

" ನೀವೇನು ಯೋಚಿಸಬೇಡಿ ಶಂಕರಮ್ಮ. ನನಗೆ ಮನೇಲಿ ಬೇಜಾರಾಯಿತು—ಹಾಗೇನೇ ಮಾತನಾಡಿಸಿಕೊಂಡು ಹೋಗಲು ಬಂದೆ. ಇನ್ನೂ ಈ ಊರಿಗೆ ಬಂದು ಹೊಸದು. ಇಲ್ಲಿನ ಜನರ ಪರಿಚಯವಿಲ್ಲ. ನನಗೋ ಎಂದೂ ಒಬ್ಬೊಂಟಿಯಾಗಿದ್ದು ರೂಢಿಯೇ ಇಲ್ಲ. ಅಂತಲೇ ಇಲ್ಲಿಗೆ ಬಂದೆ. ನೀವು ಅವರ ಮನೆಗೆ ಹೋಗುವುದಾದರೆ—ಹೋಗಿ ಬನ್ನಿ. ನಾನು ನಿಮ್ಮ ಶೈಲಜೆ ಜತೆಯಲ್ಲಿ ಮಾತನಾಡುತ್ತಿರುತ್ತೇನೆ"—ಎಂದಳು.

" ಹಾಗಾದರೆ ನೀವು ಇಲ್ಲೇ ಇರ್ತಿರಾ ? ನಾನು ಸುಮಿತ್ರೆ ಜತೆಯಲ್ಲಿ ಹೋಗಿ ಬಂದು ಬಿಡ್ತೀನಿ— " ಎಂದು ಮಗಳ ಕಡೆ ನೋಡಿದರು ಶಂಕರಮ್ಮ.

ತಾಯಿಯೊಂದಿಗೆ ಸುಮಿತ್ರೆ ಹೊರಟುನಿಂತುದನ್ನು ಕಂಡು ಶೈಲಜೆಗೆ ಹೊಸಬಳಾದ ಶಾರದೆಯೊಂದಿಗೆ ಇರಲು ಸಂಕೋಚವಾಯಿತೋ ಏನೋ ಅವಳು—

" ಅಮ್ಮಾ s " ಎಂದು ಮೆಲ್ಲನೆ ರಾಗ ತೆಗೆದಳು.

" ಏನು ಶೈಲು ? "

" ನಾನೂ ಬರ್‍ತಿನಮ್ಮ ಸುಮಿತ್ರೆ ಮನೆಗೆ ! "

" ಬೇಡಮ್ಮ ಮಳೆ ಬರ್‍ತಿದೆ—ನೀನು ಯಾಕೆ ನೆನಿಬೇಕು. ನಾವು ಬೇಗನೆ ಬಂದು ಬಿಡ್ತೇವೆ—ಇನ್ನೊಂದು ಅರ್ಧ ಗಂಟೇಲಿ. "

ಈ ಮಾತನ್ನು ಕಿವಿಯ ಮೇಲೆ ತಂದುಕೊಳ್ಳದೆ ಶೈಲಜೆ ತಾಯಿಯೊಂದಿಗೆ ತಾನೂ ಬರಲು ಹಠ ಮಾಡಿದಳು. ಆಗ ಶಾರದೆಗೆ ಅದೇನು ಅನಿಸಿತೋ ಅವಳು " ಹೇಗೂ ನನಗೂ ಮಾಡಲು ಬೇರೆ ಕೆಲಸವಿಲ್ಲ. ಬನ್ನಿ ನಾನೂ ನಿಮ್ಮೊಂದಿಗೇ ಬರುತ್ತೇನೆ. ನಿಮಗೆ ಬೇಕಾದ ಆ ವ್ಯಕ್ತಿಯನ್ನು ನೋಡಲು—ಅವರ ಪರಿಚಯವನ್ನು ಮಾಡಿಕೊಳ್ಳಲು ನನಗೂ ಆಸೆ ಇದೆ. " ಎಂದು ಹೇಳಿ ಸುಮಿತ್ರೆಯ ಮನೆಗೆ ಹೋಗಲು ತಾನಾಗಿ ಮುಂದಾದಳು.

ಶಾರದೆಯ ರಕ್ತದಲ್ಲಿ ಸ್ನೇಹ, ನಿರ್ಮಲಾಂತಃಕರಣ, ದೀನ ದಲಿತರ ಸೇವೆ, ಕಷ್ಟಪಡುವವರ ಬಗ್ಗೆ ಅನುಕಂಪ ಸಹಾನುಭೂತಿಗಳು—ಸಹಜವಾಗಿ ಬೆರೆತು ಬಂದಿದ್ದ ಗುಣಗಳು. ಅವಳಿಗೆ ಸುಮಿತ್ರೆಯ ಮನೆಯವರನ್ನು ನೋಡದೆ ಇದ್ದರೂ ಅವರ ಕಷ್ಟಗಳ ಬಗ್ಗೆ ಸಹಾನುಭೂತಿ ಉಂಟಾಗಿತ್ತು. ಶಾರದೆ ಅವರ ಮನೆಗೆ ಬಾಡಿಗೆಗೆ ಬಂದ ಲಾಗಾಯಿತು ಅವಳ ನಡೆನುಡಿಗಳನ್ನು

ನೋಡಿ ಶಂಕರಮ್ಮನಿಗೆ ಶಾರದೆಯ ಬಗ್ಗೆ ಪ್ರೀತಿ ಗೌರವಗಳು ಉಂಟಾಗಿದ್ದವು. ಶಂಕರಮ್ಮ ಹೆಚ್ಚಿನ ದಾಕ್ಷಿಣ್ಯವಿಲ್ಲದೆ ಶಾರದೆಯನ್ನು ತಮ್ಮೊಡನೆ ಕರೆದುಕೊಂಡು ಸುಮಿತ್ರೆಯ ಮನೆಗೆ ಹೊರಟರು.

ಹೊರಗೆ ಮಳೆ ಹುಯ್ಯುವುದು ಕೊಂಚ ನಿಂತಿತ್ತು. ಆದರೂ ಸೂರ್ಯನ ಮುಖವನ್ನೇ ಹತ್ತಾರು ದಿನಗಳಿಂದ ಕಾಣದಿದ್ದ ಜನಕ್ಕೆ ಮಳೆಯ ಶೀತಲಮಾರುತ ಮೈಯನ್ನು ಗಡಗಡ ನಡುಗಿಸುತ್ತಿತ್ತು. ರಸ್ತೆಗಳೆಲ್ಲ ಕೆಸರಿನಿಂದ ಮುಚ್ಚಿ ಹೋಗಿ ನಡೆವವರಿಗೆ ಕೆಸರಿನ ಸ್ನಾನ ಮಾಡಿಸುತ್ತಿತ್ತು. ವೆಂಕಪ್ಪಯ್ಯನ ಮನೆ ಇದ್ದುದು ಟಾರು ಕಾಣದ ಸಂದಿಯಲ್ಲಿ. ಅಲ್ಲಿನ ರಸ್ತೆಯಲ್ಲಿ ಸಂತತವಾಗಿ ಸುರಿದ ಮಳೆಯಿಂದಾಗಿ ಹಳ್ಳಕೊಳ್ಳಗಳಲ್ಲಿ ಮಳೆನೀರು ನಿಂತು ಸಣ್ಣಪುಟ್ಟ ಕೆರೆಗಳಾಗಿ ಮಾರ್ಪಟ್ಟಿತ್ತು. ಇದರಲ್ಲಿ ನಿರ್ವಾಹವಿಲ್ಲದೆ ಈಜುತ್ತಾ ಬಟ್ಟೆಗಳನ್ನು ತೋಯಿಸಿಕೊಳ್ಳುತ್ತಾ ಸುಮಿತ್ರೆ, ಶಂಕರಮ್ಮ, ಶಾರದೆಯರು ಮನೆಗೆ ಬಂದರು.

ಶಂಕರಮ್ಮ ಮನೆಗೆ ಬಂದವರೇ ಸುಮಿತ್ರೆ ತಂದಿತ್ತ ನೀರಿನಲ್ಲಿ ಕಾಲು ತೊಳೆದುಕೊಂಡು ಅಲ್ಲೇ ಹಾಸಿದ್ದ ಜಮಖಾನೆಯ ಮೇಲೆ ಕುಳಿತು ಸೀತಮ್ಮನ ಆರೋಗ್ಯ ವಿಚಾರಿಸಿಕೊಂಡರು. ತನ್ನೊಡನೆ ಬಂದಿದ್ದ ಶಾರದೆಯ ಪರಿಚಯ ಅವರಿಗೆ ಮಾಡಿಕೊಟ್ಟರು.

ಶಾರದೆಗೆ ಕೊಂಚ ನಾಟಿವೈದ್ಯ-ಮೂಲಿಕೆಗಳ ವಿಷಯ ತನ್ನ ತಾಯಿಯ ಮೂಲಕ ತಿಳಿದಿತ್ತು. ಅವಳು ಕೂಡಲೇ ವೆಂಕಪ್ಪಯ್ಯನ ಮನೆಯವರು ಅಪರಿಚಿತರೆಂದು ತಿಳಿಯದೆ, ವೆಂಕಪ್ಪಯ್ಯ ದಾಕ್ಷಿಣ್ಯಪಟ್ಟರೂ ಬಿಡದೆ, ಏಟು ಬಿದ್ದ ಭಾಗಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಅದಕ್ಕೆ ಚಿಕಿತ್ಸೆ ನಡೆಸಲು ಮುಂದಾದಳು. ದೇವರ ದಯದಿಂದ ಶರೀರದ ಯಾವ ಭಾಗದಲ್ಲಿಯೂ ಮೂಳೆಗಳು ಮುರಿದಿರಲಿಲ್ಲ. ಮೊಣಕಾಲು, ಮೊಳಕ್ಕೈ ಭಾಗದಲ್ಲಿ ಮಾಂಸಖಂಡಗಳಿಗೆ ಸ್ವಲ್ಪ ಏಟು ಬಿದ್ದುದರಿಂದ ಅವುಗಳು ಊದಿಕೊಂಡಿತ್ತು. ಒಂದೆರಡು ಕಡೆ ನರಗಳು ಹೊರಳಿ ಬಿಟ್ಟಿದ್ದುದರಿಂದ ನೋವು ಕಾಣಿಸಿಕೊಂಡಿತ್ತು.

ಶಾರದೆ ತನಗೆ ತಿಳಿದಿದ್ದ ಯಾವುದೋ ನಾರು ಬೇರುಗಳನ್ನು ತರಿಸಿ, ಅವುಗಳ ರಸವನ್ನು ಏಟು ತಿಂದ ಭಾಗಗಳಿಗೆ ಸವರಿ, ಅನಂತರ ಸುದ್ದೆಯನ್ನು ಪ್ಲಾಸ್ಟರ್ ಮಾಡಿ, ವಿಶ್ರಾಂತಿ ತೆಗೆದುಕೊಳ್ಳಲು ಹೇಳಿದಳು. ಅವರು ಅಲ್ಲಿ ಇದ್ದಂತೆಯೇ ಸುಮಿತ್ರೆ ಅವರಿಬ್ಬರಿಗೂ ಟೀ ಮಾಡಿಕೊಟ್ಟಳು. ಸೀತಮ್ಮನ

ಹಾಗೂ ಸುಮಿತ್ರೆಯ ಪ್ರೀತಿಗಾಗಿ ಅವರು ಟೀ ಕುಡಿಯಬೇಕಾಯಿತು. ವೆಂಕಪ್ಪಯ್ಯನ ಪಾಲಿಗೆ ಕಾಫಿ ಟೀಗಳು ನಿಷಿದ್ಧಪಾನವಾದರೂ ಸುಮಿತ್ರೆ ಎಂದಾದರೂ ಬೇಕೆನಿಸಿದಾಗ ಮಾಡಿಕೊಳ್ಳಲು ತನ್ನ ಪೆಟ್ಟಿಗೆಯಲ್ಲಿ ಒಂದೆರಡು ಟೀ ಪೊಟ್ಟಣ ಇಟ್ಟುಕೊಂಡು ಇರುತ್ತಿದ್ದಳು. ಅದು ಇಂದು ಉಪಯೋಗಕ್ಕೆ ಬಂದಿತ್ತು.

ಶಾರದೆ, ಶಂಕರಮ್ಮನವರು ಅವರ ಮನೆಯಿಂದ ಹೊರಟು ಹೋದ ಮೇಲೆ ಮನೆಯಲ್ಲಿ ಸೀತಮ್ಮ, ವೆಂಕಪ್ಪಯ್ಯ, ಸುಮಿತ್ರೆಯರ ನಡುವೆ ಶಾರದೆಯದೇ ಮಾತು ನಡೆಯಿತು. ಶಾರದೆಯನ್ನು ಅವರು ಯಾರೂ ಈತನಕ ಕಂಡಿರದಿದ್ದರೂ, ಅವಳು ಮನೆಯವಳೆಂಬಂತೆ ಸ್ವತಂತ್ರ ತೆಗೆದುಕೊಂಡು ವೆಂಕಪ್ಪಯ್ಯನಿಗೆ ಉಚಿತವಾದ ವೈದ್ಯೋಪಚಾರ ಮಾಡಿದ್ದುದು ಅವಳ ದೊಡ್ಡತನ ತೋರಿಸಿತ್ತು. ಶಾರದೆಯ ಸರಳವಾದ ನಡೆನುಡಿ ಅವಳ ಸೌಜನ್ಯಗಳಿಗಾಗಿ ಅವರೆಲ್ಲರೂ ಮಾರುಹೋಗಿದ್ದರು.

## ೨

ಬೆಂಗಳೂರಿನಿಂದ ಮುಂಡಿ ಮುದ್ದಣ್ಣನವರ ಕಾಫಿ ಗಡಂಗನ್ನು ನೋಡಿಕೊಳ್ಳಲು ಬಂದಿದ್ದ ಕಿಟ್ಟಣ್ಣ ಶಾರದೆಯರು ಮಡಿಕೇರಿಯ ಜನಜೀವನದಲ್ಲಿ ಬಹು ಬೇಗನೆ ಬೆರೆತು ಹೋದರು. ಕಿಟ್ಟಣ್ಣ ಸಂಸಾರ ಹೂಡುವುದಕ್ಕಿಂತ ಮುಂಚೆ ಮಡಿಕೇರಿಗೆ ಬಂದು ಅಲ್ಲಿನ ಶಾಂತಮಲ್ಲಯ್ಯನವರ ಮನೆಯೊಂದನ್ನು ಬಾಡಿಗೆಗೆ ಗೊತ್ತು ಮಾಡಿ ಅನಂತರ ಶಾರದೆಯನ್ನು ಕರೆತಂದಿದ್ದ.

ಮಡಿಕೇರಿಗೆ ಬಂದ ಕೆಲವು ದಿನ ಶಾರದೆಗೆ ಮಡಿಕೇರಿಯಲ್ಲಿ ಹೊತ್ತು ಹೋಗುವುದೇ ಕಷ್ಟವಾಗಿತ್ತು. ಕಿಟ್ಟಣ್ಣನಾದರೋ ಬೆಳಿಗ್ಗೆ ಎದ್ದು ಸ್ನಾನ ಮಾಡಿ ತಿಂಡಿ ತಿಂದು ಗಡಂಗಿಗೆ ಹೊರಟು ಹೋದನೆಂದರೆ ಅಂಗಡಿಯಿಂದ ಹಿಂದಿರುಗುತ್ತಿದ್ದುದು ಮಧ್ಯಾಹ್ನ ಊಟದ ವೇಳೆಗೇ. ಅಲ್ಲಿನ ತನಕ ತನ್ನ ಅಡಿಗೆ ಕೆಲಸಗಳನ್ನು ಮುಗಿಸಿ ಗಂಡನಿಗಾಗಿ ಎದುರು ನೋಡುತ್ತಿರುವುದೇ ಶಾರದೆಯ ಕೆಲಸ. ಕಿಟ್ಟಣ್ಣ ಊಟ ಮಾಡಿ ಕೊಂಚ ಹೊತ್ತು ವಿಶ್ರಾಂತಿ ತೆಗೆದು

ಕೊಂಡು ಮತ್ತೆ ಹೊರಟುಹೋದನೆಂದರೆ ರಾತ್ರಿಯೇ ಅವನ ಮುಖದರ್ಶನ. ಅಲ್ಲಿಯ ತನಕ ಹೇಗೆ ಹೊತ್ತು ಕಳೆಯಬೇಕೆನ್ನುವುದು ಶಾರದೆಗೆ ಸಮಸ್ಯೆಯಾಯಿತು. ಅವಳಿಗೋ ಸದಾ ಜನರ ನಡುವೆ ಇದ್ದು ರೂಢಿ. ಪರಸ್ಥಳವಲ್ಲಿ ಪರಿಚಿತರು ಇರಲಿಲ್ಲ. ಆದರೇನಂತೆ ಕಣ್ಣು ಕುರುಡಾದರೆ ಬಾಯಿ ಕುರುಡೇ? ಎಲ್ಲರಲ್ಲಿ ಒಂದಾಗಿ ಬೆರೆಯಬಲ್ಲ, ಎಲ್ಲರ ಕಷ್ಟ ಸುಖಗಳನ್ನು ತನ್ನವೆಂದು ತಿಳಿಯುವ ಶಾರದೆಗೆ ಸ್ನೇಹಿತರನ್ನು ಮಾಡಿಕೊಳ್ಳುವುದು ಒಂದು ಕಷ್ಟದ ಕೆಲಸವೇ?

ಶಾರದೆ ಮಡಿಕೇರಿಗೆ ಬಂದ ದಿನವೇ ಶಾಂತಮಲ್ಲಯ್ಯನವರ ಪತ್ನಿ ಶಂಕರಮ್ಮನವರ ಪರಿಚಯ ಮಾಡಿಕೊಂಡಿದ್ದಳು. ಅವರ ಮೂಲಕ ಸೀತಮ್ಮನ ಸಂಸಾರದ ಪರಿಚಯವಾಗಿತ್ತು. ದಿನ ಕಳೆದಂತೆ ಅವಳಿಗೆ ಮಡಿಕೇರಿಯ ಅನೇಕ ಸದ್ಗೃಹಿಣಿಯರ ಪರಿಚಯವಾಯಿತು. ಶಾರದೆಯ ಜೀವನವೇ ಹಾಗೆ. ಅವಳ ಸ್ವಭಾವವೇ ಅಂತಹದು. ಅವಳು ಇದ್ದಕಡೆ ಬೆಲ್ಲಕ್ಕೆ ಇರುವೆ ಮುತ್ತುವಂತೆ ಅವಳ ಸುತ್ತ ಗೆಳತಿಯರು ಸೇರುತ್ತಿದ್ದರು. ಎಲ್ಲರೊಡನೆ ಸಹಜವಾಗಿ ಬೆರೆತು ಅವರ ಆತ್ಮೀಯ ಗೆಳತಿ, ತಾಯಿ, ತಂಗಿಯಾಗಿ ಬಿಡುತ್ತಿದ್ದಳು. ಇದು ತನ್ನದು, ಇದು ಪರರದು ಎನ್ನುವ ತಾರತಮ್ಯಜ್ಞಾನವೇ ಇರಲಿಲ್ಲ. ದುಃಖಿಗಳೂ, ದೌರ್ಭಾಗ್ಯರೂ, ಕಷ್ಟಪರಂಪರೆಯಲ್ಲಿ ನರಳುವವರೂ ಅವಳ ಭಾಗಕ್ಕೆ ದೇವರ ಸಮಾನ. ಅವರಿಗಾಗಿ ತನ್ನಿಂದಾಗುವ ಎಲ್ಲವನ್ನು ಮಾಡಲು ಅವಳು ಸಿದ್ಧಳು.

ಶಾರದೆಯೂ ತನ್ನ ಜೀವನದಲ್ಲಿ ತುಂಬಾ ನೊಂದಿದ್ದ ವ್ಯಕ್ತಿ. ನೋವಿನ ಆಳ ಅವಳಿಗೆ ಗೊತ್ತಿತ್ತು. ಅವಳಿಗೂ ಎಲ್ಲರಂತೆ ಬಾಲ್ಯದಲ್ಲಿಯೇ ಮದುವೆಯಾಗಿತ್ತು. ಗಂಡ ಅವಳು ಕಪ್ಪು ಹುಡುಗಿಯೆಂದು ಪರಿಪರಿಯಾಗಿ ಗೋಳಾಡಿಸಿದ್ದ. ಮದುವೆಯಾದ ಮರುಗಳಿಗೆಯಲ್ಲಿ ಹೆಂಡತಿಯನ್ನು ತೊರೆದು ಹೊಗಿದ್ದವನು ನಾಲ್ಕು ವರ್ಷಗಳ ಕಾಲ ಹೆಂಡತಿಯ ಮುಖ ನೋಡಿರಲಿಲ್ಲ. ಅನಂತರ ಯಾರದೋ ಸಂಧಾನದ ಫಲವಾಗಿ ಹೆಂಡತಿಯ ಜತೆಯಲ್ಲಿ ಕೆಲವು ಕಾಲ ಸಂಸಾರ ಮಾಡಿಕೊಂಡಿದ್ದು ಕಡೆಗೆ ಯಾವಳೋ ಎಟ್ಟೆ ಹೆಂಗಸಿನ ಮೋಹದ ಬಲೆಗೆ ಬಿದ್ದು, ಹೆಂಡತಿ ಮಕ್ಕಳನ್ನು ನಿರ್ಲಕ್ಷಿಸಿ, ಅವರನ್ನು ಬೀದಿಯ ಪಾಲು ಮಾಡಿದ್ದ. ಜತೆಗೆ ಅವರಿಗೆ ಸಲ್ಲದ ಅಪವಾದಗಳನ್ನು ತಂದಿದ್ದ. ಇಲ್ಲಿಯ ತನಕ

ಸುಮ್ಮನಿದ್ದ ಶಾರದೆಗೆ ಇನ್ನು ಸುಮ್ಮನಿರಲಾಗಲಿಲ್ಲ. ತಾನು ನಿಷ್ಕಳಂಕಳಾಗಿದ್ದರೂ ತನ್ನ ಮೇಲೆ ಕೆಟ್ಟ ನಡತೆಯ ಆರೋಪ ಹೊರಿಸಿದ ಲಜ್ಜೆಶೂನ್ಯ ಗಂಡ ರಾಮಚಂದ್ರನ ಮೇಲೆ ಸೇಡು ತೀರಿಸಿಕೊಳ್ಳುವ ಸಲುವಾಗಿ, ಅವನಿಂದ ದಾಂಪತ್ಯ-ವಿಚ್ಛೇದನೆ ಪಡೆದು ತನಗೆ ಎಲ್ಲ ರೀತಿಯಲ್ಲಿ ಆದರ್ಶಪತಿಯಾಗಿದ್ದ ಕಿಟ್ಟಣ್ಣನನ್ನು ಶಾಸ್ತ್ರೋಕ್ತವಾಗಿ ಮತ್ತೆ ಮದುವೆಯಾಗಿದ್ದಳು.

ಜೀವನದಲ್ಲಿ ಗಂಡಿನ ಕೈಗೆ ಸಿಕ್ಕಿ ತನಗಿಂತಲೂ ನೂರ್ಮಡಿ ಬೆಂದ, ನೊಂದ ಅಭಾಗಿನಿಯರ ಮೂಕ ವೇದನೆಯನ್ನು ಶಾರದೆ ಮಾರ್ದನಿಸಿದ್ದಳು, ಗಂಡನ ಅನ್ಯಾಯಗಳನ್ನು ಎದುರಿಸುವ ಮೂಲಕ ಹೆಣ್ಣಿನ ಅಂತಃಸತ್ವವನ್ನು ಪರಿಚಯ ಮಾಡಿಕೊಟ್ಟಿದ್ದಳು. ಅವಳು ಸ್ತ್ರೀ ಜಗತ್ತಿನ ಎಲ್ಲ ಆಸೆ ಆಕಾಂಕ್ಷೆಗಳ ಪ್ರತಿಧ್ವನಿಯಂತಿದ್ದಳು............

ಗಂಡನಿಂದ ತನಗಾದ ಅನ್ಯಾಯಗಳನ್ನು ಜನ್ಮಾಂತರದ ಫಲಗಳ ಗಂಟಿಗೆ ಸೇರಿಸಿ ಎಲ್ಲವನ್ನೂ ಅತೀವ ಸೈರಣೆಯಿಂದ ವಿಧಿಯಿಲ್ಲದೆ ನುಂಗಿಕೊಳ್ಳುವ ಹೆಣ್ಣಲ್ಲ ಶಾರದೆ. ಹೆಣ್ಣಿನ ಆ ಬಗೆಯ ಪ್ರತಿಕ್ರಿಯೆಯಿಂದ ಗಂಡು ಪಾಠ ಕಲಿಯುವ ಬದಲು ಮತ್ತಷ್ಟು ದುಷ್ಟನಾಗಿದ್ದಾನೆ. ಗಂಡು ತನ್ನ ದುಷ್ಕೃತ್ಯಗಳಲ್ಲಿ ತಿದ್ದಲಾರದಷ್ಟು ಮುಂದುವರೆದಾಗ ಸಮಾಜ ಎಚ್ಚೆತ್ತು ಮಾನವತೆಯ ದೃಷ್ಟಿಯಲ್ಲಿ ವಿಚಾರ ಮಾಡಿ ಹೆಣ್ಣಿನ ಹಲಕೆಲವು ಬೇಡಿಕೆಗಳನ್ನು ಪೂರೈಸಿಕೊಟ್ಟರೂ ಆ ಬಗೆಯ ದಯಾಭಿಕ್ಷೆ ಹೆಣ್ಣಿಗೆ ಬೇಕಿಲ್ಲ............

ಹೆಣ್ಣು ಗಂಡಿಗಿಂತಲೂ ಯಾವುದರಲ್ಲಿಯೂ ಕೀಳಲ್ಲ! ಅವಳು ಇನ್ನೊಬ್ಬರ ನೆರವಿಲ್ಲದೇ ತನ್ನ ಹಕ್ಕು ಬಾಧ್ಯತೆಗಳನ್ನು ದಕ್ಕಿಸಿಕೊಳ್ಳಬಲ್ಲಳು. ಅವಳನ್ನು ಲೋಲುಪ ಜೀವಿಯನ್ನಾಗಿ ಮಾಡಿ, ಅವಳ ನಿಜವಾದ ಸ್ವರೂಪವನ್ನು ಮರೆಸಿ, ತನ್ನ ಭೋಗತೃಪ್ತಿಗಾಗಿ ಅವಳನ್ನು ಉಪಯೋಗಿಸಿಕೊಂಡಿರುವ ಗಂಡಿನ ಜಾಣ್ಮೆಗೆ ಭಲಾ! ಎನ್ನಲೇಬೇಕು. ಇನ್ನುಮೇಲೆ ಅಂತಹ ಆಟ ನಡೆಯದು! ಹೆಣ್ಣನ್ನು ಗಂಡು ತನ್ನ ಸುಖದುಃಖಗಳಲ್ಲಿ ಪಾಲುಗೊಳ್ಳುವ ಇಹಪರಗಳ ಜತೆಗಾತಿ ಎಂದು ತಿಳಿದರೆ ಮಾತ್ರ ಗಂಡಿನ ಉದ್ಧಾರ! ಗಂಡು ಸಕಾಲದಲ್ಲಿ ಎಚ್ಚೆತ್ತುಕೊಳ್ಳದಿದ್ದರೆ ಸೃಷ್ಟಿ ಸ್ಥಿತಿಗಳ ಕಾರ್ಯದಲ್ಲಿ ತೊಡಗಿರುವ ಹೆಣ್ಣು ಇನ್ನು ಲಯಕಾರ್ಯಕ್ಕೆ ಕೈಯಿಕ್ಕಬೇಕಾದೀತು! ಈ ಮಾರಣ ಹೋಮದಲ್ಲಿ ಮಾನವ ಸಂತಾನ ನಶಿಸಿ ಹೋದೀತು!

ಇಂತಹ ಕ್ರಾಂತಿಕಾರಕ ವಿಚಾರಧಾರೆಯುಳ್ಳ ಶಾರದೆ ಬಹು ಬೇಗನೆ, ಹೆಣ್ಣಿನ ಸಂಘಟನೆಯಾಗದ ಹೊರತು, ಸುವ್ಯವಸ್ಥಿತ ಯುದ್ಧ ಮುಖ ರಚಿಸಿ ಕೊಳ್ಳದ ಹೊರತು ಏನನ್ನೂ ಸಾಧಿಸಲಾಗದೆಂದು ಅರಿತುಕೊಂಡು ರಚನಾತ್ಮಕ ಕಾರ್ಯಗಳಿಗೆ ಮನಸ್ಸು ಕೊಟ್ಟಳು. ಶಾರದೆಗೆ ಹೆಣ್ಣಿನ ಸಂಘಟನೆಯು, ಸ್ತ್ರೀ ಸಮಾಜ, ವನಿತಾ ಸದನ, ಅಕ್ಕನ ಬಳಗ ಮೊದಲಾದ ಮಧ್ಯಮ ವರ್ಗದ ಹೆಣ್ಣುಮಕ್ಕಳಿಂದ ನಡೆಸುವ ಸಂಸ್ಥೆಗಳಿಂದ ಆಗದೆಂದು ಪೂರಾ ನಂಬಿಕೆ! ಯಾಕೆಂದರೆ ಈ ಬಗೆಯ ಸಂಸ್ಥೆಗಳು ಸುಖಜೀವಿಗಳಾದ ಹೆಂಗಸರು ವಿನೋದ ವಾಗಿ ಹೊತ್ತುಕಳೆಯಲು ಹುಟ್ಟಿಕೊಂಡ ಸಂಸ್ಥೆಗಳು. ಅವಕ್ಕೆ ಹೆಣ್ಣಿನ ನಿಜ ವಾದ ಕಷ್ಟ, ಸುಖ, ನಿಷ್ಟುರಗಳ ಅರಿವಿಲ್ಲ. ಅರಿವಿದ್ದರೂ ಅವುಗಳ ನಿವಾರಣೋ ಪಾಯದ ಹಾದಿಯಲ್ಲಿ ತಪ್ಪುಹೆಜ್ಜೆ ಇಟ್ಟ ಸಂಸ್ಥೆಗಳು ಅವು.

ಕೆಲವು ಮುಂದುವರೆದ ಸ್ತ್ರೀಸಂಘಗಳು ಸ್ತ್ರೀ ವಿದ್ಯಾಭ್ಯಾಸ, ಸಾಹಿತ್ಯ ಸಂಗೀತಗಳಲ್ಲಿ ಹೆಣ್ಣುಮಕ್ಕಳಿಗೆ ಪ್ರೋತ್ಸಾಹ, ಕೆಲವು ಬಗೆಯ ಉಪಜೀವನ ಮಾರ್ಗ, ಗೃಹಿಣಿ ಶಿಕ್ಷಣ, ಗೃಹವೈದ್ಯ ಇವೇ ಮೊದಲಾದ ವಿಷಯಗಳಲ್ಲಿ ಉಪ ಯುಕ್ತ ತಿಳುವಳಿಕೆ ಜ್ಞಾನವನ್ನು ಹರಡಲು ಶ್ರಮಿಸುತ್ತಿದ್ದರೂ, ಹೆಣ್ಣಿನ ತೊಡಕು ಸಮಸ್ಯೆ ಇಲ್ಲಿಗೇ ಮುಗಿಯದು. ವಿಧವಾ ವಿವಾಹ, ಪ್ರೌಢವಿವಾಹ, ಹೆಣ್ಣಿನ ಆರ್ಥಿಕ ಸ್ವಾತಂತ್ರ್ಯ, ಶಿಕ್ಷಣ ಸ್ವಾತಂತ್ರ್ಯ, ವ್ಯಕ್ತಿ ಸ್ವಾತಂತ್ರ್ಯ, ವಿವಾ ಹದ ದುಷ್ಟಪದ್ಧತಿಗಳು— ವರದಕ್ಷಿಣೆ, ವಧುವಿಕ್ರಯ, ವಿವಾಹದ ತೊಡಕುಗಳು, ಬಲವಂತ ವಿವಾಹ, ಒಲವಿನ ಕೊಲೆ, ಗಂಡುಹೆಣ್ಣಿನ ಸಮಸ್ಯೆ, ವಿಕೃತ ಕಾಮ ತೃಷೆಗೆ ಬಲಿಯಾದ ಹೆಣ್ಣಿನ ವೇದನೆ, ಬಲವಂತದ ತಾಯಿತನದ ಹೊಣೆಗಾ ರಿಕೆ, ವ್ಯಭಿಚಾರ, ಸೂಳೆಗಾರಿಕೆ, ಅನಾಥ ಬಾಲಿಕಾ ರಕ್ಷಣೆ, ಪೋಷಣೆ ಇಂತಹ ನೂರು ಬಗೆಯ ಸಮಸ್ಯೆಗಳು ಇರುವಾಗ ಮನರಂಜನೆ, ಸತ್ಕಾರಕೂಟಗಳನ್ನು ಪ್ರಧಾನ ಕಾರ್ಯಗಳೆಂದು ತಿಳಿದು, ತಮ್ಮ ಸಾಂಘಿಕ ಶಕ್ತಿಯನ್ನು ದುರ್ವಿನಿಯೋಗ ಮಾಡುವ ಸ್ತ್ರೀ ಸಮಾಜಗಳಿಂದ, ಖಂಡಿತ ಸ್ತ್ರೀಜನೋದ್ಧಾರವಾಗದೆಂದು ಶಾರ ದೆಯ ಭಾವನೆ.

ಪ್ರಸಿದ್ಧಿ ಹೊಗಳಿಕೆಗಳಿಗೆ ಬಾಯಿಬಿಡುವ ಕೆಲವು ಸ್ವಾರ್ಥಿಗಳಿಗೆ ಸ್ತ್ರೀ ಸಂಘಗಳು ಬಲಿಯಾಗಿರುವುದನ್ನು ಅರಿತ ಶಾರದೆ ಅಂತಹ ಸಂಸ್ಥೆಗಳ ಪೂಜಾರಿ ಯಾಗಬಯಸಲಿಲ್ಲ. ಆದರೂ ಸಾಂಘಿಕ ಶಕ್ತಿಯಿಂದ ಎಂತಹ ಅಮೂಲ್ಯ

ಕೆಲಸ ಸಾಧಿಸಬಹುದೆಂದು ಅರಿತ ಶಾರದೆ, ಸ್ತ್ರೀಜನೋದ್ಧಾರವನ್ನೇ ಗುರಿ ಯಾಗಿ ಇರಿಸಿಕೊಂಡ ತನ್ನ ಆದರ್ಶದ ಹೊಸಬಗೆಯ ಸಂಸ್ಥೆಯೊಂದನ್ನು ಸ್ಥಾಪಿ ಸಿದಳು. ಅದನ್ನು 'ಹೆಣ್ಣಿನ ಮಂಟಪ' ವೆಂದು ಕರೆದಳು. ಅದಕ್ಕೆ ಆ ಊರಿನ ನಗರ ಸಭಾಧ್ಯಕ್ಷರೂ, ಸುಪ್ರಸಿದ್ಧ ಕಾಫೀ ಪ್ಲಾಂಟರರೂ ಆದ ಮಂಜ ಯ್ಯನವರ ಹೆಂಡತಿ ಅಧ್ಯಕ್ಷಿಣಿಯಾದರು.

ಕಾಫೀ ಪ್ಲಾಂಟರ್ ಮಂಜಯ್ಯನವರು ಇಡೀ ಮಡಿಕೇರಿಗೇ ಬೇಕಾದ ವರು. ಅವರ ಮಾತೆಂದರೆ ಜವಾನರಿಂದ ಕಲೆಕ್ಟರ ವರೆಗೆ ಎಲ್ಲರಿಗೂ ಪಥ್ಯ. ಒಳ್ಳೆಯ ಪರೋಪಕಾರಿ. ಅವರನ್ನು ಬೇಡಿ ಬರಿಗೈಯಲ್ಲಿ ಹಿಂತಿರುಗಿದವನು ಒಬ್ಬನಿಲ್ಲ. ಅವರಿಗೆ ಕೀರ್ತಿ ಗಳಿಸುವ ಆಕಾಂಕ್ಷೆ ಇರದಿದ್ದರೂ, ಊರಿನ ಜನ ಅವರನ್ನು ನಗರಸಭೆಯ ಅಧ್ಯಕ್ಷರನ್ನಾಗಿ ಚುನಾಯಿಸಿ ಗೌರವ ತೋರಿಸಿದ್ದರು. ಇಷ್ಟಾದರೂ ಅವರದು ಎಳೆಯ ಮಗುವಿನ ಸರಳತೆ, ಸೌಜನ್ಯ. ಎಲೆಯ ಮರೆಯ ಕಾಯಾಗಿಯೇ ಇರುವುದರಲ್ಲಿ ಪ್ರೀತಿ.

ಅವರಿಗೆ ತಕ್ಕ ಸಹಧರ್ಮಿಣಿ ಪಾರ್ವತಮ್ಮ. ಗಂಡಹೆಂಡಿರು ತುಂಬಾ ಅನ್ಯೋನ್ಯ. ಅವರ ಮುಪ್ಪತ್ತು ವರ್ಷಗಳ ದಾಂಪತ್ಯ ಜೀವನದಲ್ಲಿ ಒಮ್ಮೆ ಯಾವರೂ ಅವರ ಗೃಹಶಾಂತಿ ಕದಡಿಲ್ಲ. ಅರಮನೆಯಂತಹ ಮನೆ. ಮನೆಯ ತುಂಬಾ ಜನ. ಅವರ ಮೊದಲನೆಯ ಮಗ ಮದರಾಸಿನಲ್ಲಿ ಹಿರಿಯ ಹುದ್ದೆಯ ಲ್ಲಿದ್ದ. ಎರಡನೆಯವನು ಮಡಿಕೇರಿಯಲ್ಲಿಯೇ ನಿಂತು, ತಂದೆಯ ವಹಿವಾಟು ಗಳಲ್ಲಿ ನೆರವಾಗುತ್ತಿದ್ದ. ಮೂರನೆಯ ಹುಡುಗ ಸದಾಶಿವ ಮದರಾಸಿನಲ್ಲಿ ಇಂಜ ನಿಯರಿಂಗ್ ಕಾಲೇಜಿನಲ್ಲಿ ಓದುತ್ತಿದ್ದ.

ಊರಿಗೆಲ್ಲ ಬೇಕಾಗಿದ್ದ ಮಂಜಯ್ಯನವರ ಮನೆಯವರು 'ಹೆಣ್ಣಿನಮಂಟಪ' ದಲ್ಲಿ ಆಸಕ್ತಿ ತೆಗೆದುಕೊಂಡದ್ದು ಶಾರದೆಗೆ ಬಲಭುಜ ಬಂದಂತಾಯಿತು. ಸದ್ಯಕ್ಕೆ ಮಂಟಪಕ್ಕೆ ಸ್ವಂತ ಬಿಡಾರ ಇಲ್ಲದುದರಿಂದ ಪಾರ್ವತಮ್ಮನವರ ಮನೆಯ ಒಂದು ಭಾಗವೇ ಕಾರ್ಯಭವನವಾಯಿತು. 'ಹೆಣ್ಣಿನ ಮಂಟಪ' ಆರಂಭವಾದ ಹೊಸದರಲ್ಲಿ ಮಹಾತ್ಮಾ ಗಾಂಧೀಜಿ ಮಡಿಕೇರಿಗೆ ಬರಲಿದ್ದರು. ಶಾರದೆ ಮುಂದಾಗಿ ಗಾಂಧೀಜಿಗೆ ಕಾಗದ ಬರೆದು 'ಹೆಣ್ಣಿನ ಮಂಟಪ' ಕ್ಕೆ ದರ್ಶನ ಕೊಡಬೇಕೆಂದು ಪ್ರಾರ್ಥಿಸಿದಳು. 'ಆಗಲಿ' ಎಂದು ಗಾಂಧೀಜಿಯ ಉತ್ತರವೂ ಬಂತು. ಭಾರತ ಭಾಗ್ಯ ವಿಧಾತ 'ಹೆಣ್ಣಿನ ಮಂಟಪ'ಕ್ಕೆ ಭೇಟಿ

ಕೊಡುವಾಗ ಅವರನ್ನು ಯೋಗ್ಯ ರೀತಿಯಲ್ಲಿ ಸನ್ಮಾನಿಸಲು ಶಾರದೆ ಪಾರ್ವತಮ್ಮನ ಅಧ್ಯಕ್ಷತೆಯಲ್ಲಿ ಊರಿನ ಹೆಣ್ಣು ಮಕ್ಕಳ ಸಭೆ ಸೇರಿಸಿ ಹೆಣ್ಣು ಮಕ್ಕಳ ಪೂರ್ಣ ಸಹಕಾರ ಬೇಕೆಂದು ಪ್ರಾರ್ಥಿಸಿದಳು.

ಗಾಂಧೀಜಿ ಮಡಕೇರಿಗೆ ಬಂದ ದಿನ ಊರಿನ ಹೆಂಗಸರೆಲ್ಲ ಶುಭ್ರ ವಸನ ಧಾರಿಗಳಾಗಿ, ಶಿಸ್ತಿನಿಂದ ಇದಿರುಗೊಂಡು, ಗಾಂಧೀಜಿ ಹಣೆಗೆ ಕುಂಕುಮವನ್ನಿಟ್ಟು ಆರತಿ ಎತ್ತಿ ಅವರಿಗಾಗಿ ಸಿದ್ಧಪಡಿಸಿದ್ದ ಹಸಿರುವಾಣಿ ಚಪ್ಪರಕ್ಕೆ ಕರೆದೊಯ್ದರು. ಪಾರ್ವತಮ್ಮ ಊರಿನ ಹೆಣ್ಣುಮಕ್ಕಳಪರ, 'ಹೆಣ್ಣಿನಮಂಟಪ'ದ ಪರ ಗಾಂಧೀಜಿಗೆ ಬಿನ್ನವತ್ತಳೆ ಅರ್ಪಿಸಿದರು. ಬಿನ್ನವತ್ತಳೆಗೆ ಉತ್ತರವಾಗಿ ಗಾಂಧೀಜಿ ಒಂದು ಪುಟ್ಟ ಭಾಷಣ ಮಾಡಿದರು.

" ನಾನೇನಾದರೂ ಹೆಣ್ಣಾಗಿ ಹುಟ್ಟಿದ್ದ ಪಕ್ಷದಲ್ಲಿ ಹೆಣ್ಣುಗಂಡಿನ ಭೋಗ ವಸ್ತು ಎನ್ನುವ ಗಂಡಿನ ಮನೋಭಾವದ ವಿರುದ್ಧ ದಂಗೆ ಏಳುತ್ತಿದ್ದೆ. ನೀವು ಗಂಡಿನ ಗುಲಾಮರೆನ್ನುವ ಭ್ರಾಂತಿಯನ್ನು ಬಿಟ್ಟುಬಿಡಿ........ "

" ನೀವು ಗಂಡಿಗಾಗಿ ಸಿಂಗರಿಸಿಕೊಳ್ಳಬಾರದು. ನಿಮ್ಮ ನಿಜವಾದ ಆಕರ್ಷಣೆ ಹೊರಗಿನ ಕೃತಕ ಸಾಧನ ಸಾಮಗ್ರಿಗಳಿಂದ ಆಗದೆ ನಿಮ್ಮ ಹೃದಯದ ಚೆಲುವಿನಿಂದ ಉಂಟಾಗಲಿ. ಆಗ ಗಂಡು ಮಾತ್ರವಲ್ಲ, ಇಡೀ ಮಾನವಕೋಟಿ ನಿಮ್ಮಿಂದ ಆಕರ್ಷಿತವಾಗುತ್ತದೆ........

" ಗಂಡು ಮಾಡಿರುವ ಅನ್ಯಾಯಗಳಲ್ಲೆಲ್ಲಾ ಅತಿ ದೊಡ್ಡ ಅನ್ಯಾಯವೆಂದರೆ ಅವನು ಹೆಣ್ಣನ್ನು ಅಬಲೆಯೆಂದು ಕರೆದಿರುವುದು. ಈ ಮಾತು ಗಂಡು ಆಡಬಾರದ ಮಾತು. ತುಂಬಾ ಅಪಮಾನಕರವಾದ ಮಾತು........

" ವಾಸ್ತವವಾಗಿ ಹೆಣ್ಣು ಗಂಡಿಗಿಂತಲೂ ಪೂಜ್ಯಳೂ, ಪವಿತ್ರಳೂ ಆಗಿದ್ದಾಳೆ. ಅವಳು ಕಷ್ಟಸಹಿಷ್ಣುತೆ, ಮಾನವತೆ, ನಂಬಿಕೆ, ಜ್ಞಾನಗಳ ಮೂರ್ತಿವಾಗಿದ್ದಾಳೆ. ಹೆಣ್ಣು ಪಾಶವೀ ಶಕ್ತಿಯಲ್ಲಿ ಅಬಲೆಯಿರಬಹುದು. ಅವಳು ನೈತಿಕ ಶಕ್ತಿಯಲ್ಲಿ ಗಂಡಿಗಿಂತ ನೂರ್ಮಡಿ ಸಬಲೆ........

" ಹೆಣ್ಣಿನ ಹಕ್ಕು ಬಾಧ್ಯತೆಗಳ ವಿಷಯದಲ್ಲಿ ನಾನು ತುಂಬಾ ಉಗ್ರವಾದಿ. ನನ್ನ ಅಭಿಪ್ರಾಯದಲ್ಲಿ ಹೆಣ್ಣಿಗೆ ಗಂಡಿನಷ್ಟೇ ಹಕ್ಕು ಬಾಧ್ಯತೆಗಳು ಇರಬೇಕು. "

ಇವೇ ಮೊದಲಾದ ಸೂಕ್ತಿ ವಚನಗಳನ್ನು ಕೇಳಿ ನೆರೆದಿದ್ದ ಜನಸಮೂಹ

ಪುಳಕಿತರಾದರು. ಅಲ್ಲಿ ಸೇರಿದ ಹೆಂಗಸರಿಗೆ ಹೊಸ ಹುರುಪು ಬಂದಿತು. ರಾಷ್ಟ್ರಪಿತರೆನಿಸಿಕೊಂಡ ಗಾಂಧೀಜಿಯ ಬಾಯಿಯಲ್ಲಿ ಈ ಮಾತುಗಳು ಬಂದ ಮೇಲೆ ಕೇಳುವುದೇನು ?

ಗಾಂಧೀಜಿ ಹೆಚ್ಚು ಕಾಲ ಮಡಿಕೇರಿಯಲ್ಲಿ ಇರಲು ವೇಳೆಯಿಲ್ಲದುದರಿಂದ ಸಮಾರಂಭವನ್ನು ಸಮಾಪ್ತಗೊಳಿಸಿ ತಮ್ಮ ಕುಲಕಸುಬಿಗೆ ತೊಡಗಿದರು. ಹರಿಜನ ನಿಧಿಗಾಗಿ ಗಾಂಧೀಜಿ ಕೈ ಒಡ್ಡಿದಾಗ ಅಲ್ಲಿದ್ದ ಹೆಂಗಸರು ತಮ್ಮ ಶಕ್ತ್ಯಾನುಸಾರ ಕಾಣಿಕೆ ಅರ್ಪಿಸಿದರು. ಪಾರ್ವತಮ್ಮ ಎಂಟು ಸವರನ್ನಿನ ಚೈನು ಸರವನ್ನು ಕುತ್ತಿಗೆಯಿಂದ ಕಳಚಿ ಗಾಂಧೀಜಿ ಕೈಗಿತ್ತರು. ಈಗ ಶಾರದೆಯ ಪಾಳಿ. ಶಾರದೆ ಕೈಯಲ್ಲಿದ್ದ ಚಿನ್ನದ ಬಳೆ ತೆಗೆದು ಬಾಪೂಗೆ ಸಮರ್ಪಣೆ ಮಾಡಿದಳು. ಅನಂತರ ಕಿವಿಯಲ್ಲಿದ್ದ ಓಲೆಗಳನ್ನು ತೆಗೆಯಲು ಕೈ ಹಾಕಿದಾಗ ಗಾಂಧೀಜಿಯೇ " ಅಮ್ಮಯ್ಯ ನೀನು ಒಮ್ಮನಸ್ಸಿನಿಂದ ಅರ್ಪಿಸಿದ ಕಾಣಿಕೆಯೇ ಸಾಕು. ಕಿವಿಯ ಓಲೆ ಪವಿತ್ರಾಭರಣ. ಅದನ್ನು ತೆಗೆಯದಿರು " ಎಂದು ಹಿಂದಿಯಲ್ಲಿ ಹೇಳಿ ಶಾರದೆಯ ಕೈಯನ್ನು ಬಲವಂತವಾಗಿ ಕೆಳಗಿಳಿಸಿದರು.

ಗಾಂಧೀಜಿ ಸಭಾ ಭವನದಿಂದ ಹೊರಟು ಹೋದ ಮೇಲೆ ಆಭರಣಗಳನ್ನು ಕೊಟ್ಟುಬಿಟ್ಟಿದ್ದ ಕೆಲವು ಹೆಂಗಸರು ಮುದುಕನ ಮಾತಿಗೆ ಜೆರಗಾಗಿ ಎಂತಹ ಕೆಲಸವನ್ನು ಮಾಡಿಬಿಟ್ಟೆವು. ಇನ್ನು ಮನೆಯಲ್ಲಿ ಕೇಳಿದರೆ ಏನು ಹೇಳಬೇಕು ಎಂದು ಅನ್ಯಮನಸ್ಕರಾಗಿ ಮನೆಗೆ ತೆರಳಿದರೆ ಪಾರ್ವತಮ್ಮನಾಗಲಿ ಶಾರದೆಯಾಗಲೀ ಆ ಬಗ್ಗೆ ಲವಲೇಶವೂ ಚಿಂತಿಸಲಿಲ್ಲ. ಮನಗೆ ಬಂದ ಮೇಲೆ ಶಾರದೆ ನಡೆದ ಕಥೆಯನ್ನು ಕಿಟ್ಟಣ್ಣನಿಗೆ ವರದಿ ಮಾಡಿದಾಗ ಕಿಟ್ಟಣ್ಣ ನಗುತ್ತಲೆಂದ—

" ಬಳೆ ನಿನ್ನದು. ಏನಾದರೂ ಮಾಡಿಕೋ. ಆದರೆ ಮುಂದೆ ಚಿನ್ನದ ಬಳೆ ಬೇಕೆಂದು ಹಠ ಹಿಡಿಯದಿದ್ದರೆ ಸರಿ ! "

" ನಾನೆಂದು ಹಠ ಮಾಡಿದ್ದೇನೆ ! " ಎಂದು ಹೇಳುತ್ತಾ ಗಂಡನ ಕೈಯನ್ನು ಅದುಮಿದಳು. ಕಿಟ್ಟಣ್ಣ ಸೂಕ್ತ ರೀತಿಯಲ್ಲಿ ಉತ್ತರ ಕೊಟ್ಟ.

" ಗಾಂಧೀಜಿಯನ್ನು 'ಹೆಣ್ಣಿನ ಮಂಟಪ'ದವರು ಸನ್ಮಾನಿಸಿದ ಮೇಲೆ ಮಂಟಪದ ಪ್ರತಿಷ್ಠೆ ಮಡಿಕೇರಿಯಲ್ಲಿ ದ್ವಿಗುಣವಾಯಿತು. ಸಂಜೆಯಾಗುತ್ತಲೇ ಊರಿನ ಹುಡುಗಿಯರೂ, ವೃದ್ಧ ವನಿತೆಯರೂ ಪಾರ್ವತಮ್ಮನವರ ಮನೆಗೆ ಬರು

ತ್ತಿದ್ದರು. ತಮ್ಮ ಹೆಂಗಸರು ಮಂಜಯ್ಯನವರ ಮನೆಗೆ ಹೋಗುವುದನ್ನು ಗಂಡ ಸರಾರೂ ಅಡ್ಡಿ ಪಡಿಸುತ್ತಿರಲಿಲ್ಲ.

ಶಾರದೆ ಹೆಣ್ಣಿನ ಮಂಟಪಕ್ಕೆ ಬಂದು ಹೋಗುವ ಹೆಂಗಸರಿಗಾಗಿ ಹಲ ವಾರು ಕಾರ್ಯಕ್ರಮಗಳನ್ನು ಏರ್ಪಡಿಸಿದ್ದಳು. ಅಲ್ಲಿ ಸಂಗೀತ, ಕಸೂತಿ, ಹಣೆ ಗೆಯ ಕೆಲಸಗಳು, ಚಿತ್ರದ ಕೆಲಸಗಳನ್ನು ಕಲಿಸಿಕೊಡಲು ಏರ್ಪಡಿಸಿದ್ದಳು. ಅಲ್ಲದೆ ರೋಗಿಗಳ ಶುಶ್ರೂಷೆ, ಗೃಹನೈರ್ಮಲ್ಯ, ಪಾಕಶಾಸ್ತ್ರ ಮೊದಲಾದವು ಗಳಲ್ಲಿ ಉಪಯುಕ್ತ ಸಲಹೆಗಳನ್ನು ತಿಳಿದವರಿಂದ ಕೊಡಿಸುತ್ತಿದ್ದಳು. ಇದರ ಜೊತೆಗೆ ವಾರಕ್ಕೊಮ್ಮೆ ವ್ಯಾಸಂಗ ಗೋಷ್ಠಿಗಳನ್ನು ನಡೆಸುತ್ತಿದ್ದಳು. ಊರಿನ ವಿದ್ಯಾವಂತ ಮಹಿಳೆಯರನ್ನು—ಅನೇಕ ಬಾರಿ ಹೊರಗಿನಿಂದ ಕರೆಸಿಕೊಂಡು ಸತಿ ಕಸ್ತೂರಿಬಾ, ಸರೋಜಿನಿ ನಾಯಿಡು, ಪಾರ್ವತಿಬಾಯಿ ಅಠವಳೆ, ಸರೋಜ ನಳಿನಿ ಮೊದಲಾದ ಸ್ತ್ರೀರತ್ನಗಳ ಆದರ್ಶದಲ್ಲಿ ಹೆಣ್ಣುಮಕ್ಕಳು ಹೇಗೆ ಮುಂದುವ ರೆಯಬೇಕೆಂದು ತಿಳಿಸಿಕೊಡುತ್ತಿದ್ದಳು. ಅಲ್ಲದೆ ದೀನ ದಲಿತರಿಗೆ ಹೆಣ್ಣು ಮಕ್ಕಳು ಮಾಡಬೇಕಾದ ಸೇವೆ, ಇಂದಿನ ಸಮಾಜದಲ್ಲಿ ಹೆಣ್ಣಿಗಿರುವ ಸ್ಥಾನ. ಗಂಡು ಹೆಣ್ಣನ್ನು ಹೇಗೆ ವಂಚಿಸಿ ಕೈಬೊಂಬೆಯಾಗಿ ಮಾಡಿಕೊಂಡು ದಾಸ್ಯದಲ್ಲಿ ಇರಿಸಿದ್ದಾನೆ, ಅದರಿಂದ ಪಾರಾಗುವ ರೀತಿ—ಇತ್ಯಾದಿ ವಿಷಯಗಳನ್ನು ಚರ್ಚಿಸಿ ಊರಿನ ಹೆಣ್ಣುಮಕ್ಕಳ ತಲೆಯಲ್ಲಿ ವಿಚಾರಕ್ರಾಂತಿ ಎಬ್ಬಿಸಿದಳು.

ಇಷ್ಟಾದರೂ ಹೆಣ್ಣಿನ ಮಂಟಪದ ಕೆಲಸ ಶಾರದೆ ಊಹಿಸಿದಷ್ಟು ಬಿರುಸಿ ನಿಂದ ನಡೆಯಲಿಲ್ಲ. ಸಾವಿರಾರು ವರ್ಷಗಳ ಜಾಡ್ಯ ಒಂದೇ ದಿನದಲ್ಲಿ ವಾಸಿ ಯಾಗುವುದೆನ್ನುವ ನಂಬಿಕೆ ಶಾರದೆಗೂ ಇರಲಿಲ್ಲ. ನೂರಾರು ವರ್ಷಗಳ ಜಡತೆ ಒಂದೇ ದಿನದಲ್ಲಿ ತೊಲಗಿ ಹೆಣ್ಣು ಎಚ್ಚೆತ್ತು ಕ್ರಾಂತಿಕಾಳಿಯಾಗುವ ಳೆಂದು ಅವಳು ನಂಬಲಿಲ್ಲ. ಹೆಣ್ಣುಮಕ್ಕಳು ತಮ್ಮ ತಮ್ಮ ಮನೆಗಳನ್ನೇ ಕಾರ್ಯರಂಗವನ್ನಾಗಿ ಮಾಡಿಕೊಂಡು ಅಲ್ಲಿನ ಕೊಳೆಯನ್ನು ತೆಗೆದರೆ, ಊರಿನ ಕೊಳೆ, ಇಡೀ ನಾಡಿನ ಹೊಲಸು ಒಂದಲ್ಲ ಒಂದು ದಿನ ಮಾಯವಾಗುವುದೆಂದು ಶಾರದೆ ಅಚಲವಾಗಿ ನಂಬಿದ್ದಳು. ಇಂತಹ ನಂಬಿಕೆ ಹೆಣ್ಣಿನ ಮಂಟಪಕ್ಕೆ ಬಂದು ಹೋಗುವ ಎಲ್ಲ ಹೆಂಗಸರಿಗೆ ಉಂಟಾದರೆ ಅಲ್ಲಿಗೆ ತನ್ನ ಉದ್ದೇಶ ನೆರ ವೇರಿದಂತೆ ಎಂದು ಶಾರದೆ ಭಾವಿಸಿದ್ದಳು.

ಆದರೆ ವಾಸ್ತವಾಂಶ ಆದುದೇ ಬೇರೆ. ಶಾರದೆ ಒಂದು ಬಯಸಿದ್ದರೆ,

ಆದುದು ಮತ್ತೇನೋ ಒಂದು. ಹೆಣ್ಣಿನ ಮಂಟಪ ಊರಿನ ಹೊಲಸನ್ನು ತೊಳೆಯಲು ಹೋಗಿ ಇರುವ ಹೊಲಸಿಗೆ ಮತ್ತೊಂದಿಷ್ಟು ಹೊಲಸನ್ನು ತನಗರಿಯದಂತೆ ಸೇರಿಸಿತು. ಮೊದಲು ಮಂಟಪಕ್ಕೆ ಗುಂಪು ಕಟ್ಟಿಕೊಂಡು ಬರುತ್ತಿದ್ದ ಹೆಂಗಳೆಯರು ಈಗ ಅದೂ ಇದೂ ಸಬೂಬು ಹೇಳಿ ಜಾರಿಕೊಳ್ಳತೊಡಗಿದ್ದರು. ಕೆಲವರಂತೂ ಬಹಿರಂಗವಾಗಿಯೇ 'ಹೆಣ್ಣಿನ ಮಂಟಪ'ವನ್ನು ಅನೀತಿಯ ತವರೆಂದು ಬಹಿಷ್ಕರಿಸಿ ಬಿಟ್ಟಿದ್ದರು.

ಆದರ್ಶದ ಬೆನ್ನನೇರಿ ವಾಸ್ತವಾಂಶಕ್ಕೆ ಕುರುಡಾಗಿದ್ದ ಶಾರದೆ ಒಮ್ಮೆಲೇ ಕಣ್ಣುಬಿಟ್ಟಳು. ಅವಳ ಕಿವಿಗೆ ಹೆಣ್ಣಿನ ಮಂಟಪದ ಕೆಲವು ಪ್ರಮುಖ ಸದಸ್ಯರ ಬಗ್ಗೆ ಒಡಕು ಸುದ್ದಿ ಬೀಳತೊಡಗಿತು. ಮೊದಲು ಶಾರದೆ, ಪಾರ್ವತಮ್ಮ ಸಂಸ್ಥೆಗೆ, ಆಗದವರು ಮಸಿ ಬಳೆಯಲು ಎಬ್ಬಿಸಿರುವ ಕೂಗು ಎಂದು ಮೌನ ತಾಳಿದರು. ಅವರು ಹಾಗೆ ತಿಳಿಯಲು ಊರಿನ ಕೆಲವು ವೃದ್ಧ ವನಿತೆಯರು-ಹೆಣ್ಣುಮಕ್ಕಳಿಗೆ ಸ್ವತಂತ್ರ ಕೊಟ್ಟ ಮೇಲೆ ಅವರು ಗರತಿಯರಾಗಿ ಬಾಳಲಿಕ್ಕಿಲ್ಲವೆಂದು ಉಗ್ರವಾಗಿ ವಾದಿಸಿದ್ದರು. ಆದರೆ ದಿನ ಕಳೆದಂತೆ ಹೆಣ್ಣಿನ ಮಂಟಪದ ಬಗ್ಗೆ ಯಾವುದೋ ಅಪವಾದ, ದಂತಕಥೆಗಳು ಹುಟ್ಟಿಕೊಂಡು ಆ ಸುದ್ದಿ ಮಂಜಯ್ಯನವರ ತನಕ ಹೋಗಿ ಅವರು ಪಾರ್ವತಮ್ಮನೊಂದಿಗೆ ಈ ಬಗ್ಗೆ ಮಾತನಾಡಿದಾಗ ಶಾರದೆ, ಪಾರ್ವತಮ್ಮ ಆ ಸುದ್ದಿಯ ಮೂಲವನ್ನು ಶೋಧಿಸಲು ನಿಶ್ಚಯಿಸಿದರು.

ಹೆಣ್ಣಿನ ಮಂಟಪಕ್ಕೆ ಸುಮಾರು ೨೦-೨೫ ವಯಸ್ಸಿನ ಮದುವೆಯಾಗದ ಇಬ್ಬರು ಹೆಂಗಸರು ಬಂದು ಹೋಗಿ ಮಾಡುತ್ತಿದ್ದರು. ಹೆಣ್ಣಿನ ಮಂಟಪಕ್ಕೆ ಬರುವುದಕ್ಕೆ ಮೊದಲೇ ಅವರ ನಡತೆ ಸಂಶಯಾಸ್ಪದವಾಗಿತ್ತು. ಅವರು ಊರಿನ ಗಣಿಕೆಯರ ಪಟ್ಟಿಯಲ್ಲಿ ಪ್ರಮುಖ ವ್ಯಕ್ತಿಗಳಾಗಿದ್ದರಂತೆ! ಅವರು ಹೆಣ್ಣಿನ ಮಂಟಪಕ್ಕೆ ಕಾಲಿರಿಸಿದ ಮೇಲೆ—ಮಂಟಪಕ್ಕೆ ಬರುತ್ತಿದ್ದ ಸಂಸಾರಸ್ಥ ಹುಡುಗಿಯರನ್ನು ಅಡ್ಡದಾರಿಗೆ ಎಳೆಯಲು ಪ್ರಯತ್ನಿಸಿದರಂತೆ. ಹೆಣ್ಣಿನಮಂಟಪದಲ್ಲಿ ದಿನ ಬೆಳಗಾದರೆ ಕೇಳುತ್ತಿದ್ದ ಆರ್ಥಿಕ ಸ್ವಾತಂತ್ರ್ಯ, ವಿವಾಹ ಸ್ವಾತಂತ್ರ್ಯ, ವೃತ್ತಿ ಸ್ವಾತಂತ್ರ್ಯ ಮೊದಲಾದ ಮಾತುಗಳಿಗೆ ಕೆಲವು ಬಿಸಿ ನೆತ್ತರಿನ ಕಲಿತ ಹುಡುಗಿಯರು ವಿಪರೀತಾರ್ಥ ಕಲ್ಪಿಸಿ, ತಮ್ಮ ಲೈಂಗಿಕ ಜೀವನದಲ್ಲಿಯೂ ತಾವು ಸ್ವತಂತ್ರರೆನ್ನುವ ಮನೋಭಾವ ಹೊಂದಿ ಆ ಗಣಿಕೆಯರ ಬಲೆಗೆ ಬಿದ್ದರಂತೆ!

ಇಂಥ ವಿಷಯಗಳನ್ನು ನೋಡಿ ಯಾರು ಸುಮ್ಮನಿದ್ದಾರು ? ಈ ಸುದ್ದಿ ಅಲ್ಲಿ ಬಿದ್ದು ಇಲ್ಲಿ ಬಿದ್ದು ಕಡೆಗೆ ಮಂಜಯ್ಯನವರ ತನಕ ಹೋಯಿತು.

ಶಾರದೆ ಆ ಗಣಿಕೆಯರನ್ನು ಕರೆಸಿ ಬುದ್ಧಿ ಹೇಳಿದಳು. ಅವರು ಶಾರದೆ ತಮ್ಮ ಮೇಲೆ ಮಿಥ್ಯಾರೋಪ ಹೊರಿಸುತ್ತಿದ್ದಾಳೆಂದು ಅವಳನ್ನು ಬಾ-ಯಿಗೆ ಬಂದಂತೆ ಬೈದು, ಹೆಣ್ಣಿನ ಮಂಟಪದಿಂದ ತಾವಾಗಿ ದೂರ ಹೋದರು. ಅವರು ದೂರ ಹೋದರೇನು ? ಆಗಬೇಕಾದ ಅನಾಹುತ ಆಗಿ ಮುಗಿದಿತ್ತು. ಒಂದು ದಿನ ಮಂಜಯ್ಯನವರು ಶಾರದೆಯನ್ನು ಭೇಟಿ ಮಾಡಿ ಮಡಿಕೇರಿಯ ಜನ ಹೇಗೆ ಹೆಣ್ಣಿನ ಮಂಟಪವನ್ನು ವಿಮರ್ಶಿಸುತ್ತಿದ್ದಾರೆಂಬುದನ್ನು ಅವಳ ಗಮನಕ್ಕೆ ತಂದು " ಸಾರ್ವಜನಿಕರ ಬೆಂಬಲವಿಲ್ಲದಿದ್ದ ಮೇಲೆ ಇಂತಹ ಸಂಸ್ಥೆ ಯನ್ನು ಏಕೆ ನಡೆಸಬೇಕು ? ಮಂಟಪ ಇನ್ನಿಷ್ಟು ಕೆಡುಕಿನ ತವರಾಗುವ ಮುನ್ನ ಅದನ್ನು ಏಕೆ ಸಮಾಪ್ತಿಗೊಳಿಸಬಾರದು " ಎಂದು ಸೂಚಿಸಿದರು.

ಅವರ ಮಾತು ಶಾರದೆಗೆ ಸೂಕ್ತವಾಗಿ ತೋರಿತು. ತಾನು ಸ್ಥಾಪಿಸಿದ್ದ ಹೆಣ್ಣಿನ ಮಂಟಪದಿಂದ ಒಳ್ಳೆಯ ಪರಿಣಾಮ ಆಗುವುದು ಹಾಗಿರಲಿ, ಮಂಟಪಕ್ಕೆ ವಸತಿ ಸೌಕರ್ಯ ಕಲ್ಪಿಸಿ ಕೊಟ್ಟ ಮಂಜಯ್ಯನವರ ಹೆಸರಿಗೆ ಕಳಂಕ ತನ್ನ ಹೆಣ್ಣಿನ ಮಂಟಪದಿಂದ ಬರುವಂತಾಯಿತೇ ಎಂದು ಶಾರದೆ ಮಂಟಪದ ಮುಕ್ತಾಯಕ್ಕೆ ಅನುಮತಿಸಿದಳು. ಮಂಟಪ ಇಂತಹ ವಿಷವೃಕ್ಷವಾಗುವುದೆಂದು ಅವಳು ಕನಸು-ಮನಸಿನಲ್ಲಿಯೂ ತಿಳಿದಿರಲಿಲ್ಲ. ಸರಿ. ಅದರಂತೆ ಒಂದು ದಿನ ಹೆಣ್ಣಿನ ಮಂಟಪವನ್ನು ಮುಕ್ತಾಯಗೊಳಿಸುವ ಆಲೋಚನೆಯನ್ನು, ಸಕಲ ಸದಸ್ಯರ ಸಭೆಯಲ್ಲಿ ತಿಳಿಸಿದಳು. ಸದಸ್ಯರೆಲ್ಲರೂ ಅದಕ್ಕೆ ಒಪ್ಪಿದರು.

ಹೆಣ್ಣಿನ ಮಂಟಪದ ಮುಕ್ತಾಯ ಸಮಾರಂಭಕ್ಕೆ ಶಾರದೆ ಕಲೆಕ್ಟರ್ರ ಪತ್ನಿಯನ್ನು ಮುಖ್ಯ ಅತಿಥಿಯಾಗಿ ಆಹ್ವಾನಿಸಿದಳು. ಆಕೆ ಇಂಗ್ಲೆಂಡ್ ದೇಶದಲ್ಲಿ ಹೆಂಗಸರು ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡಿದ ಕಥೆಯನ್ನು ತನ್ನ ಭಾಷಣದಲ್ಲಿ ತಿಳಿಸಿದಳು. ವಂದನಾರ್ಪಣೆ ಮಾಡಲು ವೇದಿಕೆಯಮೇಲೆ ಶಾರದೆ ಬಂದಾಗ ಅವಳಿಗೆ ಆವೇಶ ಬಂದಂತಾಯಿತು. ಶಾರದೆ ಹೆಣ್ಣಿನ ಮಂಟಪ ಹುಟ್ಟಿಕೊಂಡ ಮೇಲೆ ಅದುತನಕ ನಡೆಸಿದ ಚಟುವಟಿಕೆಗಳ ಸಿಂಹಾವಲೋಕನ ಮಾಡಿ, ಇಂಥ ಸಂಸ್ಥೆ ಹೆಚ್ಚು ಕಾಲ ಬದುಕಿದ್ದಿದ್ದರೆ, ಇನ್ನು ಹೆಚ್ಚು

ಕೆಲಸ ಸಾಧಿಸುತ್ತಿತ್ತೆಂದೂ, ಆದರೆ ಸಂಘದ ಕೆಲವು ಸದಸ್ಯರ ದುರ್ನಡತೆಯಿಂದ ಹೆಣ್ಣಿನ ಮಂಟಪ ಮೊಳಕೆಯಲ್ಲಿಯೇ ಮುದುಡಿ ಬೀಳಬೇಕಾಯಿತೆಂದೂ ಮನ ಮುಟ್ಟುವಂತೆ ತಿಳಿಸಿದಳು.

" ನನ್ನ ನೂರು ಹೊಂಗನಸಿನ ಹೆಣ್ಣಿನ ಮಂಟಪ ಇಂದು ಮುರುಕು ಮಂಟಪವಾಯಿತೆಂದು ಹೇಳಿ ಸಭಾಂಗಣದಲ್ಲಿಯೇ ಅತ್ತುಬಿಟ್ಟಳು.

ಮಂಟಪವನ್ನು ಮುಕ್ತಾಯಗೊಳಿಸಿದ ಕೆಲವು ದಿನ ಶಾರದೆಗೆ ಬೀದಿಗೆ ತಲೆಯಿಡಲು ನಾಚಿಕೆಯಾಯಿತು. ಯಾರೂ ಮಾಡದ ಕೆಲಸ ತಾನು ಮಾಡಲು ಹೋಗಿ ಮುಖಕ್ಕೆ ಮಂಗಳಾರತಿ ಎತ್ತಿಸಿಕೊಂಡಳೆಂದಲ್ಲ! ತಾನು ಯಾವುದನ್ನು ಆದರ್ಶವೆಂದು ತಿಳಿದಿದ್ದಳೋ ಅದರ ಸಾಧನೆಯಲ್ಲಿ ಮೊದಲಹಂತ ದಲ್ಲಿಯೇ ಎಡವಿ ಬಿದ್ದೆನಲ್ಲಾ! ಎಂದೇ ಅವಳ ಚಿಂತೆ. ತನ್ನ ಉಚ್ಚ ಆದರ್ಶ ಗಳು ಹೆಣ್ಣಿಗೆ ಬೇಡವಾದವೇ ಅಥವಾ ಆದರ್ಶಗಳನ್ನು ಗ್ರಹಿಸಿಯೂ, ಕಾರ್ಯೋ ನ್ಮುಖರಾಗಲು ಅವರು ಸಿದ್ಧರಾಗಿಲ್ಲವೇ? ಅಥವಾ ಸಂಘ ಕಟ್ಟಿ ಸಾಮೂಹಿಕ ಚಳುವಳಿಗೆ ಸದಸ್ಯರನ್ನು ತರಬೇತು ಮಾಡುವ ನಾಯಕಳಲ್ಲಿ ಇರಬೇಕಾದ ಹಿರಿಯ ಗುಣಗಳು ತನ್ನಲ್ಲಿ ಇಲ್ಲವೇ? ಇಂಥವೇ ನೂರೆಂಟು ಪ್ರಶ್ನೆಗಳು ಬಂದು ಬಹುಶಃ ತನ್ನಲ್ಲಿ ನಾಯಕಳಲ್ಲಿ ಇರಬೇಕಾದ ಕಾಂತಿ, ಸಹನೆ, ನಿಸ್ವಾರ್ಥ ಸೇವೆ, ಅನುಪಮ ತ್ಯಾಗ, ಚಿತ್ತಸ್ಥೈರ್ಯ, ಎಲ್ಲಕ್ಕೂ ಮೇಲಾಗಿ ಇತರರನ್ನು ತನ್ನ ಎರಕದಲ್ಲಿ ರೂಪಿಸಬಲ್ಲ ಕಲಾಕೌಶಲ್ಯ ಇವುಗಳು ತನ್ನಲ್ಲಿ ಇಲ್ಲವೇನೋ ಎಂದು ಕೊಂಡು ಅದನ್ನೇ ಕುರಿತು ಚಿಂತಿಸಿ, ಚಿಂತಿಸಿ, ಮನೋವ್ಯಾಕುಲತೆಯಿಂದ ಹಾಸಿಗೆಯನ್ನೇ ಹಿಡಿದಳು ಶಾರದೆ.

ಶಾರದೆ ನಾಲ್ಕೈದು ದಿನಗಳಾದರೂ, ತಮ್ಮ ಮನೆಯ ಕಡೆ ಅಡ್ಡಾಡದೆ ಇರುವುದನ್ನು ಕಂಡು ಪಾರ್ವತಮ್ಮನಿಗೆ ಯಾಕೋ ಕೆಡುಕೆನಿಸಿತು. ಅವರು ಆಳು ನಿಂಗನನ್ನು ಶಾರದೆಯ ಮನೆಗೆ ಅಟ್ಟಿ ವಿಷಯ ತಿಳಿದುಬರಲು ಹೇಳಿದರು. ನಿಂಗ ಬಂದು ಶಾರದೆ ಹಾಸಿಗೆ ಹಿಡಿದಿರುವ ಸುದ್ದಿ ಕೊಟ್ಟ. ಇದನ್ನು ಕೇಳಿ ಪಾರ್ವತಮ್ಮ, ತಮ್ಮ ಸೊಸೆ ಮಂಗಳೆಯನ್ನು ಹಿಂದಿಟ್ಟುಕೊಂಡು ಶಾರದೆಯ ಮನೆಗೆ ಹೊರಟರು. ಶಾರದೆ ಕೇವಲ ನಾಲ್ಕೈದು ದಿನಕ್ಕೇ ಗುರುತು ಸಿಕ್ಕ ದಷ್ಟು ತೆಗೆದುಹೋಗಿದ್ದಳು. ಧ್ವನಿ ತುಂಬಾ ಕ್ಷೀಣವಾಗಿತ್ತು. ಪಾರ್ವತಮ್ಮ ಬಡ ಕುಟೀರಕ್ಕೆ ಬಂದುದನ್ನು ಕಂಡು ಶಾರದೆ ಎದ್ದು ಕುಳಿತುಕೊಳ್ಳಲು ಚಾಪೆ

ಹಾಸಿ, ಕಾಫಿ ಮಾಡಲು ಒಲೆ ಹೊತ್ತಿಸಲು ಹೊರಟಳು.

" ಶಾರದೆ ನೀನು ಇಷ್ಟು ಹುಚ್ಚು ಹುಡುಗಿ ಅಂತ ನಾನು ಖಂಡಿತ ತಿಳಿದಿರಲಿಲ್ಲ " ಎಂದರು ಪಾರ್ವತಮ್ಮ.

" ಯಾಕೆ ? "

" ಅಲ್ಲಾ, ಹೆಣ್ಣಿನ ಮಂಟಪ ನಿಂತು ಹೋದಾಕ್ಷಣಕ್ಕೆ ಅದನ್ನು ನೀನು ಇಷ್ಟು ತಲೆಗೆ ಹಚ್ಚಿಕೊಳ್ಳಬೇಕೆ ? ಒಳ್ಳೆ ಹುಡುಗಿ ನೀನು. "

" ಇಲ್ಲ, ಅತ್ತೆ. ಹೆಣ್ಣಿನ ಮಂಟಪ ನನ್ನ ಜೀವದುಸಿರಾಗಿತ್ತು. "

" ಅದನ್ನು ನಾನು ಕಾಣೆನೇ. ನೀನು ಅದಕ್ಕಾಗಿ ಎಷ್ಟು ಒದ್ದಾಡಿದ್ದೀಯೋ ನಾನೂ ಅಷ್ಟೇ ಒದ್ದಾಡಿದ್ದೇನೆ—ಆದರೆ ನೋಡು. ನಾನು ಆ ವಿಷಯವನ್ನೇನಾದರೂ ಮನಸ್ಸಿಗೆ ಹಚ್ಚಿಕೊಂಡಿದ್ದೇನೇನೋ. ಅದರ ಆಯಸ್ಸು ಎಷ್ಟಿತ್ತೋ ಅಷ್ಟು ದಿನ ಬದುಕಿತ್ತು. ಅದಕ್ಕಾಗಿ ನಾವು ಕೊರಗುತ್ತಾ ಕುಳಿತರೆ ಏನು ಸಾರ್ಥಕ ? " ಎಂದು ಸಮಾಧಾನ ಪಡಿಸಿ " ಇಷ್ಟಕ್ಕೆಲ್ಲಾ ನಾವು ಎದೆಗುಂದಿದರೆ ಹೇಗೆ ? ಸೇವೆ ಮಾಡೋದು ಯಾವಾಗಲೂ ಫಲಾಫಲ ಅಪೇಕ್ಷೆಯಿಲ್ಲದೆ ಮಾಡಬೇಕೂಂತ ಕೃಷ್ಣ ಪರಮಾತ್ಮ ಗೀತೇಲಿ ಹೇಳಿಲ್ಲವೇ ? ಹೆಣ್ಣಿನ ಮಂಟಪಕ್ಕೆ ಸೋಲಾಯಿತು. ನಿಜ. ಆದರೇನಂತೆ ? ನಿನ್ನ ಆದರ್ಶಗಳಿಗೆ ಆದ ಸೋಲಲ್ಲ ಅದು. ನೀನು ನಿನ್ನ ಕರ್ತವ್ಯದಲ್ಲಿ ಮುಂದುವರೆ. ಸ್ತ್ರೀ ಜನೋದ್ಧಾರಕ್ಕೆ ಸಂಘ ಕಟ್ಟಿ, ಸಂಸ್ಥೆ ಬೆಳಸಿ, ಮಾಡುವುದೊಂದೇ ದಾರೀನೇ ? ಇತರ ದಾರಿಗಳಿಲ್ಲವೇ ? ನೀನು ನಿನ್ನ ಸುತ್ತಲಿನ ಆವರಣದಲ್ಲಿ ನಿನ್ನಿಂದಾಗುವ ಕೆಲಸ ಮಾಡು. ಸ್ತ್ರೀ ಜನೋದ್ಧಾರವಾಗದೇ ? ಏಳು, ಶಾರದೆ ಏಳು. ಹುಚ್ಚಿಯ ಹಾಗೆ ಕಳೆದು ಹೋಮದನ್ನು ಚಿಂತಿಸಿ, ಇಲ್ಲದ ವ್ಯಾಕುಲತೆ ತಂದುಕೊಳ್ಳಬೇಡ. " ಎಂದು ಹುರಿದುಂಬಿಸಿದರು ಪಾರ್ವತಮ್ಮ.

ಅಂದಿನಿಂದ ಶಾರದೆಯ ಜೀವನದಲ್ಲಿ ಹೊಸ ಅಧ್ಯಾಯ ಆರಂಭವಾಯಿತು.

೩

ಶಾರದೆ ಸುಮಿತ್ರೆಯನ್ನು ಇತರ ಹುಡುಗಿಯರಿಗಿಂತ ಹೆಚ್ಚಿಗೆ ಪ್ರೀತಿಸುತ್ತಿದ್ದಳು. ಇದಕ್ಕೆ ಕಾರಣ ಅವಳ ದಿಟ್ಟತನ, ಚಾಕಚಕ್ಯತೆ, ವಿದ್ಯಾಕಾಂಕ್ಷೆ, ಉಚ್ಚ ಆದರ್ಶ, ಸೇವಾ ಧುರಂಧತೆ—ಈ ಗುಣಗಳಲ್ಲ; ಅವಳು ಶಾರದೆಗೆ ಅಚ್ಚುಮೆಚ್ಚಾದುದು ಬೇರೊಂದು ಕಾರಣಕ್ಕಾಗಿ. ಸುಮಿತ್ರೆ ಶಾರದೆಯ ಮಗಳು ಕೃಷ್ಣವೇಣಿಯ ನೆನಪನ್ನು ತರುತ್ತಿದ್ದಳು. ಸುಮಿತ್ರೆಯೂ ಕೃಷ್ಣವೇಣಿಯಂತೆ ಬಡಕಲಾದ ಹುಡುಗಿ. ಆದರೆ ಮುಖದಲ್ಲಿ ಸದಾ ಕಳಕಳಿಸುವ ನಸುನಗು, ಮಿಂಚುಗಣ್ಣುಗಳು ಅವಳ ವಿಶಿಷ್ಟ ಬಗೆಯ ವ್ಯಕ್ತಿತ್ವದ ಹೆಗ್ಗುರುತುಗಳು. ಅವಳ ನಡೆನುಡಿ ಕೊಂಕು ಕಾಣದವು. ಮಾತಿನಲ್ಲಿ ಎಂತೋ ಕೃತಿಯಲ್ಲಿಯೂ ಅಂತೇ ಖಂಡಿತವಾದಿ. ಅಷ್ಟೇ ಹಠವಾದಿ. ಆದರೆ ಜ್ಞಾನಾರ್ಜನೆ, ಸೇವಾಕಾಂಕ್ಷೆ, ಹೊಂದಾಣಿಕೆ--ಈ ಗುಣಗಳಲ್ಲಿ ಆ ವಯಸ್ಸಿಗಾಗಲೇ ಅವಳು ಎಲ್ಲರ ಅಭಿಮಾನಕ್ಕೆ ಪಾತ್ರವಾಗಿದ್ದಳು. ಹೀಗೆ ಸುಮಿತ್ರೆ ಶಂಕರಮ್ಮ, ಪಾರ್ವತಮ್ಮ, ಶಾರದೆಯರ ಮನಸ್ಸನ್ನು ಅಪಹರಿಸಿ ಅವರೆಲ್ಲರ ಪ್ರೇಮದ ಪುತ್ಥಳಿಯಾಗಿದ್ದಳು.

ಹೆಣ್ಣಿನ ಮಂಟಪ ಆರಂಭವಾದಾಗ ಸುಮಿತ್ರೆ ತನ್ನ ತಂದೆಯ ಇಷ್ಟದ ವಿರೋಧವಾಗಿ ಅದರ ಸದಸ್ಯಳಾಗಿದ್ದಳು. ವೆಂಕಪ್ಪಯ್ಯನ ಅಭಿಪ್ರಾಯದಲ್ಲಿ ಹೆಣ್ಣಿನ ಮಂಟಪವೆಂದರೆ ಹೊತ್ತುಕಳೆಯಲು ಮಾಡಿಕೊಂಡಿರುವ ಸೋಮಾರಿ ಹೆಂಗಸರ ಕಾಡುಹರಟೆಯ ಸಂಸ್ಥೆ ಎಂದೇ ಭಾವನೆ. ಶಾರದೆಯ ವಿಷಯದಲ್ಲಿ ಅವರಿಗೆ ಅಭಿಮಾನವಿದ್ದರೂ, ಅವಳ ಅಭಿಪ್ರಾಯಗಳನ್ನೊಂದೂ ಅವರು ಒಪ್ಪಿರಲಿಲ್ಲ. ಹೆಣ್ಣಿನಮಂಟಪದ ಮುಖ್ಯೋದ್ದೇಶಗಳಲ್ಲಿ ಒಂದಾದ ಸ್ತ್ರೀಸ್ವಾತಂತ್ರ್ಯ, ದಾಂಪತ್ಯ ಜೀವನದಲ್ಲಿ ಹೆಣ್ಣುಗಂಡಿನ ಸಮತೆ, ಸ್ತ್ರೀ ವಿದ್ಯಾಭ್ಯಾಸ ಇವುಗಳೆಲ್ಲ ಅರ್ಥವಿಲ್ಲದ ಘೋಷಣೆಗಳೆಂದೇ ಅವರ ಅಭಿಪ್ರಾಯ. ಸ್ತ್ರೀಯು ಎಂದಿಗೂ ಸ್ವಾತಂತ್ರ್ಯಕ್ಕೆ ಅರ್ಹಳಲ್ಲವೆಂದು ಅವರು ದೃಢವಾಗಿ ನಂಬಿದ್ದರು. ಸ್ತ್ರೀ ಬುದ್ಧಿ ಪ್ರಳಯಾಂತಕವಾಗಿರುವುದರಿಂದ ಅವಳಿಗೆ ಸ್ವಲ್ಪ ಸ್ವಾತಂತ್ರ್ಯ ಕೊಟ್ಟರೂ ಇದರಿಂದ ಜಗತ್ತಿಗೆ ಹಾನಿಯೇ ಹೊರತು ಕಲ್ಯಾಣವಲ್ಲವೆಂದು ಅವರು ತಿಳಿದಿದ್ದರು.

ಅಲ್ಲದೆ ಹೆಣ್ಣು ಗಂಡಿನ ನಡುವೆ ದೇವರೇ ಭೇದ ಕಲ್ಪಿಸಿರುವಾಗ ಅವಳೆಂದೂ ಗಂಡಿನ ಸರಿಸಮಳಾಗುವುದಿಲ್ಲವೆಂದೂ, ಅವಳ ಸ್ಥಾನ ಅಡಿಗೆಯ ಮನೆಯೇ ಹೊರತು ಸಾರ್ವಜನಿಕ ರಂಗವಲ್ಲವೆಂದೂ ಅವರ ಭಾವನೆ. ಸನಾತನ ಧರ್ಮ ದಲ್ಲಿ ಉಕ್ತವಾಗಿರುವಂತೆ ಹೆಣ್ಣು ಬಾಲ್ಯದಲ್ಲಿ ತಂದೆಯ ಪೋಷಣೆಯಲ್ಲಿಯು ಯೌವನದಲ್ಲಿ ಪತಿಯ ಪೋಷಣೆಯಲ್ಲಿಯೂ, ವೃದ್ಧಾಪ್ಯದಲ್ಲಿ ಸುತರ ಪೋಷಣೆ ಯಲ್ಲಿಯೂ ಇರುವುದು ಪರಮ ನ್ಯಾಯವಾಗಿ ಕಂಡಿತ್ತು. ಕೇವಲ ಭೋಗ ವಸ್ತುವೆನಿಸಿಕೊಂಡಿರುವ ಹೆಣ್ಣನ್ನು ಸರಿಸಮಾನಸ್ಕಳೆಂದು ಪರಿಗಣಿಸುವುದೆಂ ದರೆ ಅದು ಹೇಡಿತನವೆಂದೇ ಅವರ ಕಲ್ಪನೆ. ಆದುದರಿಂದಲೇ ಅವರು ತಮ್ಮ ಪತ್ನಿ ಸೀತಮ್ಮನವರನ್ನು ಮನೆಯ ತೊತ್ತಾಗಿ ನೋಡಿಕೊಂಡಿದ್ದರೇ ಹೊರತು ಗೃಹದೇವತೆಯಾಗಿ ಕಂಡಿರಲಿಲ್ಲ.

ಹಳೆಯ ಅಭಿಪ್ರಾಯದ ಸೀತಮ್ಮನವರೂ ಗಂಡನ ದಬ್ಬಾಳಿಕೆಯನ್ನು ಎದುರಿಸಲು ಹೋಗದೆ, ಪತಿಯ ಸ್ವಾಮಿತ್ವವನ್ನು ಒಪ್ಪಿ, ಅವರ ಕೈಬೊಂಬೆ ಯಾಗಿ, ಹೇಳಿದ ಕೆಲಸ ಮಾಡಿಕೊಂಡು, ಹಾಕಿದ ಕೂಳು ತಿಂದುಕೊಂಡು ಬಿದ್ದಿ ದ್ದರು. ಆದರೆ ಅವರ ಮಗಳು ಸುಮಿತ್ರೆ ಮಾತ್ರ ಬಾಲ್ಯದಿಂದಲೇ ತಂದೆಯ ದರ್ಪವನ್ನು ಎದುರಿಸುತ್ತಲೇ ಬಂದಿದ್ದಳು. ಅವರ ಮಾತನ್ನು ಲೆಕ್ಕಿಸದೆ, ತನಗೆ ಮನಸ್ಸಿಗೆ ಬಂದದ್ದನ್ನೇ ಮಾಡುತ್ತಾ, ವೆಂಕಪ್ಪಯ್ಯನವರ ತಲೆನೋವಿಗೆ ಕಾರಣಳಾಗಿದ್ದಳು. ಅವಳಿಗೆ ತನ್ನ ತಂದೆಗಿಂತಲೂ ತನ್ನ ತಾಯಿಯಲ್ಲಿ ತುಂಬಾ ಪ್ರೀತಿ ಇತ್ತು. ತಾಯಿಯ ಮಾತೇ ಅವಳಿಗೆ ವೇದವಾಕ್ಯ. ಅವ ಳೊಂದಿಗೆ ತನ್ನ ಹೃದ್ಗತವನ್ನು, ಆಸೆ ಆಕಾಂಕ್ಷೆಗಳನ್ನು ತೋಡಿಕೊಳ್ಳುವಷ್ಟು ಅವಳಿಗೆ ಸಲಿಗೆ ಇತ್ತು. ಸೀತಮ್ಮನವರೂ ಮಗಳನ್ನು ಸರಿಯಾದ ರೀತಿಯ ಲ್ಲಿಯೇ ಬೆಳಸಿದ್ದರು. ಅವಳು ಮೊದಲನೆಯ ಹುಡುಗಿ ಸರೋಜೆಯಂತೆ ಅಲ್ಲ ವೆಂಬುದನ್ನು ಎಂದೋ ಮನಗಂಡಿದ್ದರು. ಎಲ್ಲಕ್ಕಿಂತ ಹೆಚ್ಚಿಗೆ, ಸುಮಿತ್ರೆಯ ಓದಬೇಕೆನ್ನುವ ಹುಚ್ಚು, ಸ್ವತಂತ್ರ ವಿಚಾರ ಸರಣಿ, ಹಠಮಾರಿತನಗಳು—- ಅವರ ಗಮನ ಸೆಳೆದಿದ್ದವು. ಇವುಗಳಿಗೆ ಅವರು ಪರೋಕ್ಷವಾಗಿ ಪ್ರೋತ್ಸಾಹ ಕೊಟ್ಟು, ಅವಳ ದಾರಿಯಲ್ಲಿ ಅವಳು ಹೋಗಲು ಬಿಟ್ಟಿದ್ದರು.

ಅವರ ಬೆಂಬಲದಿಂದಲೇ ವೆಂಕಪ್ಪಯ್ಯನವರ ಇಚ್ಛೆಯ ವಿರುದ್ಧ ಸುಮಿತ್ರೆ ಗಂಡುಹುಡುಗರ ಜತೆಯಲ್ಲಿ ಇಂಗ್ಲಿಷ್ ಶಾಲೆಗೆ ಸೇರಿದ್ದುದು. ಅದೇ ಪ್ರೋತ್ಸಾ

ಹದ ಮೇಲೆಯೇ ಸುಮಿತ್ರೆಯೂ ಹೆಣ್ಣಿನ ಮಂಟಪದ ಪ್ರಮುಖ ಸದಸ್ಯಳಾಗಿದ್ದುದು. ವೆಂಕಪ್ಪಯ್ಯ ಶಾರದೆಯ ಮನೆಗೆ ಹೋಗಬಾರದೆಂದೂ ಅವಳ ಸಂಸ್ಥೆಗೆ ಸೇರಬಾರದೆಂದು ಎಷ್ಟೋ ರೀತಿಯಲ್ಲಿ ಹೇಳಿ ನೋಡಿದರು. ಮನೆ ಬಿಟ್ಟುಹೋದರೆ ಕಾಲು ಕತ್ತರಿಸಿ ಹಾಕುವುದಾಗಿಯೂ ಬೆದರಿಸಿದರು. ಆದರೂ ಇವುಗಳನ್ನು ಸುಮಿತ್ರೆ ಲೆಕ್ಕಿಸಲೇ ಇಲ್ಲ. ಅವಳು ಶಾರದೆಯ ಮನೆಗೆ ಹೋಗುವುದನ್ನೂ ಅವಳ ಜತೆಯಲ್ಲಿ ತನ್ನ ವಿರಾಮವನ್ನು ಕಳೆಯುವುದನ್ನೂ ನಿಲ್ಲಿಸಲಿಲ್ಲ. ಕಡೆಗೆ ಬೇರೇನು ಮಾಡಲು ಸಾಧ್ಯವಾಗದೆ ಅವರು 'ಎಲ್ಲಿಯಾದರೂ ಹಾಳಾಗಿ ಹೋಗಲಿ' ಎಂದು ಸುಮ್ಮನಾಗಬೇಕಾಯಿತು. ಇಂದು—ಮತ್ತೆ ತಾಯಿಯ ಬೆಂಬಲದಿಂದಲೇ, ಶಾರದೆಯ ಪ್ರೋತ್ಸಾಹದಿಂದಲೇ ಸುಮಿತ್ರೆ ಹೈ-ಸ್ಕೂಲು ಸೇರಲು ಒಂದು ಕಾಲಿನಲ್ಲಿ ನಿಂತಿದ್ದಳು.

ಸುಮಿತ್ರೆ ಲೋಯರ್ ಸೆಕೆಂಡರಿಯಲ್ಲಿ ಎಲ್ಲರು ನಿರೀಕ್ಷಿಸಿದಂತೆ ಮೊದಲನೆಯ ತರಗತಿಯಲ್ಲಿಯೇ ಉತ್ತೀರ್ಣಳಾಗಿದ್ದಳು. ಶಾಲೆಯ ಮುಖ್ಯೋಪಾಧ್ಯಾಯಿನಿ ಸುಮಿತ್ರೆಯನ್ನು ಮನೆಗೆ ಕರೆಸಿಕೊಂಡು, ಅನೇಕ ಪ್ರೋತ್ಸಾಹದ ಮಾತು ಹೇಳಿ, ಏನೇ ಆದರೂ ಸುಮಿತ್ರೆ ಹೈಸ್ಕೂಲು ಸೇರಿ, ಕಾಲೇಜಿನ ಓದು ಮುಗಿಸಿ, ಕನಿಷ್ಟಪಕ್ಷ ಡಾಕ್ಟರಾಗಿ, ಸಮಾಜಸೇವೆ ಸಲ್ಲಿಸಬೇಕೆಂಬ ಮಹದಾಸೆಯನ್ನು ವ್ಯಕ್ತಪಡಿಸಿದರು. ಸುಮಿತ್ರೆಯಂತಹ ಚುರುಕಾದ, ಬುದ್ಧಿವಂತ ಹುಡುಗಿಯರು ವ್ಯಾಸಂಗವನ್ನು ಹೇಗಾದರೂ ಮುಂದುವರೆಸಿ ದೇಶಸೇವೆ ಮಾಡಬೇಕೆಂದೂ ಅವಳಂತಹ ವ್ಯಕ್ತಿಗಳು ಮಾಡಬೇಕಾದ ಕೆಲಸಗಳು ಬಹಳವಿವೆ ಎಂದೂ ಒತ್ತಿ ಒತ್ತಿ ಹೇಳಿ—ಅವಳನ್ನು ಓದು ಮುಂದುವರೆಸುವ ವಿಷಯದಲ್ಲಿ ಹುರಿದುಂಬಿಸಿದುದು ಮಾತ್ರವಲ್ಲ—ಅವಳಿಗೆ ಬೇಕಾಗುವ ಪುಸ್ತಕ, ಫೀಸುಗಳನ್ನು ತಾವು ಕೊಡುವುದಾಗಿ ವಾಗ್ದಾನ ಮಾಡಿದರು. ಇದರಿಂದ ಉತ್ತೇಜಿತಳಾಗಿದ್ದ ಸುಮಿತ್ರೆ—ತಾಯಿಯವರ ಮುಂದೆ ತನ್ನ ಆಶಯವನ್ನು ತೋಡಿಕೊಂಡು ಅವರ ಅನುಮತಿಯನ್ನು ದೊರಕಿಸಿಕೊಂಡು, ಹೈಸ್ಕೂಲು ಸೇರುವ ತರದೂದು ಮಾಡಿದಳು. ಆಗಲೇ ವೆಂಕಪ್ಪಯ್ಯನವರ ಗಮನ ಅತ್ತ ಹರಿದುದು.

ಅವರಿಗೆ ತಮ್ಮ ವಂಶದಲ್ಲಿ ಯಾರೂ ಇಂಗ್ಲಿಷ್ ಕಲಿಯದೆ ಇರುವಾಗ ಸುಮಿತ್ರೆ ಮಿಡ್ಲ್‌ಸ್ಕೂಲ್ ಸೇರಿದುದೇ ಇಷ್ಟವಿರಲಿಲ್ಲ. ಹೆಣ್ಣು ಹುಡುಗಿಯಾದ ಸುಮಿತ್ರೆ ಇಂಗ್ಲಿಷ್ ಕಲಿಯುವುದು ತುಂಬಾ ಲಜ್ಜಾಸ್ಪದವೆಂದು ಅವರ ಭಾವನೆ.

ಅವರ ಇಷ್ಟದ ವಿರೋಧವಾಗಿ ಸುಮಿತ್ರೆ ಮಾಧ್ಯಮಿಕ ಶಾಲೆಗೆ ಸೇರಿ, ಅಲ್ಲಿ ಉತ್ತಮ ರೀತಿಯಲ್ಲಿ ತೇರ್ಗಡೆ ಹೊಂದಿ, ಇಂದು ಪ್ರೌಢ ಶಾಲೆಗೆ ಸೇರಬಯಸಿದ್ದು ಅವರಿಗೆ ಗೌರವ ಬರುವುದಕ್ಕಿಂತಲೂ ಅವಮಾನವಾದಂತೆಯೆ ಆಯಿತು. ನೋಡಿದ ಜನ ವೆಂಕಪ್ಪ ಜೋಯಿಸರ ಮಗಳು ಕಿರಿಸ್ತಾನರಂತೆ ಗಂಡು ಹುಡುಗರ ಜತೆಯಲ್ಲಿ ಲಜ್ಜೆ ನಾಚಿಕೆ ಇಲ್ಲದೆ ಇಂಗ್ಲಿಷು ಕಲಿಯುತ್ತಿದ್ದಾಳೆಂದು ಆಡಿಕೊಳ್ಳುವರೆಂದು ಅವರಿಗೆ ತುಂಬಾ ಹೀನಾಯವಾಯಿತು. ಅವರು ಸುಮಿತ್ರೆಯ ಸ್ವಭಾವವನ್ನು ಅರಿತಿದ್ದ ಕಾರಣ ಒರಟು ಮಾತಿನಲ್ಲಿ ಹೇಳಿದರೆ ಪ್ರಯೋಜನವಿಲ್ಲವೆಂದು ನಯವಾಗಿ ಹೇಳಿದರು.

" ಇದುವರೆಗೆ ನೀನು ಹುಡುಗಿ ಎನಿಸಿಕೊಂಡೆ ಸುಮಿತ್ರೆ. ನಿನ್ನ ಇಂಗ್ಲಿಷ್ ಓದಿಗೆ ನಾನು ಅಡ್ಡ ಬರಲಿಲ್ಲ. ಆದರೆ ನೀನು ಮದುವೆಯಾಗುವ ವಯಸ್ಸಿನಲ್ಲಿ ಗಂಡು ಹುಡುಗರಂತೆ ಓದುವುದು ನನಗೆ ಯಾಕೋ ಚೆನ್ನಾಗಿ ಕಾಣುವುದಿಲ್ಲಮ್ಮ. ಹೇಗೂ ಯಾರಾದರೂ ಕಾಗದ ಬರೆದರೆ ಅಡ್ರಸ್ಸು ಓದಿಕೊಳ್ಳುವಷ್ಟು ಆ ಮ್ಲೇಚ್ಛ ಭಾಷೆ ಬರುತ್ತದಲ್ಲ. ಇದಕ್ಕೂ ಹೆಚ್ಚಿನ ಓದು ಹೆಂಗಸರಿಗೆ ಅದರಲ್ಲಿಯೂ ವೈದಿಕ ಮನೆತನದ ನಮ್ಮ ಮಕ್ಕಳಿಗೆ ಯಾಕೆ ಬೇಕು? ಇಷ್ಟಕ್ಕೂ ಹೆಂಗಸರು ಓದಿ ತಾನೇ ಮಾಡಬೇಕಾದ್ದು ಏನಿದೆ ಹೇಳು?" ಎಂದರು ಲೋಕಾಭಿರಾಮವಾಗಿ.

ಈ ಮಾತು ಕೇಳಿ ಸುಮಿತ್ರೆ ಕೊಂಚ ಕಾಲ ಮೌನ ಧರಿಸಿದಳು. ಅದು ತಮ್ಮ ಮಾತಿಗೆ ಅರ್ಧ ಸಮ್ಮತಿ ಎಂದು ಭಾವಿಸಿ, ಆತ್ಮಗತದಂತೆ ಹೇಳಿಕೊಂಡರು.

" ನಮ್ಮ ಹುಡುಗಿಯರು– ಇತರರಂತಲ್ಲ. ಅವರು ತಂದೆ ತಾಯಿಗಳ ಮಾತು ಮೀರುವವರಲ್ಲ. ನಮ್ಮ ಹುಡುಗಿಯರನ್ನು ಮದುವೆಯಾಗಲು ನಿಜವಾಗಿಯೂ ಪುಣ್ಯ ಮಾಡಿರಬೇಕು. " ಎಂದು ಪತ್ನಿಗೆ ಸಂಬೋಧಿಸುತ್ತ ಹೇಳಿದರು.

ಇನ್ನು ಸುಮ್ಮನಿದ್ದರೆ ತನ್ನ ಉದ್ದೇಶಗಳೆಲ್ಲ ಬುಡಮೇಲಾಗುವುದೆಂದು ತಿಳಿದು ಸುಮಿತ್ರೆ ಅಂಜುತ್ತ ಮಾತು ತೆಗೆದಳು.

" ನಮ್ಮ ಮೇಡಂ ಹೇಳ್ತಿದಾರೆ—ನಾನು ಹೈಸ್ಕೂಲ್ ಸೇರಬೇಕಂತೆ. "

ಈ ಮಾತಿನಿಂದ ಚಕಿತರಾದ ವೆಂಕಪ್ಪಯ್ಯ ಹೇಳಿದರು—

" ಏನಂದಿ ? ನಿಮ್ಮ ಮೇಡಂ ನೀನು ಹೈಸ್ಕೂಲ್ ಸೇರಬೇಕೂಂತ ಹೇಳಿದಾರ್ಯೆ ? ಅವರಿಗೇನಂತೆ ಸಾವಿರ ಹೇಳ್ತಾರೆ. ಅವರು ಹೇಳ್ದಾಗೆಲ್ಲ ಕುಣಿಯೋಕೆ ನಾವೇನು ಕಿರಿಸ್ತಾನರು ಕೆಟ್ಟು ಹೋದಿವೆ ? ಅವರು ಹೇಳ್ದಾಗೆ ಮಾಡೋಕೆ ನಾವು ಇನ್ನೂ ಅವರಷ್ಟು ಕೆಟ್ಟು ಹಾಳಾಗಿಲ್ಲ ! ಇನ್ನೂ ನಮ್ಮ ಹಳೇ ಸಂಪ್ರದಾಯ ಕೊಂಚ ಇಟ್ಟುಕೊಂಡಿದ್ದೇವೆ. "

" ಅವಳು ಕ್ಲಾಸಿಗೆಲ್ಲ ಫಸ್ಟಂತೆ. ಮುಂದಕ್ಕೆ ಓದಿದರೆ ಅಭಿವೃದ್ಧಿಗೆ ಬರ್ತ್ತಾಳಂತೆ. ಓದಿಕೊಳ್ಳಲಿ ಬಿಡಿ. ಅವಳು ಓದು ನಿಲ್ಲಿಸಿ ಮನೆಯಲ್ಲಿ ಮಾಡ ಬೇಕಾದರೂ ಏನು ? ಇನ್ನೂ ಮದುವೆ ಆದ ಮೇಲೆ ಆ ಮಾತು. ಅಲ್ಲಿತನಕ ಅವಳಿಗೆ ಎಷ್ಟು ಓದುಬೇಕೋ ಅಷ್ಟು ಓದಿಕೊಳ್ಳಲಿ ಬಿಡಿ " ಎಂದರು ಸೀತಮ್ಮ ಮಗಳ ಪರವಾಗಿ.

" ಹಾಗಾದರೆ ಸುಮಿತ್ರೆ ತಲೇನ ಕೆಡಿಸಿದವರು ಅವಳ ಮೇಡಂ ಗಳು ಮಾತ್ರವೇ ಅಲ್ಲ. ಅವರ ಜತೆಗೆ ನೀನೂ ಸೇರ್ಕೊಂಡಿದ್ದಿ. ನಾನೇನೋ ಅಂದು ಕೊಂಡಿದ್ದೆ. ದೊಡ್ಡೋಳಾದ ನೀನು, ಕೂದಲು ನರೆತ ನೀನು, ಮಣ್ಣು ತಿನ್ನೊ ಹುಡುಗಿ ಕುಣಿಯೋದಕ್ಕೆ ತಕ್ಕ ಹಾಗೆ ತಾಳ ಕುಟ್ಟುತೀಯಲ್ಲ. ನಿನಗೆ ವಯಸ್ಸಾದುದು ವ್ಯರ್ಥ " ಎಂದು ಹೆಂಡತಿಯ ಮೇಲೆ ಹಾರಾಡಿದರು. ಇದರಿಂದ ಯಾವ ವಿಷಯ ಇತ್ಯರ್ಥವಾಗಲಿಲ್ಲ.

" ಈಗ ನೀನೇನು ಹೇಳೋದು ? " ಎಂದು ಮಗಳ ಕಡೆ ನೋಡುತ್ತಾ ಕಟ್ಟಕಡೆಯ ವಿಷಯವನ್ನು ನಿರ್ಧರಿಸಲು ಪ್ರಶ್ನಿಸಿದರು.

" ನಾನು ಹೈಸ್ಕೂಲು ಸೇರಬೇಕೂಂತ ಇದ್ದೀನಿ. "

" ಹೈಸ್ಕೂಲಾದರೂ ಸೇರು; ತಲೆಗೆ ಮಣ್ಣಾದ್ರೂ ಸುರಿದುಕೊ. ಇನ್ನು ಹುಟ್ಟಕ್ಕಿಲ್ಲ ಬೆಳಯುವುದಕ್ಕಿಲ್ಲ ಆಗಲೇ ಅಧಿಕಪ್ರಸಂಗಿತನ. ದೊಡ್ಡೋರು ಚಿಕ್ಕೋರು ಅನ್ನೊ ಭಾವನೆ ಇಲ್ಲದಿರೊ ನಿನ್ನಂಥ ಅಧಿಕಪ್ರಸಂಗಿ ಜತೆಲಿ ಮಾತು ಬೆಳೆಸೋ ನಾವು ಮುಠ್ಠಾಳರು ! ಎಲ್ಲಾದರೂ ಹಾಳಾಗಿ ಹೋಗು. ನನ್ನ ಕಣ್ಣೆದಿರಿನಲ್ಲಿ ಇರಬೇಡ. " ಎಂದು ಗುಡುಗಿ ಅಲ್ಲಿ ನಿಲ್ಲದೆ ಹೊರಟು ಹೋದರು.

ಈ ಮಾತಿನಿಂದ ಸುಮಿತ್ರೆಯ ಮನಸ್ಸಿಗೆ ನೋವಾಗುವ ಬದಲು ಒಂದು ಬಗೆಯ ಸಮಾಧಾನವೇ ಉಂಟಾಯಿತು. ವೆಂಕಪ್ಪಯ್ಯನವರು ತನ್ನ ಮುಂದಿನ

ವ್ಯಾಸಂಗದ ಬಗ್ಗೆ ಗುಡುಗಿಯೋ, ಸುಪ್ರಸನ್ನರಾಗಿಯೋ ಅಂತೂ ತನ್ನನ್ನು ತನ್ನ ಪಾಡಿಗೆ ಇರಲು ಬಿಟ್ಟುಕೊಟ್ಟರಲ್ಲ—ಎಂದೇ ಅವಳ ಸಮಾಧಾನ. ಅವಳಿಗೆ ಶಾರದೆಯ ಸಂಪರ್ಕವಾದಲಾಗಾಯಿತು ತಾನು ಹೆಚ್ಚು ಕಲಿತು, ಸಮಾಜಕ್ಕೆ ಸೇವೆ ಸಲ್ಲಿಸಬೇಕೆನ್ನುವ ಮಹತ್ವಾಕಾಂಕ್ಷೆ ಬೀಜರೂಪದಲ್ಲಿ ಹುದುಗಿದ್ದುದು ಸೊಂಪಾಗಿ ನೀರುಂಡು ಬೆಳೆವ ಸಸಿಯಂತಾಗಿತ್ತು. ತನ್ನ ಸುತ್ತಮುತ್ತಲಿನ ಜೀವನದ ರೋಗರುಜಿನಗಳು, ಕಷ್ಟ ಕಾರ್ಪಣ್ಯಗಳನ್ನು ಕಂಡು ಅವಳ ಎಳೆಯ ಮನಸ್ಸಿಗೆ ತುಂಬಾ ಕ್ಲೇಶವಾಗುತ್ತಿತ್ತು. ಅವುಗಳನ್ನು ಹೇಗಾದರೂ ನಿವಾರಣೆ ಮಾಡಬೇಕೆಂಬ ಬಯಕೆಯಾಗುತ್ತಿತ್ತು.

ಹೆಣ್ಣಿನ ಮಂಟಪದಲ್ಲಿ ಶಾರದೆಯ ಬಾಲವೆಂಬಂತೆ ಓಡಾಡುತ್ತಿದ್ದ ಅವಳಿಗೆ ಅಲ್ಲಿ ನಡೆಯುತ್ತಿದ್ದ ಸ್ತ್ರೀಜನೋದ್ಧಾರದ ವಿಷಯಿಕವಾದ ಚರ್ಚೆ, ಭಾಷಣ ವಾಚನಗಳಿಂದ ಸ್ಫೂರ್ತಿ ಬಂದು ತಾನು ಹೆಚ್ಚು ಕಲಿತು, ಒಬ್ಬ ಡಾಕ್ಟರಾಗಬೇಕೆಂಬ ಆಸೆಯಾಗುತ್ತಿತ್ತು.

ಈ ಆಸೆ ಅವಳ ಮನಸ್ಸಿನಲ್ಲಿ ಬೆಳೆಯಲು ಸದಾಕಾಲ ಒಂದಲ್ಲ ಒಂದು ಕಾಹಿಲೆಯಿಂದ ನರಳುತ್ತಿದ್ದ ಅವಳ ಮನೆಯ ಸಂಸಾರವೇ ಕಾರಣವಾಗಿತ್ತು. ತಾಯಿ ಸೀತಮ್ಮನವರಂತೂ ಮಲೇರಿಯ ಜ್ವರಕ್ಕೆ ಮದುವೆಯಾಗಿದ್ದರೆನ್ನಬೇಕು. ಅವರು ಮೂರು ತಿಂಗಳು ಗಟ್ಟಿಮುಟ್ಟೆಯಾಗಿದ್ದರೆ, ಇನ್ನು ಒಂಭತ್ತು ತಿಂಗಳು ಜ್ವರದಿಂದ ಹಾಸಿಗೆಯಲ್ಲಿ ಬಿದ್ದಿರುತ್ತಿದ್ದರು. ಅವರು ಇಂಗ್ಲಿಷ್ ಔಷಧಗಳನ್ನು ಸೇವಿಸಿದ್ದರೆ ಮಲೇರಿಯಾದ ಕಾಟದಿಂದ ಎಂದೋ ಮುಕ್ತರಾಗುತ್ತಿದ್ದರು. ಆದರೆ ಅವರಿಗೂ ಇಂಗ್ಲಿಷ್ ಔಷಧಗಳಿಗೂ ಬದ್ಧ ದ್ವೇಷ. ತಾವು ಸತ್ತರೂ ಇಂಗ್ಲಿಷ್ ಔಷಧಗಳನ್ನು ತೆಗೆದುಕೊಳ್ಳುವುದಿಲ್ಲವೆನ್ನುವ ಒರಟು ಹಠ ಅವರದು. ಹೀಗಾಗಿ ನಾಟಿ ಔಷಧಗಳಿಂದ ಕೇವಲ ತಾತ್ಕಾಲಿಕ ಗುಣ ಸಿಕ್ಕುತ್ತಿತ್ತು. ಬೇಸಿಗೆಯಲ್ಲಿ ಗುಣವಾಗಿದ್ದಂತೆ ಕಾಣುತ್ತಿದ್ದ ಜ್ವರ ಮಳೆಗಾಲ ಕಾಲಿಟ್ಟೊಡನೆಯೇ ಅದೂ ಧಾಳಿ ಇಡುತ್ತಿತ್ತು. ಒಮ್ಮೆ ಬಂದರೆ ಮತ್ತೆ ಅದು ಬಿಟ್ಟು ಕದಲುತ್ತಿದ್ದುದು ಅದಕ್ಕೆ ಮನಸ್ಸು ಬಂದಾಗಲೇ ಹೊರತು, ಸೀತಮ್ಮನವರು ಮಾಡುವ ಔಷಧ :ಪಥ್ಯಗಳಿಗೆ ಹೆದರಿ ಅಲ್ಲ. ಯಾಕೆಂದರೆ ಆರಂಭದಲ್ಲಿ ಅವರು ಔಷಧ ಪಥ್ಯದಲ್ಲಿ ತುಂಬಾ ಎಚ್ಚರ ವಹಿಸಿದ್ದರು. ಆದರೆ ದಿನ ನಿತ್ಯ ಬರುವ ಕಾಹಿಲೆಗೆ ಯಾರು ಅತ್ತಾರು? ಯಾವಾಗಲೂ ಇರುವ ಗೋಳು, ತಮ್ಮ

ಜನ್ಮಕ್ಕೆ ಅಂಟಿದ ಜಾಡ್ಯ ಎಂದು ಸೀತಮ್ಮನವರು ನಿರ್ಲಕ್ಷ್ಯ ತಾಳಿದರು.

ವೆಂಕಪ್ಪಯ್ಯನವರಂತೂ ಸರಿಯೇ ಸರಿ. ಹೆಂಡತಿ ಆರೋಗ್ಯವಾಗಿದ್ದಾಗ ದುಡಿಸಿಕೊಳ್ಳಲು ಮುಂದೆ ಬರುತ್ತಿದ್ದ ಅವರು ಹೆಂಡತಿ ಕಾಹಿಲೆ ಮಲಗಿದಾಗ, ನೀನು ಬದುಕಿದ್ದೀಯಾ ಸತ್ತಿದ್ದೀಯಾ ಎಂದು ವಿಚಾರಿಸಿಕೊಳ್ಳುತ್ತಿರಲಿಲ್ಲ. ಹೆಂಡತಿಯನ್ನು ಕಂಡರೆ ಅವರಿಗೆ ಅಷ್ಟು ತಾತ್ಸಾರ, ನಿರ್ಲಕ್ಷ್ಯವೆಂದಲ್ಲ. ಅವರು ಸದಾ ಊರುಗಳನ್ನು ತಿರುಗುತ್ತಿರುವ ಬ್ರಾಹ್ಮಣ. ಬೆಳಿಗ್ಗೆ ಹೋದರೆ ಸಂಜೆಗೆ ಮನೆಯ ದರ್ಶನ. ಅನೇಕ ಬಾರಿ ಪರ ಊರುಗಳಲ್ಲಿ ಅನೇಕ ದಿನಗಳು ಉಳಿದು ಬಿಡುತ್ತಿದ್ದುದೂ ಉಂಟು. ತಿರುಗುವ ಪುಢಾರಿ ಬ್ರಾಹ್ಮಣ ವೆಂಕಪ್ಪಯ್ಯನವರಿಗೆ ಹೆಂಡತಿಯ ಚಿಂತೆ ಎಲ್ಲಿಯದು? ಅವರ ಚಿಂತೆ ಯಾರ ಮನೆಯಲ್ಲಿ ಶ್ರಾದ್ಧ? ಯಾರಿಗೆ ತಿಥಿ? ಎಲ್ಲಿ ಹಬ್ಬ? ಎಲ್ಲಿ ಹರಿದಿನ? ಎಂದು ಪಂಚಾಂಗದ ತಿಥಿ ನಕ್ಷತ್ರಗಳನ್ನು ನೋಡುವುದರಲ್ಲಿ ಅವರಿಗೆ ಎಲ್ಲ ವಿರಾಮ ಸರಿಯುತ್ತಿತ್ತು. ಇಂಥದುದರಲ್ಲಿ ಹೆಂಡತಿಯ ಕಾಹಿಲೆಗೆ ಗಮನ ಕೊಡಲು, ಔಷಧೋಪಚಾರ ಮಾಡಲು ಬಿಡುವೆಲ್ಲಿ?

ಇಷ್ಟಕ್ಕೂ ವೆಂಕಪ್ಪಯ್ಯನ ಸ್ವಭಾವವೇ ಹಾಗೆ. ಹೆಂಡತಿಯರನ್ನು ಹೆಚ್ಚು ಸಲಿಗೆಯಿಂದ ಕಾಣಬಾರದೆಂಬ ಸಿದ್ಧಾಂತವುಳ್ಳವರು. ಹೆಚ್ಚು ಸಲಿಗೆ ಕೊಟ್ಟರೆ—ಹೆಣ್ಣು ಹೆಂಡತಿಯೇ ಇರಲಿ, ಮಗಳೇ ಇರಲಿ, ಹದ್ದು ಮೀರಿ ಹೆಗಲೇರುವರೆಂದೇ ಅವರ ಅಭಿಪ್ರಾಯ. ಆದುದರಿಂದಲೇ ಒಳಗೆ ಪ್ರೀತಿ ಇದ್ದರೂ ಅದನ್ನು ಪ್ರಕಟ ಮಾಡುವ ಗೋಜಿಗೆ ಹೋಗದೆ, ಹೆಂಡತಿಯೊಡನೆ ಬಿಗುಮಾನದಿಂದಲೇ ವರ್ತಿಸುತ್ತಿದ್ದರು. ಅಷ್ಟೇ ಬಿಗುಮಾನ ಮಗಳು ಸುಮಿತ್ರೆಯ ಜತೆಯಲ್ಲಿ ಮಾತನಾಡುವಾಗ ಇರುತ್ತಿತ್ತು.

ಇನ್ನು ದೊಡ್ಡ ಮಗಳು ಸರೋಜೆಯೊಡನೆ ಅವರು ಮನಬಿಚ್ಚಿ ಮಾತನಾಡುತ್ತಿದ್ದರು. ಅವಳು ತಂದೆಯ ತೋಳುತಕ್ಕೆಯಲ್ಲಿ ಬೆಳೆದಿದ್ದಳು. ಹೀ-ಗಾಗಿ ತಂದೆಯಲ್ಲಿ ಪೂರಾ ಅಕ್ಕರೆ. ಅವಳ ಬಗೆಗೆ ತಂದೆಗೂ ವಿಶೇಷ ಮಮತೆ. ಅವಳೊಡನೆ ಬಾಯಿ ತುಂಬಾ ಮಾತನಾಡುತ್ತಿದ್ದರು. ಅವಳ ಮಕ್ಕಳನ್ನು ಎತ್ತಿಕೊಂಡು ಮುದ್ದು ಮಾಡುತ್ತಿದ್ದರು. ಮಗಳು ತೌರುಮನೆಯಲ್ಲಿ ಇರುವಷ್ಟು ಕಾಲ ಮನೆಗೆ ಇದು ಬೇಕೇ ಅದು ಬೇಕೇ ಎಂದು ವಿಚಾರಿಸಿಕೊಂಡು ಸಾಲ ಮಾಡಿಯಾದರೂ ತಂದುಹಾಕುತ್ತಿದ್ದರು. ದೊಡ್ಡ ಮಗಳ ದೆಸೆಯಿಂದ

ಲಾದರೂ ವೆಂಕಪ್ಪಯ್ಯ ನಗುನಗುತ್ತಾ ಸಂತೋಷದಿಂದ ಇರುವರಲ್ಲ ಎಂದು ಸೀತಮ್ಮನವರ ಸಂತೋಷ. ತಾವು ಅವರ ಭಾಗಕ್ಕೆ ಕೆಟ್ಟವರೇ ಆದರೂ ತನ್ನ ಮಗಳು ಅವರ ಪಾಲಿಗೆ ಒಳ್ಳೆಯವಳಾಗಿರುವಳಲ್ಲ ಎಂದಷ್ಟೇ ಅವರ ತೃಪ್ತಿ.

ಸರೋಜೆಯ ಸ್ವಭಾವವೂ ಅಂತಹದು. ಸುಮಿತ್ರೆ ಎಷ್ಟು ಹಠಮಾರಿಯೋ, ಎಷ್ಟು ಗಟ್ಟಿಗಿತ್ತಿಯೋ ಅಷ್ಟೇ ಮೃದು ಸರೋಜೆ. ಅವಳಿಗೆ ತಂದೆಯ ಮಾತು ದೇವರ ವಾಕ್ಯ. ಅಷ್ಟೇ ಏಕೆ ಅವಳು ಯಾರ ಮನಸ್ಸನ್ನು ನೋಯಿಸುವ ಯಾವ ಕೆಲಸ ಮಾಡಲೂ ಮುಂದುವರೆಯುತ್ತಿರಲಿಲ್ಲ. ವೆಂಕಪ್ಪಯ್ಯ ಹೆಣ್ಣು ಮಕ್ಕಳಿಗೆ ಓದು ಬರಹವೇಕೆಂದು ಆಕ್ಷೇಪಿಸಿದಾಗ ಸರೋಜೆ ತನ್ನ ಹೆಸರು ಬರೆಯುವಷ್ಟು ಅಕ್ಷರ ಕಲಿಯುವುದರಲ್ಲಿ ತನ್ನ ವ್ಯಾಸಂಗವನ್ನು ಮುಕ್ತಾಯ ಮಾಡಿದ್ದಳು. ಎಂಟು ವರ್ಷಕ್ಕೆ ವೆಂಕಪ್ಪಯ್ಯನವರ ಇಚ್ಛೆಯಂತೆ— ಮಕ್ಕಳ ಆಟಪಾಟಗಳನ್ನು ಬಿಟ್ಟು ಸೀರೆಯುಟ್ಟು ಪುಟ್ಟ ಮದುವಣಗಿತ್ತಿಯಂತೆ ಅಡಿಗೆಮನೆ ಬಿಟ್ಟು ಹೊರಗೆ ಕಾಲಿಡದಾದಳು. ಹನ್ನೆರಡನೆ ವರ್ಷಕ್ಕೆ ಪೂರ್ವಾಚಾರ ಪದ್ಧತಿಯಂತೆ ಅವಳಿಗೆ ಮದುವೆಯಾಯಿತು.

ಅವಳ ಅದೃಷ್ಟಕ್ಕೆ ತಕ್ಕಂತೆ ಶನಿವಾರ ಸಂತೆಯಲ್ಲಿ ತಕ್ಕಮಟ್ಟಿಗೆ ಉಣ್ಣಲು ತಿನ್ನಲು ಇದ್ದ ಹಿರಣ್ಣಯ್ಯ ಸಿಕ್ಕಿದ. ಅವನು ಸರೋಜೆಗೆ ಕೊಂಚ ದೊಡ್ಡವನಾದರೂ ಅವಳ ರೂಪ, ಗುಣ, ನಡತೆ ಕಂಡು ಅವಳನ್ನು ಕೈ ಹಿಡಿಯಲು ಒಪ್ಪಿದ. ಮದುವೆಯಾದ ಆರು ತಿಂಗಳಿಗೆ ಸರೋಜೆ ದೊಡ್ಡವಳಾಗಿ, ಹದಿಮೂರನೆಯ ವಯಸ್ಸಿನಲ್ಲಿಯೇ ಗೃಹಿಣಿಪಟ್ಟ ಕಟ್ಟಿಕೊಂಡು, ಹದಿನಾಲ್ಕನೆ ವಯಸ್ಸಿಗೆ ಮಗುವಿನ ತಾಯಿಯೂ ಆದಳು. ಅದಾದ ಮೇಲೆ ಎರಡೆರಡು ವರ್ಷಕ್ಕೆ ಒಂದೊಂದು ಮಗುವಿನಂತೆ, ಪತಿದೇವನಿಗೆ ವಿಧೇಯ ಸತಿಯಂತೆ, ಹೆರಿಗೆ ತನ್ನನ್ನು ಕೊಲ್ಲುತ್ತಿದ್ದರೂ ಅದನ್ನು ಪರಿಗಣಿಸದೆ, ಅರ್ಪಿಸುತ್ತಾ ಬಂದಿದ್ದಳು. ಮದುವಯಾದ ಹತ್ತು ವರ್ಷಕ್ಕೆ, ತನ್ನ ಇಪ್ಪತ್ತೆರಡನೆ ಪ್ರಾಯದಲ್ಲಿ ಸರೋಜೆ ಐದು ಮಕ್ಕಳ ತಾಯಿ. ದೇವರ ದಯೆಯಿಂದ ಎರಡು ಮಕ್ಕಳು ಹುಟ್ಟುತ್ತಲೇ ತೀರಿಕೊಂಡಿದ್ದರು. ಈಗ ಮತ್ತೆ ಬಸಿರಿಯಾಗಿದ್ದಳು. ಈ ಬಾರಿ ಅವಳಿಗೆ ದೈವಶಾಪವಾಗಿ ಪರಿಣಮಿಸಿತ್ತು.

ಸರೋಜೆ ಬಾಲ್ಯದಿಂದಲೂ ಸರಿಯಾದ ಪುಷ್ಟಿಯಾದ ಆಹಾರ ಕಾಣದೆ

ಬೆಳೆದ ಹುಡುಗಿಯಾದುದರಿಂದ ತೆಳುವಾದ ಮೈಕಟ್ಟು ಅವಳದು. ಅವಳಿಗೆ ಲತಾಂಗಿ ಎಂದು ಹೇಳಿದರೆ ಅದು ಅನ್ವರ್ಥನಾಮ. ಅವಳ ಮುಖದಲ್ಲಿ ಎಂತಹ ವಿಕಾರವಂತನನ್ನೂ ತಪ್ತಗೊಳಿಸುವಂತಹ ದೈವಿಕವಾದ ಸೌಮ್ಯಕಳೆ. ಈ ಸೌಮ್ಯ ಕಳೆ ಮಗುವಿನ ಮುಗ್ಧತೆ—ಕಡೆತನಕ ಅವಳಲ್ಲಿ ಮನೆ ಮಾಡಿಕೊಂಡಿತ್ತು. ಅವಳ ಈ ಗುಣಗಳಿಗೆ ಕುಂದಣವಿಟ್ಟಂತೆ, ಕಷ್ಟಸಹಿಷ್ಣುತೆ, ಸಹನೆ ಇವುಗಳು ಅವಳ ಜೀವನದ ಜೀವಾಳವಾಗಿದ್ದವು. ಇವುಗಳ ಬಲದಿಂದಲೇ ತನ್ನ ಆರೋಗ್ಯಕ್ಕೆ ಮೇಲಿಂದ ಮೇಲೆ ಸಂಭವಿಸುವ ತಾಯಿತನ ಗಂಡಾಂತರವಾಗುವುದನ್ನು ತಿಳಿದಿದ್ದರೂ ಗಂಡನನ್ನು ಒಂದು ದಿನವೂ ಎದುರಿಸಲು ಹೋಗಿರಲಿಲ್ಲ. ಒಂದು ದಿನವಾದರೂ ಗಂಡನನ್ನು ಬೇಸರದಿಂದ ಮಾತನಾಡಿಸಿರಲಿಲ್ಲ. ಹೆಣ್ಣು ಜನ್ಮ ತನ್ನದು, ಹೆಣ್ಣಾಗಿ ಹುಟ್ಟಿದ ಮೇಲೆ ಹೆಣ್ತನದ ಭವಣೆ ಅನುಭವಿಸುವುದು ತನ್ನ ಕರ್ಮ. ಇದಕ್ಕಾಗಿ ಯಾರನ್ನು ಹಳಿಯಬೇಕು? ಎನ್ನುವ ವೇದಾಂತ ಅವಳದು. ಅವಳ ಜೀವನದ ಇಷ್ಟವೆಂದರೆ ತಾನು ಸಾಧ್ವಿಯಾಗಿ ಗಂಡನ ಕಣ್ಣುಮುಂದೆಯೇ ತೀರಿಕೊಳ್ಳಬೇಕೆಂಬುದು. ಅವಳ ಕಡೆಯ ಆಸೆಯನ್ನು ಭಗವಂತ ಈಡೇರಿಸಿ ಬಿಟ್ಟ.

ಈ ಬಾರಿ ಆದ ಹೆರಿಗೆ ಸರೋಜೆಯ ಜೀವವನ್ನೇ ಹಿಂಡಿತೆನ್ನಬೇಕು. ಹೆರಿಗೆಯ ಕಾಲದಲ್ಲಿ ಆದ ಶ್ರಮದಿಂದ ಅವಳ ಬಡಕಲು ದೇಹ ಜರ್ಜರಿಸಿ ಹೋಗಿತ್ತು. ಮೊದಲೇ ರಕ್ತವಿಲ್ಲದೆ ಜಿರಳೆಯಂತೆ ಇದ್ದಳು. ತಾರುಣ್ಯದಲ್ಲಿಯೇ ನಾಲ್ಕೈದು ಮಕ್ಕಳ ತಾಯಿಯಾಗುವುದೆಂದರೆ ಸುಮ್ಮನಾಯಿತೇ? ಒಂದೊಂದು ಮಗುವಿನ ಜನನದಲ್ಲಿಯೂ ಅವುಗಳನ್ನು ರೂಪಿಸುವುದರಲ್ಲಿ ತನ್ನ ರಕ್ತಮಾಂಸ ಬಸಿದಿದ್ದಳು. ಕಡೆಗೆ ಅವಳದಾಗಿ ಉಳಿದದ್ದು—ಹಂದರವೆನ್ನಬಹುದಾಗಿದ್ದ ಅವಳ ದೇಹ, ಬಿಳಿಚಿಕೊಂಡ ಮುಖ, ನಿಸ್ಸತ್ವವಾದ ಕೈಕಾಲುಗಳು, ಆದರೂ ಅವಳ ಮುಖದಲ್ಲಿ ಮಾತ್ರ ಶಾಂತಿ, ಸಹನೆಗಳು ಕದಲಿರಲಿಲ್ಲ. ಅವಳು ಇದಕ್ಕೂ ನೂರ್ಮಡಿಯಾದ ಕಷ್ಟ ಸಹಿಸಲು ಸಿದ್ಧವಿರುವೆನೆಂದು ಭರವಸೆ ಕೊಡುತ್ತಿದ್ದವು. ಇದು ಉಳಿದವರ ಪಾಲಿಗೆ ಕೇವಲ ಬರಡು ಭರವಸೆಯಾಯಿತು. ಆ ಸಾಧ್ವಿ ಇಹಜೀವನದಲ್ಲಿ ತನ್ನಿಂದ ಸಲ್ಲಬೇಕಾದ ಋಣಸಂದಾಯಮಾಡಿ ತನ್ನ ಲೋಕಕ್ಕೆ ನಡೆದೇ ಬಿಟ್ಟಳು.

ಆರನೆಯ ಹೆರಿಗೆಗೆ ಅವಳ ಇಹಜೀವನಕ್ಕೆ ಕೊನೆ ಬಂದಿತು. ಹೆರಿಗೆ

ಯಾಗುವ ತನಕ ಸಾಕಷ್ಟು ಆರೋಗ್ಯವಾಗಿಯೇ ಇದ್ದ ಸರೋಜೆಗೆ—ಹೆರಿಗೆಯ ಮುಂಚೆ, ಜ್ವರ ಕಾಣಿಸಿಕೊಂಡಿತು. ತಲೆನೋವು ಬೇರೆ, ತಲೆಗೂದಲೆಲ್ಲ ಉದುರಿ ಹೋಯಿತು. ಹಿರಣ್ಣಯ್ಯ ಮಾಡಿದ ಎಲ್ಲ ಔಷಧೋಪಚಾರ ಅವಳನ್ನು ಗುಣಪಡಿಸದೆ ಹೋದವು. ಅವಳ ದೇಹದ ಸ್ಥಿತಿ ಹೀಗೆ ಇರುವಾಗಲೇ ಗಾಬರಿಯಾಗಿ ತನ್ನ ಅತ್ತೆ ಮಾವಂದಿರಿಗೆ ಕಾಗದ ಬರೆದು ಹಾಕಿದ ಹಿರಣ್ಣಯ್ಯ. ಅವರಿಬ್ಬರೂ ಶನಿವಾರ ಸಂತೆಗೆ ಓಡಿಬಂದರು. ಜತೆಯಲ್ಲಿ ಸುಮಿತ್ರೆಯೂ ಬಂದಿದ್ದಳು. ಅವಳಿಗೆ ಅಕ್ಕನ ರೂಪ ಕಂಡು ಹೆದರಿಕೆಯೇ ಆಯಿತು. ಹೇಗಿದ್ದ ಅಕ್ಕ ಹೇಗೆ ಆಗಿಬಿಟ್ಟಳೆಂದು ಅವಳು ಹೌಹಾರಿ ಬಿದ್ದಳು. ಅವಳಿಗೆ ತನ್ನ ಅಕ್ಕ ಇನ್ನು ಉಳಿಯುವುದಿಲ್ಲವೆಂದು ತಿಳಿದುಹೋಯಿತು. ಸಾವಿನ ದವಡೆಯಲ್ಲಿರುವ ಅಕ್ಕನನ್ನು ಬದುಕಿಸಿಕೊಳ್ಳುವ ಶಕ್ತಿ ತನಗೆ ಇಲ್ಲವಾಯಿತೇ ಎಂದು ಸುಮಿತ್ರೆ ಮುಮ್ಮಸೆ ಮರುಗಿದಳು.

ಆದರೇನು—ಸರೋಜೆಯ ಸಾವು ನಿಶ್ಚಿತವಾಗಿತ್ತು. ಅದಕ್ಕೆ ದಾರಿ ಮಾಡುವಂತೆ, ಅವಳಿಗೆ ಹೆರಿಗೆ ನೋವು ಬೇರೆ ಕಾಣಿಸಿಕೊಂಡಿತು. ತುಂಬಾ ಕಷ್ಟದಿಂದ ಹೆರಿಗೆ ಆಯಿತು. ಮಗುವೇನೋ ಉಳಿದುಕೊಂಡಿತು. ಆದರೆ ಮಗುವಿನ ಪಾಲಿಗೆ ತಾಯಿ ಕೇಳಿಕೊಂಡು ಬಂದಿರಲಿಲ್ಲ. ಮಗು ಹುಟ್ಟಿದ ಹತ್ತನೆಯ ದಿನಕ್ಕೆ ಮಗುವಿನ ತಾಯಿ ಸರೋಜೆ, ಬಾಣಂತಿ ಜ್ವರದಿಂದ ತೀರಿಕೊಂಡು ಬಿಟ್ಟಳು.

ಇದು ಸುಮಿತ್ರೆಯ ಜೀವನದಲ್ಲಿ ಎಂದೆಂದಿಗೂ ಮರೆಯಲಾಗದ ಘಟನೆ. ಸರೋಜೆ ಸಾಯುವ ಮುನ್ನ ತನ್ನ ಸಾವು ಖಚಿತವೆಂದು ತಿಳಿದಿದ್ದಳೋ ಏನೋ-ಗಂಡನನ್ನು, ತಂದೆ ತಾಯಿಗಳನ್ನು ಬಳಿಯಲ್ಲಿ ಕೂಡಿಸಿಕೊಂಡು ತನ್ನ ಕಡೆಯಾಸೆ ತಿಳಿಸಿದ್ದಳು. ತಾನು ಸತ್ತ ಮೇಲೆ ಮಕ್ಕಳನ್ನು ಕಂಗಾಲರನ್ನಾಗಿ ಮಾಡಬಾರದೆಂದೂ, ಹಿರಣ್ಣಯ್ಯ ಮತ್ತೆ ಮದುವೆಯಾಗಿ ಸುಖವಾಗಿರಬೇಕೆಂದೂ, ಇದರಲ್ಲಿ ತನ್ನ ತಂದೆತಾಯಿಗಳು ಹಿರಣ್ಣಯ್ಯನಿಗೆ ನೆರವಾಗಬೇಕೆಂದೂ ಸ್ಪಷ್ಟವಾಗಿ ತಿಳಿಸಿದ್ದಳು. ಆ ಮಾತುಗಳನ್ನು ಅವರೆಲ್ಲ ಆ ಗಳಿಗೆಯಲ್ಲಿ ಉಪೇಕ್ಷಿಸಿದರೂ ಸರೋಜೆ ತೀರಿಕೊಂಡಮೇಲೆ ಆ ಮಾತಿನ ಪ್ರಾಮುಖ್ಯತೆ ಎಷ್ಟೆಂಬುದು ಅರಿವಾಗದೆ ಇರಲಿಲ್ಲ.

ಹಿರಣ್ಣಯ್ಯನಿಗೆ ಸರೋಜೆ ತೀರಿಕೊಂಡಾಗ ಇನ್ನೂ ನಲವತ್ತು ವರ್ಷ

ವಯಸ್ಸು. ಅವನು ಮದುವೆಯಾದದ್ದೇ ಕೊಂಚ ವಯಸ್ಸು ಮೀರಿ. ಅವನೊಡನೆ ಸರೋಜೆ ಇದ್ದಷ್ಟು ದಿನ ಅವನ ಜೀವನದಲ್ಲಿ ಗೃಹಶಾಂತಿ ವಿಪುಲವಾಗಿತ್ತು. ಅವನಿಗೆ ಸರೋಜೆಯಿಂದ ಸಂಪೂರ್ಣವಾದ ದಾಂಪತ್ಯ ಸುಖ ಸಿಕ್ಕಿತ್ತು. ಅವಳನ್ನು ಅವನು ಪ್ರಾಣಕ್ಕಿಂತ ಹೆಚ್ಚಿಗೆ ಪ್ರೀತಿಸುತ್ತಿದ್ದ. ಅವಳ ಮೇಲಿನ ಪ್ರೀತಿಯೇ ಅವಳ ಮೃತ್ಯುವಾಗುವುದೆಂದು ಅವನು ಮಾತ್ರ ತಿಳಿಯದೆ ಹೋದ. ಅವಳ ಮೇಲಿನ ಅವಿಭುಕ್ತವಾದ ಅನುರಾಗ ಅವನಿಗೆ ನಾಲ್ಕು ಮುಕ್ತಾಫಲಗಳನ್ನು ಕೊಟ್ಟಿದ್ದವು. ಕಡೆಯ ಫಲ ಬಿಡುವಾಗ ತಾಯಿಗಿಡವೇ ಒಣಗಿ ಹೋಯಿತು. ಅದು ಕಮರಿ ಹೋಗಲು ತಾನೇ ಕಾರಣನೆಂದು ಹಿರಣ್ಣಯ್ಯನಿಗೆ ಅನಿಸಿದ್ದು ಈಚಿಗೆ. ಆದರೆ ಈ ವೇಳೆಗಾಗಲೇ ಕಾಲ ಮಿಂಚಿತ್ತು. ಕಾಲ ತನ್ನ ಕೆಲಸವನ್ನು ಮಾಡಿ ಮುಗಿಸಿದ್ದ.

ಸರೋಜೆ ತನ್ನನ್ನು ಬಿಟ್ಟು ಪರಲೋಕ ಸೇರಿದ್ದರೂ ತನಗಾಗಿ ಎಷ್ಟು ವ್ಯಥೆ ಪಡುವಳೋ ಎಂಬುದನ್ನು ತೋರಿಸಲೆಂಬಂತೆ ಅವಳು ಬಿಟ್ಟು ಹೋಗಿದ್ದ ಹಸುಗೂಸು ತಾಯಿಗಾಗಿ ಹಂಬಲಿಸುತ್ತಿತ್ತು. ಅತ್ತು ಅತ್ತು ಕಂಗೆಟ್ಟ ತಾಯಿ ಇಲ್ಲದ ಆ ಮಗುವನ್ನು ನೋಡಲಾರದೆ ಅದನ್ನು ಹೇಗೆ ಸಾಕುವುದೆಂಬುದನ್ನು ಬಗೆಹರಿಸಲಾಗದೆ—ಏನಾದರೂ ಸರೋಜೆಯ ಮಕ್ಕಳಿಗೆ ಮಲತಾಯಿಯನ್ನು ತರಬಾರದೆಂದು ನಿಶ್ಚಯಿಸಿದ್ದ ಹಿರಣ್ಣಯ್ಯನ ಮನೋನಿರ್ಧಾರ ಬುಡಮೇಲಾಗಿ ಅವನು ಮತ್ತೆ ಮದುವೆಯಾಗಲು ಒಪ್ಪಿದ್ದ. ಆದರೆ ಆ ಮದುವೆಗೆ ಒಂದು ಶರತ್ತು ಹಾಕಿಕೊಂಡಿದ್ದ. ಮತ್ತೆ ಮದುವೆಯಾಗುವುದಾದರೆ—ಇನ್ನೊಬ್ಬಳನ್ನು ಮಡದಿಯಾಗಿ ತಂದುಕೊಂಡು, ಮಕ್ಕಳ ಭಾಗಕ್ಕೆ ಮಲತಾಯಿ ತರಬಾರದೆಂದೂ ಸರೋಜೆಯ ಮಕ್ಕಳನ್ನು ತನ್ನ ಹೊಟ್ಟೆಯ ಮಕ್ಕಳಂತೆ ನೋಡಿಕೊಳ್ಳುವ ವ್ಯಕ್ತಿಯನ್ನು ಮದುವೆಯಾಗಿ ಸರೋಜೆಯ ಆತ್ಮಕ್ಕೆ ಶಾಂತಿ ದೊರೆಯುವಂತೆ ಮಾಡಬೇಕೆಂದೂ ಆಲೋಚಿಸಿ, ಸರ್ವ ರೀತಿಯಲ್ಲಿ ಉತ್ತಮ ವಧುವಾಗಿ ತೋರಿದ್ದ ಸುಮಿತ್ರೆಯನ್ನು ಮದುವೆಯಾಗಲು ಇಷ್ಟಪಟ್ಟಿದ್ದ.

ವೆಂಕಪ್ಪಯ್ಯನಿಗೆ ಹಿರಣ್ಣಯ್ಯನ ಅಭೀಷ್ಟ ತಿಳಿದಾಗ ಅವರಿಗೆ ಹಿರಿಹಿರಿ ಹಿಗ್ಗುವಷ್ಟು ಸಂತೋಷವಾಯಿತು. ಅವರ ಬಯಕೆಯೂ ಅದೇ ಆಗಿತ್ತು. ಒಣಗಿ ಹೋದ ಕೊಂಬೆಯಲ್ಲಿ ಹೊಸ ಬಾಂಧವ್ಯದ ಜೀವರಸ ತುಂಬಿ ಮತ್ತೆ ಹೊಸ ಚಿಗುರು ಕಾಣುವ ಆಸೆಯಿಂದ ಇದ್ದರು. ಅವರು ಹೀಗೆ ಆಸೆ ಪಡಲು

ಕಾರಣ ಸರೋಜೆಯ ಮಕ್ಕಳು, ಬೇರೆ ಮಲತಾಯಿ ಬಂದರೆ, ಕಷ್ಟಪಡಬೇಕಾಗುವುದೆಂಬ ಅಂಜಿಕೆ ಇತ್ತು. ಅವರು ಬಯಸಿದ್ದೂ, ಹಿರಣ್ಣಯ್ಯ ಹೇಳಿದ್ದೂ ಒಂದೇ ಆಗಿತ್ತು. ಸುಮಿತ್ರೆ ಅವರಿಬ್ಬರ ನಡುವೆ ಸೇತುವೆಯಂತೆ ಕಂಡಳು. ಈ ಮದುವೆಗೆ ಅಗಲಿದ ಸರೋಜೆಯ ಅನುಮತಿ ಆಶೀರ್ವಾದ ಇದ್ದಿತೆನ್ನಲು, ಸರೋಜೆ ಕಡೆಗಾಲದಲ್ಲಿ ಹೇಳಿದ್ದ ಮಾತುಗಳು, ವೆಂಕಪ್ಪಯ್ಯನವರು ಹಿರಣ್ಣಯ್ಯನಿಗೆ ಮತ್ತೆ ಮದುವೆ ಮಾಡಿಸಲು ಆಸಕ್ತಿ ವಹಿಸಬೇಕೆಂಬ ಮಾತು, ಸುಮಿತ್ರೆಯನ್ನು ತನ್ನ ಗಂಡನಿಗೆ ಮದುವೆ ಮಾಡಿ ಎಂಬುದರ ಪರ್ಯಾಯಭಾವವೇ ಎಂದು ಅವರೆಲ್ಲರೂ ತಿಳಿದರು.

ಸೀತಮ್ಮನಿಗಾಗಲೀ, ಸುಮಿತ್ರೆಗಾಗಲೀ ಈ ಅರ್ಥ ಹೊಳೆಯಿತೋ ಇಲ್ಲವೋ. ಅವರಂತೂ ಈ ಮದುವೆಯ ವಿಷಯದಲ್ಲಿ ಹೇಳಿಕೊಳ್ಳುವಷ್ಟು ಆಸಕ್ತಿ ವಹಿಸಲಿಲ್ಲ. ಸುಮಿತ್ರೆ ಈ ಮದುವೆಯ ವಿಷಯವನ್ನು ಸಂಪೂರ್ಣವಾಗಿ ವಿರೋಧಿಸುವಳೆಂದು ಸೀತಮ್ಮನ ಮನಸ್ಸಿಗೆ ನಾಟಿತ್ತು. ಸರೋಜೆಯ ಮಕ್ಕಳ ಉದ್ಧಾರಕ್ಕಾಗಿ, ತನ್ನ ಮಗಳ ಬಲಿ ಕೊಡುವ ವಿಷಯದಲ್ಲಿ ಆಕೆ ಯಾವುದನ್ನೂ ನಿರ್ಧರಿಸಲಾರದವರಾಗಿದ್ದರು. ಸುಮಿತ್ರೆಯ ಮದುವೆಯ ಪ್ರಶ್ನೆ, ಅವಳನ್ನು ಕುರಿತದ್ದು. ಇದರಲ್ಲಿ ಯಾರ ಬಲವಂತವಿರಬಾರದೆಂದು ಅವರ ಅಭಿಮತ. ಆದರೆ ಈ ವಿಷಯದಲ್ಲಿ ಹಿರಿಯರ ಅಭಿಪ್ರಾಯ ಕೇಳುವುದಾದರೆ— ಸುಮಿತ್ರೆ ಯಾರನ್ನೋ ಮದುವೆಯಾಗುವ ಬದಲು ಅನುಕೂಲಸ್ಥನೂ, ಯೋಗ್ಯನೂ ಆಗಿದ್ದ ಹಿರಣ್ಣಯ್ಯನನ್ನು ಮದುವೆಯಾದರೆ, ಮಗಳಿಗೆ ಗಂಡು ಹುಡುಕುವ ಕಷ್ಟ ತಪ್ಪುವುದಲ್ಲದೆ, ಸರೋಜೆಯ ಮಕ್ಕಳಿಗೆ ಸರಿಯಾದ ದಿಕ್ಕಾಗುವುದೆಂದು ಆಕೆಯೂ ಈ ಮದುವೆಯ ಕಡೆಗೆ ವಾಲಿದರೂ ವರಸಾಮ್ಯದ ದೃಷ್ಟಿಯಲ್ಲಿ, ಸುಮಿತ್ರೆಯ ವ್ಯಕ್ತಿತ್ವ, ವಿಚಾರಗಳಿಂದ ಅವಳಿಗೆ ಹಿರಣ್ಣಯ್ಯ ಎಂದೆಂದಿಗೂ ಅನುರೂಪನಾದ ಪತಿಯಾಗುವುದಿಲ್ಲವೆಂದು ಅವರ ಅಂತರ್ವಾಣಿ ಹೇಳುತ್ತಿತ್ತು. ನಲವತ್ತು ವರ್ಷದ ಹಿರಣ್ಣಯ್ಯನಿಗೆ ಹನ್ನೆರಡು ವರ್ಷದ ಸುಮಿತ್ರೆ ಸರಿಯಾದ ಜೋಡಿಯಾಗುವುದಿಲ್ಲವೆಂದು ಅವರಿಗೆ ಮನವರಿಕೆಯಾಗಿತ್ತು. ಈ ವಿಷಯ ಯಾರಿಗಾದರೂ ಮನವರಿಕೆಯಾಗುವ ಮಾತು. ಹೀಗಿರುವಲ್ಲಿ ಸುಮಿತ್ರೆ ತನಗೆ ವಯಸ್ಸಿನಲ್ಲಿ ತಂದೆ ಎನಿಸಬಹುದಾಗಿದ್ದ ಹಿರಣ್ಣಯ್ಯನನ್ನು ಮದುವೆಯಾಗಲು ಹೇಗೆ ತಾನೆ ಒಪ್ಪಿಯಾಳು?

ಮೊದಮೊದಲು ಸುಮಿತ್ರೆ ಈ ವಿಷಯ ಪ್ರಸ್ತಾಪ ಬಂದಾಗ, ತಮಾಷೆಗೆ ಹೇಳುತ್ತಿರುವರೆಂದು ತಿಳಿದು ಸುಮ್ಮನಿರುತ್ತಿದ್ದಳು. ಆದರೆ ಅವಳ ಮೌನವನ್ನು ಸಮ್ಮತಿ ಎಂದೂ, ಕನ್ಯಾ ಸಹಜ ಲಜ್ಜೆ ನಾಚಿಕೆಯಿಂದ ತನ್ನ ಹೃದ್ಗತವನ್ನು ತಿಳಿಸದಿರುವಳೆಂದೂ ಭಾವಿಸಿದ ವೆಂಕಪ್ಪಯ್ಯನವರು ಸರೋಜೆ ಸತ್ತ ಆರು ತಿಂಗಳಿಗೆ ಸುಮಿತ್ರೆಯ ಲಗ್ನ ನಿಶ್ಚಯಿಸಿದರು. ತನ್ನ ಮದುವೆಯ ವಿಷಯ ಇದು ತನಕ ಗಾಳಿ ಮಾತಾಗಿ ಇದ್ದದ್ದು ಮೂರ್ತಸ್ವರೂಪ ತೆಗೆದುಕೊಂಡಾಗ ಸುಮಿತ್ರೆಗೆ ಅದನ್ನು ಸ್ಪಷ್ಟವಾಗಿ ವಿರೋಧಿಸದ ಹೊರತು ಗತ್ಯಂತರ ಉಳಿಯಲಿಲ್ಲ. ಅವಳು ತಾಯಿಯ ಮುಂದೆ ಕಂಬನಿದುಂಬಿದ ಕಣ್ಣಿನಿಂದ ತನ್ನ ಮನದ ಆಸೆ ತೋಡಿಕೊಂಡಳು.

" ಏನಮ್ಮ ಮಾಡುವುದು? ಹೆಣ್ಣಾಗಿ ಹುಟ್ಟಿದ ಮೇಲೆ ಇಂದಲ್ಲ ನಾಳೆ ಮದುವೆಯಾಗಲೇ ಬೇಕು. ನಿನಗೆ ಮದುವೆಯಾಗಲು ವಯಸ್ಸು ಸಾಲದೇ ? ಸರೋಜೆಯ ಮಕ್ಕಳನ್ನು ಯಾರು ನೋಡಿಕೊಳ್ಳಬೇಕು ಮಗು? ಅವನು ಈ ಆರು ತಿಂಗಳಿಂದ ಎಷ್ಟು ಒದ್ದಾಡುತ್ತಿದ್ದಾನೆ—ನೀನೇ ಬಲ್ಲೆ. ತಾಯಿಯಿಲ್ಲದ ಹಸುಕಂದಮ್ಮನನ್ನು ಗಂಡಸಿನಿಂದ ಹೇಗೆ ಸುಧಾರಿಸಲು ಆದೀತು? ಆ ಮಕ್ಕಳೊ ಹೊತ್ತುಹೊತ್ತಿಗೆ ಅನ್ನ ನೀರು ಇಲ್ಲದೆ ಎಷ್ಟು ಕಂಗೆಟ್ಟಿದ್ದಾರೆ. ನೀನು ಈ ವರ್ಷ ಓದು ಮುಗಿಸಲಿ ಅಂತ ನಾನೇ ಇಷ್ಟು ದೂರ ತಳ್ಳುತ್ತಾ ಬಂದೆ. ಹೇಗೂ ಈ ವರ್ಷದ ಓದು ಮುಗಿಯಿತಲ್ಲ. ಇನ್ನೇಕೆ ಮದುವೆಯಾಗಬಾರದು ಮಗು ? " ಎಂದರು ತಾಯಿ.

" ನನಗೆ ಮದುವೆಯಾಗಲು ಈಗಲೇ ಇಷ್ಟವಿಲ್ಲಮ್ಮ. "

" ಈಗ ಮದುವೆ ಬೇಡವೆ ಇದ್ದ ಮೇಲೆ ಇನ್ನು ಯಾವಾಗ ಮದುವೆಯಾಗುತ್ತೀ? ನಮ್ಮ ಸರೋಜೆ ನಿನ್ನ ವಯಸ್ಸಿನಲ್ಲಿ ಅತ್ತೆ ಮನೆಯಲ್ಲಿ ಇದ್ದಳು. ಆದರೆ ನೀನು ಇನ್ನು ಓದುತ್ತಲೇ ಇದ್ದಿ. ಇದೇ ನಿನ್ನ ಪುಣ್ಯವೆಂದು ತಿಳಿ. "

" ಆ ಮಾತು ಈಗ ಬೇಡಮ್ಮ..........ನನಗೆ ತುಂಬಾ ಓದಬೇಕೂಂತ ಆಸೆ ಇದೆ. ಓದುವುದೆಲ್ಲ ಮುಗಿದ ಮೇಲೆ ಬೇಕಾದರೆ ನೋಡಿಕೊಳ್ಳೋಣ—ಈಗ ಆ ಮಾತು ಬೇಡ " ಎಂದು ಸಂಕೋಚಪಡುತ್ತ ಹೇಳಿದಳು.

" ನಿನಗೆ ಮದುವೆಯಾಗಲು ಈಗ ಏನು ಅಡ್ಡಿ ? ನಿನ್ನ ಓದು ಅಬ್ಬಬ್ಬಾ ಎಂದರೆ ಇನ್ನು ಎರಡು ವರ್ಷ ಇದ್ದೀತು ! ನಿನ್ನ ಗಂಡನ ಮನೆಗೆ ನೀನು

ಈಗಲೇ ಹೋಗೆಂದು ನಾವು ಹೇಳುತ್ತಿಲ್ಲ. ನೀನು ದೊಡ್ಡವಳಾಗುವ ತನಕ ಓದಿಕೊಂಡಿರು. ಆ ಮೇಲೆ ಬೇಕಾದರೂ ನಿನ್ನ ಗಂಡನ ಅನುಮತಿ ತೆಗೆದು ಕೊಂಡು ಓದು. ಯಾರು ಬೇಡವೆನ್ನುತ್ತಾರೆ; ಆದರೆ ಇದಕ್ಕೂ ನಿನ್ನ ಮದು ವೆಗೂ ಏನು ಸಂಬಂಧ.... " ಎಂದರು.

" ನಾನು ಮದುವೆಯಾದರೆ ನನ್ನ ಸ್ನೇಹಿತರೆಲ್ಲ ಹಾಸ್ಯ ಮಾಡುತ್ತಾ ರಮ್ಮ. ಅವರ ಎದುರಿಗೆ ತಲೆ ಎತ್ತಿಕೊಂಡು ತಿರುಗಲು ನನಗೆ ಹೀನಾ ಯಮ್ಮ. "

" ಇಷ್ಟೇ ತಾನೇ. ಹಾಸ್ಯ ಮಾಡಿ ನಗುವವರು ಎಷ್ಟು ದಿನ ಹಾಗೆ ಮಾಡಿಯಾರು ? ಒಂದು ದಿನ ಅವರು ಸುಮ್ಮನೆ ಆಗುತ್ತಾರೆ. ಇಷ್ಟಕ್ಕಾಗಿ ನೀನು ಮದುವೆ ಬೇಡವೆನ್ನುತ್ತೀಯಾ ? "

" ಅದೊಂದಕ್ಕೆ ಅಲ್ಲಮ್ಮಾ. ನಂಗೆ ಇನ್ನೂ ತುಂಬಾ ಓದಬೇಕೆನ್ನಿಸು ತ್ತಿದೆ. ಕಾಲೇಜು ಓದಿ, ಡಾಕ್ಟರ್ ಪರೀಕ್ಷೆ ಪಾಸು ಮಾಡಿ, ನಿಮ್ಮನ್ನೆಲ್ಲ ಸುಖವಾಗಿ ಇಟ್ಟಕೊಂಡಿರೋ ಆಸೆ ಇದೆ. ಅಲ್ಲಿ ತನಕ ಏನೇ ಆದರೂ ಓದ ಬೇಕೂಂತ ಇದ್ದೇನೆ. ನಾನು ಕಷ್ಟಪಟ್ಟು ಓದಿದರೆ ಕೊನೆತನಕ ಸ್ಕಾಲರ್ ಶಿಪ್ ಸಿಕ್ಕುತ್ತೆ. ಇದರಿಂದ ನನ್ನ ಖರ್ಚು ವೆಚ್ಚ, ಫೀಸು, ಪುಸ್ತಕಗಳು ನೋಡಿಕೊಳ್ಳಬಹುದು. ನಾನು ಓದೋದ್ರಿಂದ ಯಾರಿಗೂ ತೊಂದರೆ ಇರೋದಿಲ್ಲ. "

" ಹೌದಮ್ಮ ನಿನಗೇನೊ ಬೆಟ್ಟದಷ್ಟು ಆಸೆ ಇದೆ. ಆದರೆ ನೀನು ಹಾಗೆಲ್ಲ ಕಾಲೇಜು ಓದೋಕ್ಕೆ ಎಲ್ಲಿ ಸಾಧ್ಯವಾಗುತ್ತೆ. ನೀನು ಗಂಡು ಹುಡುಗನಾಗಿದ್ದರೆ ಎಷ್ಟು ಆಸೆಯಿದೆಯೋ ಅಷ್ಟೂ ಕಲಿ ಅಂತ ಹೇಳ್ತಿದ್ದೆ. ಆದರೆ ನೀನು ಹೆಣ್ಣು ಹುಡುಗಿ. ಕಾಲೇಜಿನ ಓದು ಅಂದರೆ ಸುಮ್ಮನಾಯಿತೇ ? ಮದರಾಸು, ಬೆಂಗಳೂರುಗಳಿಗೆ ಹೋಗದೆ ಡಾಕ್ಟರು ಪರೀಕ್ಷೆ ಮಾಡೋಕ್ಕೆ ಆಗುತ್ಯೆ. ಇಷ್ಟಕ್ಕೆಲ್ಲ ನಿನಗೆ ಯಾರು ಸಹಾಯ ಮಾಡುತ್ತಾರೆ ? ಪರಸ್ಥಳದಲ್ಲಿ ನಿನ್ನ ಯಾರು ನೋಡಿಕೊಳ್ತಾರೆ ? ಸುಮ್ಮನೆ ಹಗಲುಗನಸು ಕಾಣಬೇಡ ಮಗು ! ಹಾಸಿಗೆ ಇದ್ದಷ್ಟು ಕಾಲು ಚಾಚುವುದನ್ನು ಕಲಿತುಕೊ. ನಿನಗೆ ಎಷ್ಟು ಓದು ಲಭ್ಯವೋ ಅಷ್ಟು ಓದಿಕೊಂಡು ತೆಪ್ಪಗೆ ಮದುವೆಯಾಗಿ ಸಂಸಾರಿ ಯಾಗು. ಅದೇ ನಿನ್ನ ಕಾಲೇಜು—ನೀನು ಮಾಡಬೇಕಾದ ಸೇವೆ. ಇದರಿಂದ

ನಮ್ಮನ್ನು ನೀನು ಸುಖವಾಗಿ ಇಟ್ಟಂತೆ ಆಗುತ್ತೆ. " ಎಂದರು ಸೀತಮ್ಮ. ಆಕೆ ಸಹಜವಾಗಿ ವಿದ್ಯಾಪಕ್ಷಪಾತಿಯಾಗಿದ್ದರೂ ಆಕೆಗೆ ಮಗಳ ಮಾತುಗಳು ಕೇವಲ ಹಗಲುಗನಸುಗಳಾಗಿ ಕಂಡಿದ್ದವು. ಆಕೆಯ ವ್ಯವಹಾರಜ್ಞಾನ ಆಕೆಯನ್ನುಹಾಗೆ ಮಾತನಾಡಿಸಿತ್ತು.

ಈ ಮಾತಿನಿಂದ ಸುಮಿತ್ರೆಗೆ ತುಂಬಾ ದುಃಖವಾಯಿತು. ತನ್ನನ್ನು ಅರ್ಥ ಮಾಡಿಕೊಳ್ಳಲು ಸಾಮರ್ಥ್ಯವಿದ್ದ ತನ್ನ ತಾಯಿಯೂ ಹೀಗೆ ಹೇಳಿಬಿಟ್ಟರಲ್ಲ ಎಂದು ವ್ಯಥೆಯಾಯಿತು. ಹಾಗಾದರೆ ತನಗೆ ಇನ್ನು ಯಾರು ದಿಕ್ಕು ? ಆ ಕ್ಷಣದಲ್ಲಿ ಅವಳಿಗೆ ಶಾರದೆಯ ನೆನಪಾಯಿತು. ಅವಳು ನೇರ ಶಾರದೆಯ ಮನೆಗೆ ಹೋಗಿ, ಅಳುತ್ತಾ ಕುಳಿತುಕೊಂಡಳು. ಏನಾದರೂ ಮಾಡಿ ಸಧ್ಯಕ್ಕೆ ಒದಗಿರುವ ಮದುವೆಯ ಗಂಡಾಂತರದಿಂದ ತನ್ನನ್ನು ಪಾರು ಮಾಡಬೇಕೆಂದು ಶಾರದೆಯಲ್ಲಿ ಮೊರೆ ಇಟ್ಟಳು. ಶಾರದೆ ಈ ವಿಷಯವನ್ನು ಸೀತಮ್ಮನವರೊಂದಿಗೆ ಮಾತನಾಡುವುದಾಗಿ ಹೇಳಿ ಸಮಾಧಾನಪಡಿಸಿದಳು. ಅದರಂತೆ ಸೀತಮ್ಮನವರೊಂದಿಗೆ ಈ ಬಗ್ಗೆ ಮಾತು ತೆಗೆದಳು.

" ನೋಡಿ ಸೀತಮ್ಮನೋರೆ. ನಿಮ್ಮ ಸಂಸಾರದ ವಿಷಯದಲ್ಲಿ ನಾನು ಪ್ರವೇಶಿಸುತ್ತಿದ್ದೇನೆ ಅಂತ ನನ್ನ ಅನ್ಯಥಾ ತಿಳಿಯಬೇಡಿ. ಈ ಮಗುವಿನ ಗೋಳು ನೋಡಲಾರದೆ ನಿಮ್ಮೊಂದಿಗೆ ಮಾತನಾಡಲು ಬರಬೇಕಾಯಿತು. ಸುಮಿತ್ರೆ ನಿಮಗೆ ಹೇಗೆ ಮಗಳೋ ನನಗೆ ಅದಕ್ಕೂ ಹೆಚ್ಚಿನ ಮಗಳಾಗಿದ್ದಾಳೆ ಎಂಬುದನ್ನು ನೀವೂ ನೋಡಿದ್ದೀರಿ. ಅವಳು ಮೂರು ಹೊತ್ತು ಕಣ್ಣೀರಿಟ್ಟು ರೋಧಿಸುವುದನ್ನು ನೋಡಲು ನನ್ನಿಂದಾಗಲಿಲ್ಲ. ನೀವೇನೋ ಸುಮಿತ್ರೆಯ ಸುಖಕ್ಕಾಗಿ ಅವಳ ಮದುವೆ ಪ್ರಯತ್ನ ಮಾಡುತ್ತಿದ್ದೀರಿ. ಆದರೆ ಅದನ್ನು ಅರಿಯುವಷ್ಟು ಬುದ್ಧಿ ಅವಳಿಗೆ ಇಲ್ಲ. ಈ ಮದುವೆ ಅವಳಿಗೆ ಯಾಕೋ ಕೊಂಚವೂ ಇಷ್ಟವಿಲ್ಲ. ಹಾಗೆಂದು ನನ್ನ ಬಳಿ ಅನೇಕ ಬಾರಿ ಹೇಳಿದ್ದಾಳೆ. ನೀವು ಹೆತ್ತವರು. ಮಗಳ ಸುಖಕ್ಕಾಗಿ ಶ್ರಮಿಸುವವರು. ನೀವು ಈ ಮದುವೆಗೆ ಕೊಂಚವೂ ಇಷ್ಟಪಡದ ಸುಮಿತ್ರೆಯನ್ನೇಕೆ ಬಲವಂತಪಡಿಸುತ್ತೀರೋ ಕಾಣೆ. ಬಹುಶಃ ನಿಮ್ಮ ಮೊಮ್ಮಕ್ಕಳ ಚಿಂತೆ, ನೆಂಟಸ್ತನದ ಚಿಂತೆಯಿಂದ ನೀವು ನಿಮ್ಮ ಮೊದಲನೆಯ ಅಳಿಯನಿಗೆ ಸುಮಿತ್ರೆಯನ್ನು ಕೊಡಬೇಕೆಂದಿರಬಹುದು. ಆದರೆ ಈ ಮದುವೆಯಿಂದ ಯಾರಿಗೂ ಯಾವ ವಿಧವಾದ ಸುಖ

ಸಿಗವೆಂದು ತಿಳಿದಿರುವಾಗ ಏಕೆ ಇಂಥ ಮದುವೆ ಮಾಡಬೇಕು? ನಾನು ಆಣೆ ಇಟ್ಟು ಹೇಳುತ್ತೇನೆ—ಸುಮಿತ್ರೆಗೆ ಈ ಮದುವೆ ಕೊಂಚವೂ ಇಷ್ಟವಿಲ್ಲ. ನೀವು ಏನಾದರೂ ಬಲವಂತಪಡಿಸಿ ಈ ಮದುವೆ ಮಾಡಿದರೆ—ನಿಮ್ಮ ಹುಡುಗಿ ಸಾಯೋತನಕ ಗೋಳಾಡ್ತಾಳೆ, ಇಲ್ಲ ಕೆರೆ ಭಾವಿ ನೋಡಿಕೊಳ್ತಾಳೆ, ಇದಂತೂ ಖಂಡಿತ. ಇಷ್ಟರ ಮೇಲೆ ನಿಮ್ಮ ಇಷ್ಟ!" ಎಂದು ಹೇಳುವ ಮಾತನ್ನೆಲ್ಲ ಹೇಳಿದಳು ಶಾರದೆ.

ಶಾರದೆಯ ಮಾತು ಸೀತಮ್ಮನವರ ಮನಸ್ಸಿಗೆ ನಾಟದೆ ಇರಲಿಲ್ಲ. ಆಕೆಯೂ ಶಾರದೆಯ ಮಾತುಗಳನ್ನು ಮತ್ತೊಮ್ಮೆ ಆಲೋಚಿಸಿ, ಇಷ್ಟವಿಲ್ಲದ ಹುಡುಗಿಯನ್ನು ಹಿರಣ್ಣಯ್ಯನಿಗೆ ಮದುವೆ ಮಾಡುವುದರಿಂದ ಅವನಿಗೂ ಸುಖವಿಲ್ಲ, ಇವಳಿಗೂ ಸುಖವಿಲ್ಲವೆಂಬುದನ್ನು ಅರಿತು ಮದುವೆಯ ವಿಷಯವನ್ನು ಅಲ್ಲಿಗೆ ಬಿಟ್ಟು, ಈ ವಿಷಯದಲ್ಲಿ ತಾವು ಇನ್ನು ಪ್ರವೇಶಿಸಬಾರದೆಂದು ನಿರ್ಧರಿಸಿಬಿಟ್ಟರು.

ಆದರೆ ವೆಂಕಪ್ಪಯ್ಯ ಈ ವಿಷಯದಲ್ಲಿ ಸುಮ್ಮನೆ ಇರಬೇಕಲ್ಲ! ಅವರು ವಧೂವರರಿಬ್ಬರ ಜಾತಕ ನೋಡಿ ಒಂದು ಪ್ರಶಸ್ತವಾದ ದಿನ ಲಗ್ನವಿಟ್ಟು, ಲಗ್ನಪತ್ರಿಕೆಯ ಶಾಸ್ತ್ರಕ್ಕೆ ಅಳಿಯನನ್ನು ಆಹ್ವಾನಿಸಿಯೂ ಬಿಟ್ಟರು. ಹಿರಣ್ಣಯ್ಯ ಈ ಘಳಿಗೆಯನ್ನು ಬಹಳ ಕಾಲದಿಂದ ನಿರೀಕ್ಷಿಸುತ್ತಿದ್ದಿರಬೇಕು. ಆತ ಹೆಣ್ಣಿಗೆ ತರಬೇಕಾದ ಮಂಗಳ ದ್ರವ್ಯ ಸಮೇತ ಮಡಿಕೇರಿಗೆ ಬಂದಿಳಿದ. ಅವನು ಅತ್ತ ಮನೆಗೆ ಬಂದನೋ ಇತ್ತ ಸುಮಿತ್ರೆ ಹಠಾತ್ತನೆ ಮನೆಯಿಂದ ಕಣ್ಮರೆಯಾದಳು. ಅವಳು ಬೇರೇನೂ ಮಾಡಲು ತೋಚದೆ, ಶಾರದೆಯ ಮನೆಯಲ್ಲಿ ಔತುಕೊಂಡಳು. ಈ ವಿಷಯದಲ್ಲಿ ತಾನು ಸುಮಿತ್ರೆಗೆ ಬೆಂಬಲವಾಗಬೇಕೆಂದಿದ್ದರೂ ತನ್ನಿಂದ ಸುಮಿತ್ರೆಯ ಮದುವೆ ನಿಲ್ಲದೆಂದು ಶಾರದೆ ಆಲೋಚಿಸಿ, ಹೆಣ್ಣಿನ ಮಂಟಪದ ಅಧ್ಯಕ್ಷಿಣಿ—ಮಡಿಕೇರಿಗೆಲ್ಲ ಪ್ರಭಾವಶಾಲಿಯಾಗಿದ್ದ ಮಂಜಯ್ಯನವರ ಪತ್ನಿಯೂ ಆದ ಪಾರ್ವತಮ್ಮನ ಉಡಿಯಲ್ಲಿ ಸುಮಿತ್ರೆಯನ್ನು ಹಾಕಿ, ಹೇಗಾದರೂ ಮಾಡಿ ಸುಮಿತ್ರೆಗೊದಗಿದ ಗಂಡಾಂತರದಿಂದ ಅವಳನ್ನು ಪಾರು ಮಾಡಬೇಕೆಂದು ಬೇಡಿಕೊಂಡಳು. ಪಾರ್ವತಮ್ಮನವರೂ, ಮಂಜಯ್ಯನವರೂ, ಶಾಂತಮಲ್ಲಯ್ಯನವರೂ ಶಂಕರಮ್ಮನವರೂ ಸಮಯಕ್ಕೆ ಸರಿಯಾಗಿ ಸುಮಿತ್ರೆಯ ಮನೆಗೆ ಬಂದು ಅವಳನ್ನು ಕಾಯ್ದರು. ಅವರೆಲ್ಲರೂ ವೆಂಕಪ್ಪಯ್ಯನವ

ರಿಗೆ, ಮದುವೆ ಇಷ್ಟವಿಲ್ಲದ ಹುಡುಗಿಯನ್ನು ಅದು ಹೇಗೆ ಮದುವೆ ಮಾಡುತ್ತೀರೆಂದು ಆಕ್ಷೇಪಿಸಿ ನಡೆಯಬೇಕಾದ ಲಗ್ನಪತ್ರಿಕೆ ಶಾಸ್ತ್ರವನ್ನು ತಾತ್ಕಾಲಿಕಕ್ಕೆ ನಿಲ್ಲಿಸಿದರು. ಅಂತೂ ಇಂತೂ ಬೀಸಿದ್ದ ಗಾಳದಿಂದ ಒಮ್ಮೆ ಸುಮಿತ್ರೆ ಪಾರಾದಳು.

ಸದ್ಯಕ್ಕೆ ಸುಮಿತ್ರೆಯ ಮದುವೆ ನಿಂತಿತು. ಮದುವೆಗೆಂದು ಬಂದಿದ್ದ ಹಿರಣ್ಣಯ್ಯ ಊರಿಗೆ ಹಿಂತಿರುಗಿದ. ಅಳಿಯ ಮಾವ ಏನೇನು ಮಾತನಾಡಿಕೊಂಡರೋ. ಅಂತೂ ಹಿರಣ್ಣಯ್ಯ ಗೆಲುಮೋರೆಯಲ್ಲೇ ಊರಿಗೆ ಹೊರಟು ಹೋದ. ಇದಾದ ಮೂರು ತಿಂಗಳಿಗೆ ಧರ್ಮಸ್ಥಳದ ಜಾತ್ರೆ ಬಂತು. ವೆಂಕಪ್ಪಯ್ಯ ಬಹುಕಾಲ ಇದ್ದ ಹರಕೆಗಳನ್ನು ನೆನಸಿಕೊಂಡು ಧರ್ಮಸ್ಥಳಕ್ಕೆ ಹೋಗಲು ನಿಶ್ಚಯಿಸಿದರು. ಹೋದರೆ ಒಂಟಿಯಾಗಿ ತೀರ್ಥಯಾತ್ರೆ ಹೋಗುತ್ತಿದ್ದ ವೆಂಕಪ್ಪಯ್ಯ ಈ ಬಾರಿ ಉದಾರವಾಗಿ ಮನೆಯವರನ್ನೆಲ್ಲಾ ಜೊತೆಗೆ ಕರೆದುಕೊಂಡು ಹೊರಟರು. ಸುಮಿತ್ರೆಯೂ ಅನಿರೀಕ್ಷಿತವಾಗಿ ಬಂದೊದಗಿದ ಯಾತ್ರೆಗಾಗಿ ಸಂತೋಷಗೊಂಡಳು. ವೆಂಕಪ್ಪಯ್ಯ ನೇರ ಧರ್ಮಸ್ಥಳಕ್ಕೆ ಹೋಗುವ ಬದಲು ಶನಿವಾರ ಸಂತೆಗೆ ಬಂದಿಳಿದರು. ‘ಇಲ್ಲಿಗೇಕೆ’ ಎಂದು ಸುಮಿತ್ರೆ ಕೇಳಿದುದಕ್ಕೆ ಅಲ್ಲಿಯವರನ್ನೂ ಸಂಗಡಲೇ ಕರೆದೊಯ್ಯಲು ಎಂದು ಸುಳ್ಳು ಹೇಳಿದರು. ಆದರೂ ಸುಮಿತ್ರೆಗೆ ಒಳಗೊಳಗೇ ಅನುಮಾನ.

ಶನಿವಾರ ಸಂತೆಗೆ ಬಂದುದೂ ಆಯಿತು. ಅವರನ್ನು ಕಂಡು ಹಿರಣ್ಣಯ್ಯ ಅವರಿಗೆಂದೇ ಸಿದ್ಧಪಡಿಸಿದ್ದ ಬಿಡದಿ ಮನೆಗೆ ಕರೆದುಕೊಂಡು ಹೋದನು. ಸುಮಿತ್ರೆಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ಮನೆಯನ್ನು ಚೆನ್ನಾಗಿ ಸಾರಿಸಿ ರಂಗೋಲಿ ಕೆಮ್ಮಣ್ಣು ಮಾಡಿದ್ದಾರೆ. ಮನೆಯ ಮುಂದೆ ಹಸಿರುವಾಣಿ ಚಪ್ಪರ ಇವರ ಜೊತೆಗೆ ವಾಲಗದವರು ಬೇರೆ ವಾದ್ಯಗಳ ಸಮೇತ ಹಜಾರದಲ್ಲಿ ಕುಳಿತಿದ್ದಾರೆ. ಇವೆಲ್ಲ ಯಾರಿಗೆ? ಯಾತಕ್ಕೆ? ಎಂದು ಸುಮಿತ್ರೆಗೆ ಬೆರಗು. ಪಾಪ! ತನಗೆ—ತನ್ನ ಮದುವೆಗೆ ಎಂಬುದನ್ನು ಸುಮಿತ್ರೆ ಅರಿಯಳು.

ಸ್ವಲ್ಪ ಹೊತ್ತಿನಲ್ಲಿಯೇ ಸುಮಿತ್ರೆಗೆ ಎಲ್ಲ ವಿಷಯ ತಿಳಿಯಿತು. ಹೆತ್ತ ತಂದೆಯೇ ಮಗಳ ವಿರುದ್ಧ ಹೀಗೆ ಸಂಚು ಮಾಡುವರೆಂದು ಅವಳು ತಿಳಿದಿರಲಿಲ್ಲ. ಆದರೆ ಸುಮಿತ್ರೆ ಪರವೂರಿನಲ್ಲಿ ಅಪರಿಚಿತರ ನಡುವೆ ಏನು ತಾನೇ ಮಾಡಬಲ್ಲಳು? ಅವಳು ಅತ್ತಳು. ಅಳುತ್ತಾ ಕುಳಿತಳು. ಆದರೂ ನಡೆಯಬೇ

ಕಾದ ಕೆಲಸ—ಮದುವೆ—ನಡೆದೇ ಹೋಯಿತು.

ಸುಮಿತ್ರೆ ಮಡಿಕೇರಿಗೆ ಬಂದ ಮೇಲೆ ಶಾರದೆಗಾಗಲೀ ಪಾರ್ವತಮ್ಮನಿಗಾಗಲೀ ಮುಖ ತೋರಿಸಲಿಲ್ಲ. ಶಾಲೆಗೂ ಹೋಗಲಿಲ್ಲ. ಆದರೆ ಶಾರದೆಗೆ ಒಮ್ಮೆ ಸುಮಿತ್ರೆಯನ್ನು ನೋಡಬೇಕೆಂದೆನಿಸಿ, ಅವಳ ಮನೆಗೇ ಬಂದಳು. ಶಾರದೆಯನ್ನು ಕಂಡೊಡನೆಯೇ ಸುಮಿತ್ರೆಯ ಬಾಯಿಯಲ್ಲಿ ಮಾತು ಹೊರಡದೇ 'ಚಿಕ್ಕಮ್ಮಾ—ಚಿಕ್ಕಮ್ಮಾ' ಎಂದು ಗೊಳೋ ಎಂದು ಅಳುತ್ತಾ ಕುಳಿತುಬಿಟ್ಟಳು.

ಶಾರದೆ ಸುಮಿತ್ರೆಯ ಮುಖದಲ್ಲಾಗಿರುವ ಬದಲಾವಣೆ, ಕತ್ತಿನಲ್ಲಿನ ಮಾಂಗಲ್ಯ ಕಂಡೇ ಎಲ್ಲವನ್ನೂ ಊಹಿಸಿ ತಿಳಿದು, ಸಮಾಧಾನ ಪಡಿಸಿದಳು. ಆದರೂ ಸುಮಿತ್ರೆಗಾದ ಅನ್ಯಾಯ ಮೋಸಪಡಿಸಿ, ಅರಿಯದ ಹುಡುಗಿಯನ್ನು ನಲವತ್ತು ವರ್ಷದ ಮುದುಕನಿಗೆ ಕಟ್ಟಿದ ಸಂಗತಿ—ಇಡೀ ಸ್ತ್ರೀಲೋಕಕ್ಕೆ ಬಗೆದ ಅನ್ಯಾಯ ಎಂದುಕೊಂಡಳು ಮನಸ್ಸಿನಲ್ಲೇ. ಆದರೆ ಕೆಲಸ ಮಿಂಚಿ ಹೋಗಿತ್ತು. ಶಾರದೆ ಏನು ಮಾಡಲೂ ಅಸಮರ್ಥೆ.

ಕೆಲವು ದಿನ ಕಳೆಯಿತು. ಸುಮಿತ್ರೆಯ ದುಃಖ ಹೆಚ್ಚಿಸಲು ಇನ್ನೊಂದು ಸಂಗತಿಯೂ ಜೊತೆಗೂಡಿತು. ವೆಂಕಪ್ಪಯ್ಯ ಸುಮಿತ್ರೆಗೆ ಮದುವೆಯಾದುದರಿಂದ ಶಾಲೆಗೆ ಹೋಗುವುದು ಸಾಕೆಂದು ಹೇಳಿದರು. ಸುಮಿತ್ರೆ ತಂದೆಯ ಮಾತು ಕೇಳಲಿಲ್ಲ, ಒಮ್ಮೆ ಕೇಳಿ ಆಯಿತಲ್ಲ! ಅವಳು ಎಂದಿನಂತೆ ಶಾಲೆಗೆ ಹೋಗತೊಡಗಿದಳು. ವೆಂಕಪ್ಪಯ್ಯನವರ ಹೆಂಡತಿ ನಡುವೆ ತಲೆ ಹಾಕಿ, "ಹುಡುಗಿ ದೊಡ್ಡವಳಾಗುವ ತನಕ ಓದಿಕೊಳ್ಳಲಿ ಬಿಡಿ. ಅನಂತರ ಅವಳಾಗಿ ಅವಳೇ ಹೋಗುವುದಿಲ್ಲ. ಏಕೆ ಉರಿಯುವ ಗಾಯಕ್ಕೆ ಉಪ್ಪು ಹಚ್ಚುವಂತೆ ಮೊದಲೇ ಬೇಜಾರು ಪಟ್ಟುಕೊಂಡಿರೋಳಿಗೆ ಇನ್ನಷ್ಟು ಬೇಜಾರುಪಡಿಸುತ್ತೀರಿ," ಎಂದು ಸಂಧಾನ ಮಾಡಿದರು.

ಆ ವರ್ಷ ಕಳೆಯುವುದರೊಳಗೆ ಸುಮಿತ್ರೆ ದೊಡ್ಡವಳಾದಳು. ವೆಂಕಪ್ಪಯ್ಯ ಆದಷ್ಟು ಬೇಗ ಫಲಶೋಭನ ಮುಗಿಸಿಕೊಟ್ಟು ಹಿರಣ್ಣಯ್ಯನೊಂದಿಗೆ ಮಗಳನ್ನು ಸಾಗ ಹಾಕಲು ಆಲೋಚಿಸಿದರು. ಪ್ರಸ್ತದ ಮಾತು ಎತ್ತಿದೊಡನೆಯೇ ಸುಮಿತ್ರೆ ಪಳಗಿಸದ ಗೂಳಿಯಂತೆ 'ಸಿರ್' ಎಂದು ಮೇಲೆ ಬೀಳಲು ಬರುತ್ತಿದ್ದಳು. ವೆಂಕಪ್ಪಯ್ಯ ಒಂದೆರಡು ಬಾರಿ ಅಳಿಯನನ್ನು ಮನೆಗೆ ಕರೆಸಿ

ಕೊಂಡು ಸುಮಿತ್ರೆಯೊಂದಿಗೆ ಸಲಿಗೆ ಬೆಳೆಯಲು ಅವಕಾಶ ಕಲ್ಪಿಸಿಕೊಟ್ಟಿದ್ದರು. ಆದರೆ ಸುಮಿತ್ರೆಗೆ ಹಿರಣ್ಣಯ್ಯನ ನೆರಳು ಕೂಡ ಆಗುತ್ತಿರಲಿಲ್ಲ. ಅವನು ಇದ್ದ ಕಡೆ ಅವಳು ನಿಲ್ಲಳು. ಹಿರಣ್ಣಯ್ಯ ಪ್ರೀತಿಯಿಂದ ತಂದುಕೊಟ್ಟಿದ್ದ ವಡವೆ ವಸ್ತುಗಳೊಂದನ್ನೂ ಅವಳು ಮುಟ್ಟಲಿಲ್ಲ. ಅವುಗಳನ್ನು ಮುಟ್ಟುವುದೆಂದರೆ ಹಿರಣ್ಣಯ್ಯನನ್ನು ಸ್ಪರ್ಶಿಸಿದ ಅನುಭವ ಅವಳಿಗೆ.

ಒಂದು ದಿನ ಸುಮಿತ್ರೆ ಹಿತ್ತಲಿನಲ್ಲಿ ಮುಸುರೆ ತೊಳೆಯುತ್ತಿದ್ದಳು. ಸುಮಿತ್ರೆಯೊಡನೆ ಒಮ್ಮೆಯಾದರೂ ಮಾತನಾಡಿ ಅವಳ ಮನಸ್ತಾಪವನ್ನು ಕಳೆಯಬೇಕೆಂದು ಹೊಂಚುಹಾಕಿ ಕಾದಿದ್ದ ಹಿರಣ್ಣಯ್ಯ, ಸದ್ದುಮಾಡದೆ ಬೆಕ್ಕಿನಂತೆ ಬಂದು “ಸುಮ್ಮಿ” ಎಂದು ಸುಮಿತ್ರೆಯ ಭುಜ ಅಲುಗಿಸಿದ. ಸುಮಿತ್ರೆ ಗಂಡನ ಕಡೆ ದುರದುರನೆ ನೋಡಿದಳೇ ಹೊರತು ಮಾತನಾಡಲಿಲ್ಲ.

“ಸುಮ್ಮಿ—ನಾನು ಮೋಸಪಡಿಸಿ ಮದುವೆಯಾದೆನೆಂದು ನಿನಗೆ ನನ್ನ ಮೇಲೆ ಸಿಟ್ಟೇ ?”

ಸುಮಿತ್ರೆ ಮಾತನಾಡಲಿಲ್ಲ.

“ನಾನು ಇಷ್ಟು ಬಾರಿ ಬಂದಿದಾಗ್ಲೂ ನೀನು ಒಮ್ಮೆಯಾದರೂ ನನ್ನೊಡನೆ ಮಾತನಾಡಲಿಲ್ಲ. ನನ್ನನ್ನು ಕಂಡರೆ ಹುಲಿಯನ್ನು ಕಂಡಷ್ಟು ಹೆದರುತ್ತೀ. ಏಕೆ? ನಾನು ನಿನಗೆ ಹೊಸಬನೆ? ನಿನ್ನ ಭಾವನಾಗಿದ್ದವನೇ ಅಲ್ಲವೇ ? ಆಗ ಇದ್ದ ಸಲಿಗೆ ಎಲ್ಲಿ ಹೋಯಿತು ?”

“ಅಕ್ಕನ ಜೊತೆಯಲ್ಲಿಯೇ ಹೋಯಿತು.”

“ಹೌದು. ಭಾವನಾಗಿದ್ದಾಗ ನೀನು ನನಗೆ ಕೊಡುತ್ತಿದ್ದ ಪುರಸ್ಕಾರ, ಗೌರವ, ಈಗ ಗಂಡನಾದ ಮೇಲೆ ತಿರಸ್ಕಾರವಾದುದು ನನಗೆ ಗೊತ್ತಿದೆ. ನಿನ್ನ ಭಾವನೆಗಳೇನೆಂಬುದೂ ನನಗೆ ತಿಳಿದಿದೆ. ನೀನು ಹುಡುಗಿ. ನಾನು ಮುದುಕ. ಆದರೆ ನಾನು ನಿನ್ನ ಅಕ್ಕನ ಮಕ್ಕಳಿಗೋಸ್ಕರ, ನಿನ್ನನ್ನು ಮದುವೆಯಾಗಬೇಕಾಯಿತು.”

“ಯಾರ ಸುಖಕ್ಕಾಗಿ ಯಾರ ತ್ಯಾಗ” ಎಂದಳು ಸುಮಿತ್ರೆ.

“ಹಾಗಾದರೆ—ನನ್ನ ಮೇಲೆ—ಹೋಗಲಿ. ಆ ಮಕ್ಕಳ ಮೇಲಾದರೂ ಪ್ರೀತಿ ಇಲ್ಲವೇ ?”

“ನನಗೆ ಎಳ್ಳಷ್ಟೂ ಇಲ್ಲ.”

"ಹಾಗಾದರೆ ನಾನು ನಿನ್ನನ್ನು ಮದುವೆಯಾದುದು ಮೂರ್ಖತನವಾಯಿತು."

"ಖಂಡಿತವಾಗಿ. ಪಾಪ! ಈಗ ಗೊತ್ತಾಯಿತೇನೋ."

"ಈಗ ನೀನು ಅನ್ನುವುದಾದರೂ ಏನು ?"

"ನನ್ನ ಪಾಡಿಗೆ ನನ್ನನ್ನು ಇರಲು ಬಿಡಿ. ನಿಮಗೆ ಬೇಕಿದ್ದರೆ ಬೇರೊಂದು ಮದುವೆಯಾಗಿ ಸುಖವಾಗಿರಿ. ಹೇಗೂ ನಿಮ್ಮಲ್ಲಿ ಹಣವಿದೆ. ಮದುವೆಯಾಗುವ ಚತುರೋಪಾಯ ಗೊತ್ತಿದೆ. ನನ್ನನ್ನು ಮಾತ್ರ ಪದೇಪದೇ ಬಂದು ಪೀಡಿಸಬೇಡಿ. ನಿಮ್ಮ ದಮ್ಮಯ್ಯ. ನಾನು ನಿಮ್ಮ ಹೆಂಡತಿಯಲ್ಲ. ನೀವು ನನ್ನ ಭಾವನೇ ಹೊರತು ಗಂಡನಲ್ಲ." ಎಂದು ಹೇಳಿ ಅಲ್ಲಿಂದ ಸರ್‍ರನೆ ಎದ್ದು ಹೊರಟು ಹೋದಳು.

ಹಿರಣ್ಣಯ್ಯ ಹೆಂಡತಿಯ ಮಾತುಗಳನ್ನು ಮೆಲಕು ಹಾಕುತ್ತಾ ಅಲ್ಲಿಯೇ ಬೆಪ್ಪನಂತೆ ನಿಂತ.

## ೬

ಸುಮಿತ್ರೆಯ ಮನವೊಲಿಸಲು ಹೋಗಿ ಹಿರಣ್ಣಯ್ಯ ನಿರಾಶೆಗೊಂಡರೂ ಸುಮಿತ್ರೆಯ ತಂದೆ ತಾಯಿಗಳು ನಿರಾಶೆಗೊಳ್ಳಲಿಲ್ಲ. ಏನೋ ಹುಡುಗತನ, ಹಠ ಎಂದುಕೊಂಡು ಅವರು ಇದುವರೆಗೆ ನೋಡಿಕೊಂಡಿದ್ದರು. ಸುಮಿತ್ರೆ ಪ್ರೌಢೆಯಾದ ಮೇಲೆ ಅವಳ ಹಠಮಾರಿತನ ಇನ್ನಿಷ್ಟು ಹೆಚ್ಚಾಯಿತು. ಬೇಸಿಗೆಯ ರಜಾ ಪೂರೈಸಿ ಮತ್ತೆ ಹೈಸ್ಕೂಲು ಆರಂಭವಾದೊಡನೆ ಸುಮಿತ್ರೆ ಸ್ಕೂಲಿಗೆ ಹೋಗತೊಡಗಿದಳು, ತಂದೆಯ ಮಾತನ್ನು ಕಿಂಚಿತ್ತೂ ಗಣನೆಗೆ ತಾರದೆ. ಹೇಳುವಷ್ಟು ಹೇಳಿ ವೆಂಕಪ್ಪಯ್ಯ ಸೋತು ಸುಮಿತ್ರೆಯ ಸ್ಕೂಲಿಗೆ ಹೋಗಿ ಸುಮಿತ್ರೆಯ ಸರ್ಟಿಫಿಕೇಟ ತಂದುಬಿಟ್ಟರು. ಸುಮಿತ್ರೆ, ಶಾರದೆ ಪಾರ್ವತಮ್ಮನವರ ನೆರವಿನಿಂದ ಮತ್ತೆ 'ರೀ ಅಡ್ಮಿಟ್' ಆದಳು. ವೆಂಕಪ್ಪಯ್ಯ ಮಗಳ ಮೊಂಡುತನ ಕಂಡು ಸುಸ್ತು ಹೊಡೆದರು. ಅವರಿಗೆ ಸುಮಿತ್ರೆಯನ್ನು ಶಾಲೆಗೆ

ಹೋಗದಂತೆ ಮಾಡಲು ಬೇರೆ ಉಪಾಯ ತೋರದೆ, ಸುಮಿತ್ರೆಯನ್ನು ಕೋಣೆ ಯಲ್ಲಿ ಹಾಕಿ ಬೀಗ ಹಾಕಿ, ತಾವು ಕಾವಲು ಕಾಯುತ್ತಾ ಕುಳಿತರು. ಹೀಗೆ ಎಷ್ಟೊಂದು ದಿನ ಮಾಡಲಾದೀತು! ತಂದೆ ಮಕ್ಕಳ ಯುದ್ಧವನ್ನು ಕಂಡು ಬೇಸತ್ತ ತಾಯಿ ಒಂದು ದಿನ ಮಗಳಿಗೆಂದರು--

" ಸುಮಿತ್ರೆ ನೀನು ಹೆಣ್ಣು ಹೆಂಗಸು. ಒಂದಲ್ಲ ಒಂದು ದಿನ ಗಂಡ ನೊಡನೆ ಬಾಳಲೇ ಬೇಕು. ನಿಮ್ಮ ತಂದೆಯವರ ಮಾತನ್ನು ಕೇಳು. ಅವರು ಒಳ್ಳೆಯದಕ್ಕೇ ಹೇಳೋದು. ಹೆಂಗಸಿಗೇತಕ್ಕೆ ಓದು ? ಎಷ್ಟು ಓದಿದರೂ " ಸೌಟು " ಹಿಡಿಯುವುದು ತಪ್ಪಿಲ್ಲ. ಏಕೆ ಸುಮ್ಮನೆ ಅವರನ್ನು ಸತಾಯಿ ಸುತ್ತೀ. ನೀನು ಹೇಗೂ ದೊಡ್ಡವಳಾಗಿದ್ದೀಯೆ. ಗಂಡನ ಜೊತೆಯಲ್ಲಿ ಸಂಸಾರ ಮಾಡಿಕೊಂಡು ಆ ಮಕ್ಕಳುಮರೀನ ನೋಡಿಕೊಂಡು ಸುಖವಾಗಿ ಇರೋದು ಬಿಟ್ಟು ಇದೆಲ್ಲ ಯಾತರ ಪಂಚಾಯ್ತಿ ? "

" ಯಾವನ ಜೊತೆಗೋ ಸಂಸಾರ ಮಾಡಿಕೊಂಡಿರೋಕೆ ನನಗೆ ಇಷ್ಟ ವಿಲ್ಲ " ಎಂದಳು ಮಗಳು.

" ಚೆನ್ನಾಯಿತು. ಇದನ್ನೇ ತಾನೇ ನೀನು ಸ್ಕೂಲಿಗೆ ಹೋಗಿ ಕಲ್ತಿ ರೋದು. ಕೈಹಿಡಿದ ಗಂಡನನ್ನೇ ಯಾವನೋ, ಎತ್ತೋ ಅಂತಂದ್ರೆ ಮುಂದೆ ಚೆನ್ನಾಗಿ ಬಾಳ್ತೀ ನೀನು ? "

" ಮುಂದೆ ಚೆನ್ನಾಗಿ ಬಾಳೋದು ನನ್ನ ಹಣೆಯಲ್ಲಿ ಬರೆದಿದ್ರೆ ಹೀಗೆಲ್ಲಾ ಯಾಕಾಗ್ತಿತ್ತು ? "

" ಏನಾಗಿದೆ ಈಗ ? "

" ಏನಾಗಬೇಕು ಹೇಳು. ನಾನು ಬೇಡ ಬೇಡಅಂತ ಹೊಡಕೊಂಡ್ರೂ ತಗೊಂಡು ಹೋಗಿ ಮೋಸದಿಂದ ಅವರ ಕುತ್ತಿಗೆಗೆ ಕಟ್ಟಿದ್ರಿ. ಈಗ ಗಂಡನ ಮನೆಗೆ ಹೋಗು ಅಂತ ಹೊಡೆಕೊಳ್ಳುತ್ತಿದ್ದೀರಿ. ನೀವು ಹೀಗೆ ಹೇಳ್ತಾ ಇರಿ. ನಾನು ಕೆರೆಗೋ ಭಾವಿಗೋ ಹಾರಿಕೊಳ್ತೀನಿ. "

ಈ ಮಾತು ಕೇಳಿ ತಾಯಿ ಮೂಕಳಾಗಿ ಕುಳಿತರು. ಅದೇ ದಿನ ವೆಂಕ ಪ್ಪಯ್ಯ ಹೆಂಡತಿಯೊಡನೆ ಏನನ್ನೋ ಮಾತನಾಡಿ, ಏನನ್ನೋ ನಿರ್ಧರಿಸಿದರು. ಹಿರಣ್ಣಯ್ಯನಿಗೆ ಕಾಗದ ಬರೆದು ಮನೆಗೆ ಕರೆಸಿಕೊಂಡರು. ಹಿರಣ್ಣಯ್ಯ ಮಂಗಳ ದ್ರವ್ಯ, ಸೀರೆ, ಕುಪ್ಪಸಗಳ ಸಮೇತ ಬಂದಿಳಿದ. ಹಿರಣ್ಣಯ್ಯ ಬಂದ ಶಿವಿ

ಯನ್ನು ನೋಡಿ ಈ ಬಾರಿ ಗಂಡ ತನ್ನ ಒಡಲ ಮೇಲೆ ಅಧಿಕಾರ ಮುದ್ರೆ ಒತ್ತುವುದು ಖಂಡಿತ ಎಂದುಕೊಂಡಳು ಸುಮಿತ್ರೆ. ಹಿರಣ್ಣಯ್ಯನೂ ಈ ಬಾರಿ ಏನೇ ಆಗಲಿ, ಸುಮಿತ್ರೆಯ ಮೊಂಡುತನಕ್ಕೆ ಕತ್ತರಿ ಹಾಕಲು ನಿರ್ಧರಿಸಿಕೊಂಡೇ ಬಂದಿದ್ದ.

ಮನೆಯ ಆವರಣ, ಜನ, ಅವನಿಗೆ ಅನುಕೂಲವಾಗಿಯೇ ಇತ್ತು. ಆ ಒಂದೆರಡು ದಿನ ಸ್ಸುಮಿತ್ರೆಯ ಮೇಲೆ ಮನೆಯವರೆಲ್ಲರ ಸರ್ಪಕಾವಲು. ಅವಳನ್ನು ಮನೆಯಿಂದ ಹೊರಗೆ ಹೋಗಲು ಬಿಡಲಿಲ್ಲ. ಹೊರಗೆ ಹೊರಟರೂ ಅವಳ ಬೆಂಗಾವಲಿಗೆ ಯಾರಾದರೊಬ್ಬರು ಇದ್ದೇ ಇರುತ್ತಿದ್ದರು. ಸುಮಿತ್ರೆಗೆ ಒಳ್ಳೆಯ ಚಿತ್ರಹಿಂಸೆಯಾಯಿತು. ಎಷ್ಟೋ ಬಾರಿ ಮನೆಯಲ್ಲಿ ಇದ್ದುಕೊಂಡೇ ಪ್ರಾಣ ಕಳೆಮಕೊಳ್ಳುವ ಆಲೋಚನೆ ಮಾಡಿದಳು. ನೇಣು ಹಾಕಿಕೊಳ್ಳುವುದೇ? ಭಾವಿಗೆ ಬೀಳುವುದೇ? ಇಲ್ಲ ಕಲ್ಲಿಗೆ ತಲೆಯೊಡೆದುಕೊಂಡು ಸಾಯುವುದೇ? ಯಾಕೋ ಸಾಯುವುದು ಸುಮಿತ್ರೆಯ ಮವಸ್ಸಿಗೆ ಸರಿ ಬರಲಿಲ್ಲ. ಅನ್ಯಾಯದ ವಿರುದ್ಧ ಹೋರಾಡದೆ, ಸಾವನ್ನು ಅಪ್ಪಿದರೆ ಅದು ಧೀರತನವಲ್ಲ, ಹೇಡಿತನ. ಬದುಕಿದ್ದು ಅನ್ಯಾಯದ ವಿರುದ್ಧ ಹೋರಾಡುತ್ತಾ ಸಾವನ್ನಪ್ಪಿದರೆ ಆಗ ಅದು ವೀರ ಮರಣ. ಇಹಪರಗಳೆರಡರಲ್ಲಿಯೂ ಅದು ಪುರಸ್ಕಾರಯೋಗ್ಯ ಎಂದು ಶಾರದೆ ಎಂದೋ ಹೇಳಿದ್ದ ಮಾತು ನೆನಪಿಗೆ ಬಂದು ಆತ್ಮಹತ್ಯೆಯ ಆಲೋಚನೆಯನ್ನು ತಲೆಯಿಂದ ಹೊರಗೆ ಹಾಕಿದಳು.

ಮಾರನೆಯ ದಿನವೇ ನಿಷೇಕ ಪ್ರಸ್ತ. ವೆಂಕಪ್ಪಯ್ಯ ಹೆಚ್ಚಿನ ಗದ್ದಲಕ್ಕೆ ಅವಕಾಶ ಕೊಡದೆ ಅದನ್ನು ನಡೆಸಿಕೊಡುವ ಆಲೋಚನೆಯಲ್ಲಿದ್ದರು. ಹಿರಣ್ಣಯ್ಯನ ಆಶಯವೂ ಅದೇ ಆಗಿತ್ತು. ಸಣ್ಣಪುಟ್ಟ ಸತಿಪತಿಗಳ ಚೆಲ್ಲಾಟವಾಗಿದ್ದರೆ, ಆ ಮಾತು ಬೇರೆ. ಹಿರಣ್ಣಯ್ಯ ನಡುವಯಸ್ಸಿನ ಮುದುಕ. ಸುಮಿತ್ರೆ ಹದಿಮೂರು ಹದಿನಾಲ್ಕು ವರ್ಷದ ಮುಗುದೆ. ಇವರಿಬ್ಬರ ಬಾಂಧವ್ಯವನ್ನು ನೋಡಿ ಜನ ನಗದಿರುವರೇ ?

ಹೀಗಾಗಿ ಮನೆಯ ಮುಂದೆ ಚಪ್ಪರವೇಳಲಿಲ್ಲ. ವಾಲಗದವರು ತಮ್ಮ ವಾದ್ಯ ನುಡಿಸಲಿಲ್ಲ. ಮನೆಯಲ್ಲಿಯೂ ಶಾಸ್ತ್ರದ ಗದ್ದಲವೆಲ್ಲ ಚುಟುಕದಲ್ಲಿಯೇ ಮುಗಿಯಿತು. ಸುಮಿತ್ರೆ ಆ ದಿನವೆಲ್ಲ ಕಲ್ಲಿನ ವಿಗ್ರಹದಂತೆ ಕುಳಿತುಬಿಟ್ಟಿದ್ದಳು. ಬೆಳಗ್ಗೆ ಎಣ್ಣೆ ನೀರು ಹಾಕಿಕೊಳ್ಳುವಾಗ ರಂಭಾಟ ಹೂಡಿದಳು. ಹಸೆಗೆ

ಕುಳಿತುಕೊಳ್ಳುವಾಗ ನಾಲ್ಕೆಂಟು ಬಾರಿ ಓಡಿಹೋಗಿದ್ದಳು. ಕ್ಷಣಕಾಲ ಹಿರಣ್ಣಯ್ಯನ ಜತೆ ಅವಳನ್ನು ಕೂಡಿಸಬೇಕಾದರೆ ವೆಂಕಪ್ಪಯ್ಯ ದಂಪತಿಗಳಿಗೆ ಸಾಕುಸಾಕಾಯಿತು. ಆ ದಿನವೆಲ್ಲ ಸುಮಿತ್ರೆ ಒಂದು ತುತ್ತೂ ಅನ್ನ ಮುಟ್ಟಿರಲಿಲ್ಲ. ಜಡೆ ಹೆಣೆಯಲು ಬಂದ ತಾಯಿಯ ಕೈಯನ್ನು ಕೊಸರಿದಳು. ಉಡಲೆಂದು ತಂದು ಕೊಟ್ಟ ಜರತಾರಿ ಸೀರೆ ಕುಪ್ಪಸಗಳನ್ನು ಮೂಲೆಗೆ ಎಸೆದು ಬಿಟ್ಟಳು.

"ನನ್ನನ್ನೇಕೆ ಕೊಲ್ಲುತ್ತೀಯಮ್ಮ" ಎಂದು ಹಣೆ ಹಣೆ ಚಚ್ಚಿಕೊಂಡು ರೋದಿಸಿದಳು.

"ಇದೆಲ್ಲ ನಿನ್ನ ಸುಖಕ್ಕೇ ಮಗು" ಇದು ತಾಯಿಯ ಪ್ರವರ.

"ನನ್ನ ಸುಖ ಹಾಳಾಯಿತು. ನನಗೆ ಇದೊಂದೂ ಬೇಡ."

"ಬೇಡಾ ಅಂದರೆ ಏನು ನಿನ್ನ ಮಾತು ?"

"ನಿನ್ನ ಕಾಲಿಗೆ ಬಿದ್ದು ಬೇಡಿಕೊಳ್ಳುತ್ತೇನೆ ಅಮ್ಮ. ಅವರಿಗೆ ನನ್ನನ್ನು ಬಲಿ ಕೊಡಬೇಡಿ. ಅವರು ನನ್ನನ್ನು ಮುಟ್ಟಿದರೆಂದರೆ ನಾನು ಸತ್ತೆ ಎಂದು ತಿಳಿಯಿರಿ. ಇದು ಖಂಡಿತ."

"ಎಂತಹ ಮಾತೇ ನಿಂದು. ಹೆಂಡತಿಯಾದೋಳು ಆಡುವ ಮಾತೇ ಇದು. ಚೆನ್ನಾಯ್ತು."

"ದೇವರಾಣೆ ಇಟ್ಟು ಹೇಳ್ತೀನೆ. ನಾನು ಅವರ ಹೆಂಡತಿಯಲ್ಲ, ಅವರು ನನ್ನ ಗಂಡನಲ್ಲ."

ಈ ಮಾತು ಕೇಳಿ ಸೀತಮ್ಮ 'ರಾಮರಾಮ' ಎಂದು ಕಿವಿಯನ್ನು ಮುಚ್ಚಿಕೊಂಡರು. ಸುಮಿತ್ರೆಗೆ ಪಿಶಾಚಿ ಹಿಡಿದಿಲ್ಲವಷ್ಟೇ. ಶಾಸ್ತ್ರೋಕ್ತವಾಗಿ ಮದುವೆಯಾದ ಹೆಂಡತಿಯ ಬಾಯಿಂದ ಬರುವ ಮಾತೇ ಇದು! ಅದೂ ನಿಷೇಕದ ದಿನ. ಸುಮಿತ್ರೆಗೆ ಬುದ್ಧಿ ಭ್ರಮಣವಾಗಿದೆ ಎಂದು ಮನವರಿಕೆಯಾಗಿ ಮಗಳಿಗಾಗಿ ಅವರು ಮರುಗಿದರು.

ಇನ್ನೆಲ್ಲಾ ಕೆಲವೇ ತಾಸುಗಳು ಉಳಿದಿವೆ ಕನ್ಯಾಬಲಿಗೆ.

ಸುಮಿತ್ರೆ ಆಲೋಚಿಸಿದಳು. ತಾನು ಸುಮ್ಮನೆ ಪ್ರತಿಭಟಿಸುತ್ತಾ ಕುಳಿತರೆ ಮನೆಯವರು ಅದನ್ನು ನಿರ್ಲಕ್ಷಿಸಿ, ತನ್ನನ್ನು ಗಂಡನ ಕೋಣೆಗೆ ದಬ್ಬಿ ಬೀಗ ಹಾಕಲೂ ಹೇಸುವುದಿಲ್ಲ. ಏನಾದರೂ ಮಾಡಿ ಈ ರಾತ್ರೆ ತನ್ನ ಶೀಲ ಹರಣ

ವಾಗದಂತೆ ನೋಡಿಕೊಳ್ಳಬೇಕು. ಅದಕ್ಕೆ ದಾರಿ? ಸುಮಿತ್ರೆ ಯೋಚಿಸಿ ಯೋಚಿಸಿ, ಏನನ್ನೋ ನಿರ್ಧರಿಸಿ ತನ್ನಲ್ಲೇ ನಕ್ಕಳು.

ಬಿಸಿಲು ಸರಿಯುತ್ತಾ ಬಂದು ಸಂಜೆಯಾಯಿತು. ಸುಮಿತ್ರೆ ಇದ್ದಕಿದ್ದಂತೆ ತಾಯಿಯ ಬಳಿಗೆ ಹೋಗಿ "ಯಾಕಮ್ಮ, ನನ್ನಿಂದ ನಿಮಗೆಲ್ಲ ಧರ್ಮಸಂಕಟ! ಆಗಲಿ. ನೀವು ಹೋದ ದಾರಿಯಲ್ಲಿಯೇ ನಾನು ಬರುತ್ತೇನೆ" ಎಂದಳು.

ಮಗಳ ಮಾತು ಕೇಳಿ ತಾಯಿಗೆ ಸಂತೋಷವಾಯಿತು. ಅವರು ಲಗುಬಗೆಯಿಂದ ಸುಮಿತ್ರೆಗೆ ಹೆಳಲು ಹಾಕಿ ಹೊಸ ಸೀರೆಯುಡಿಸಿ, ಅಡಿಗೆಯ ಮನೆಯ ಕೆಲಸಗಳನ್ನು ನೆನೆದುಕೊಂಡು ಅಲ್ಲಿಂದ ಹೊರಟು ಹೋದರು. ಸುಮಿತ್ರೆ ಅಲ್ಲಿಯೇ ಏನನ್ನೋ ಧ್ಯಾನಿಸುತ್ತಾ ಕುಳಿತಿದ್ದಂತೆ ವೆಂಕಪ್ಪಯ್ಯ ಹೊರಗೆ ಹೋಗಿದ್ದವರು ಮನೆಗೆ ಬಂದರು. ಮಗಳು ಸಾಲಂಕೃತಳಾಗಿ ನಗುಮುಖದಲ್ಲಿ ಇರುವುದನ್ನು ಕಂಡು ಅವರಿಗೆ ಮನಸ್ಸಿನಲ್ಲಿಯೇ ಹರ್ಷವಾಯಿತು. ಆದರೂ ಯಾವ ಮಾತನಾಡದೆ, ಕಾಲು ತೊಳೆದುಕೊಳ್ಳಲು ಬಚ್ಚಲುಮನೆಗೆ ಹೋದರು. ಹಂಡೆಯಲ್ಲಿ ತೊಟ್ಟು ನೀರು ಇರಲಿಲ್ಲ. 'ಅಮ್ಮಯ್ಯಾ ಒಂದು ಕೊಡ ನೀರು ಸೇದಿ ತರುತ್ತೀಯಾ?' ಎಂದು ಮಗಳಿಗೆ ಹೇಳಿದರು.

ಸುಮಿತ್ರೆ ಸಂತೋಷವಾಗಿಯೇ ನೀರು ತಂದುಕೊಟ್ಟಳು. ವೆಂಕಪ್ಪಯ್ಯ 'ಬಟ್ಟೆ ಕೊಳೆಯಾಗುತ್ತೆ ಸಾಕು' ಎಂದು ಹೇಳಿದರೂ, 'ಇನ್ನೊಂದೆರಡು ಕೊಡ ನೀರು ತಂದು ಬಿಡುತ್ತೇನೆ' ಎಂದು ಬಿಂದಿಗೆಯೊಂದಿಗೆ ಹಿತ್ತಲಿಗೆ ಹೊರಟಳು. ವೆಂಕಪ್ಪಯ್ಯ ನಿಶ್ಚಿಂತೆಯಿಂದ ಅಡಿಗೆಯ ಮನೆಯ ಕಡೆಗೆ ನಡೆದರು.

ಸುಮಿತ್ರೆ ಬಿಂದಿಗೆಯನ್ನು ಭಾವಿಯ ಕಟ್ಟೆಯ ಮೇಲೆ ಇಟ್ಟು ಅತ್ತಿತ್ತ ನೋಡಿ ಅಲ್ಲಿ ಬೆಳೆದಿದ್ದ ಬಾಳೆಯ ಮರಗಳ ಮರೆಯಲ್ಲಿ ಮಾಯವಾದಳು.

ನೀರು ಸೇದಲು ಹೋದ ಮಗಳು ಅರ್ಧ ಗಂಟೆಯಾದರೂ ಬಾರದಿರುವುದನ್ನು ಕಂಡು ವೆಂಕಪ್ಪಯ್ಯ ದಂಪತಿಗಳಿಗೆ ಗಾಬರಿಯಾಗಿ ಹಿತ್ತಲಿಗೆ ಬಂದರು. ಬಿಂದಿಗೆ ಭಾವಿಯ ಕಟ್ಟೆಯ ಮೇಲೆ ಬೋರಲು ಬಿದ್ದಿದೆ. ಸುಮಿತ್ರೆ ಮಾತ್ರ ಇಲ್ಲ!

ಸುಮಿತ್ರೆ! ಸುಮಿತ್ರೆ!! ಎಂದು ಕೂಗುತ್ತಾ ಹಿತ್ತಲನ್ನೆಲ್ಲಾ ಹುಡುಕಿದರು. ಮನೆಯನ್ನೆಲ್ಲಾ ಶೋಧಿಸಿದರು. ಎಲ್ಲೂ ಸುಮಿತ್ರೆಯ ಸುಳಿವಿಲ್ಲ.

ಹೊರಗೆ ಹೋಗಿದ್ದ ಹಿರಣ್ಣಯ್ಯ ಮನೆಗೆ ಬಂದ. ಹೆಂಡತಿಯು ಪರಾರಿಯಾದು ದನ್ನು ಕಂಡು ಅವನ ಜಂಘಾಬಲವೇ ಉಡುಗಿತು. ಅವನು ಉಸ್ಸೆಂದು ತಲೆಯ ಮೇಲೆ ಕೈಹೊತ್ತು ಕುಳಿತು ಬಿಟ್ಟ.

ವೆಂಕಪ್ಪಯ್ಯ ಮಗಳಿಗಾಗಿ ಊರನ್ನೆಲ್ಲ ಶೋಧಿಸಿದರು. ಪಾರ್ವತಮ್ಮ, ಶಾರದೆ ಮುಂತಾದ ಸುಮಿತ್ರೆಯ ಗೆಳತಿಯರ ಮನೆಗೆ ಹೋಗಿ ಬಂದರು. ಎಲ್ಲೂ ಸುಮಿತ್ರೆ ಪತ್ತೆಯಾಗಲಿಲ್ಲ. ಈಗ ಎಲ್ಲರಿಗೆ ಗಾಬರಿಯ ಜತೆಗೆ ಭಯ ಅಂಕುರಿಸಿತು. ಸುಮಿತ್ರೆ ಆತ್ಮಹತ್ಯೆ ಮಾಡಿಕೊಂಡಳೋ ಏನೋ! ಸುಮಿತ್ರೆ ಮನೆಯಿಂದ ಇದ್ದಕ್ಕಿದ್ದಂತೆ ಮಾಯವಾದ ಸುದ್ದಿ ಕೇಳಿ ಪಾರ್ವತಮ್ಮ, ಶಾರದೆ ಯರಿಗೆ ಮೊದಲು ಅದು ವಿನೋದವಾಗಿ ಕಂಡರೂ ಏನು ಅನಾಹುತ ಮಾಡಿ ಕೊಂಡಳೋ ಎಂದು ಹೆದರಿಕೆಯಾಗಿ ಅವರು ಕಾರು ತೆಗೆದುಕೊಂಡು ಊರ ನ್ನೆಲ್ಲಾ ಹುಡುಕಿ ಬಂದರು. ಯಾರನ್ನು ಕೇಳಿದರೂ ಸುಮಿತ್ರೆಯನ್ನು ತಾವು ಕಾಣಲಿಲ್ಲ ಎನ್ನುವವರೇ. ಹಾಗಾದರೆ ಸುಮಿತ್ರೆ ಏನಾದಳು ?

ಈ ಪ್ರಶ್ನೆಯನ್ನು ಎಲ್ಲರಿಗಿಂತ ಹೆಚ್ಚಾಗಿ ಹಿರಣ್ಣಯ್ಯ ಕೇಳಿಕೊಂಡಿದ್ದ. ಅವನಿಗೆ ಸೂಕ್ಷ್ಮಮತಿಯಾದ ಸುಮಿತ್ರೆ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ ಎನ್ನುವ ವಿಷಯದಲ್ಲಿ ಸಂದೇಹ ಉಳಿಯಲಿಲ್ಲ. ಅವಳೊಂದು ವೇಳೆ ಹಾಗೆ ದುಡಿಕಿದ್ದರೆ ಅದಕ್ಕೆ ಹೊಣೆಯಾರು? ತಾನು ಸುಮಿತ್ರೆಯ ಕೈಹಿಡಿದು ಎಂತಹ ಕೆಲಸ ಮಾಡಿದೆ ಎಂದು ತನ್ನನ್ನೇ ನಿಂದಿಸಿಕೊಂಡ ಹಿರಣ್ಣಯ್ಯ. ಅವನಿಗೆ ತನ್ನ ತಪ್ಪಿನ ಅರಿವಾಗಿ ಈಗ ಪೂರ್ಣ ಪಶ್ಚಾತ್ತಾಪ. "ದೇವರೇ, ಸುಮಿತ್ರೆ ನನ್ನ ಮನೆಗೆ ಗೃಹಿಣಿಯಾಗಿ ಬಾರದಿದ್ದರೂ ಚಿಂತೆಯಿಲ್ಲ. ಅವಳು ಎಲ್ಲಾದರೂ ಜೀವದೊರಸೆಯಿಂದ ಇರಲಿ" ಎಂದು ದೇವರಲ್ಲಿ ಮೊರೆಯಿಟ್ಟ. ಆ ಕ್ಷಣದಲ್ಲಿ ಎಲ್ಲರ ಮೊರೆಯೂ ಅದೇ ಆಗಿತ್ತು.

ರಾತ್ರೆ ಸುಮಾರು ಒಂಬತ್ತು ಗಂಟೆಯ ವೇಳೆಯಲ್ಲಿ ಶಾರದೆ ಮಲಗಿ ಕೊಳ್ಳಲು ಸಿದ್ಧತೆ ಮಾಡಿಕೊಳ್ಳುತ್ತಿರುವಾಗ ತಲೆಬಾಗಿಲನ್ನು ಯಾರೋ ತಟ್ಟಿ ದಂತಾಯಿತು.

"ಯಾರದು ?" ಎಂದು ಪ್ರಶ್ನಿಸಿದಳು ಶಾರದೆ.

"ನಾನು!" ಎಂದಿತು ಧ್ವನಿ.

ಶಾರದೆ ಬಾಗಿಲು ತೆರೆದಳು. ಎದುರಿಗೆ ಸರ್ವಾಲಂಕೃತೆಯಾದ ಸುಮಿತ್ರೆ.

ಸುಮಿತ್ರೆಯನ್ನು ಕಂಡು ಶಾರದೆಗೆ ಮಾತೇ ಹೊರಡಲಿಲ್ಲ. ಏನು ಸುಮಿತ್ರೆ, ಅದೂ ಈ ಅಪರಾತ್ರೆಯಲ್ಲಿ! ಇದು ಕನಸೋ ನನಸೋ ಶಾರದೆಗೆ ಅನುಮಾನವಾಯಿತು. ಶಾರದೆ ದಂಗು ಬಡೆದು ನಿಂತುದನ್ನು ಕಂಡು ಸುಮಿತ್ರೆ ಶಾರದೆಯ ಕಾಲಿಗೆ ಬಿದ್ದು, "ಚಿಕ್ಕಮ್ಮ, ನನ್ನ ಮಾನ ಪ್ರಾಣ ಇಂದು ನಿನ್ನಲ್ಲಿದೆ. ನೀನು ಏನಾದರೂಮಾಡಿ ಕಾಪಾಡಬೇಕು." ಎಂದು ರೋದಿಸತೊಡಗಿದಳು. ಆಗಲೇ ಶಾರದೆಗೆ ಎಚ್ಚರ!

"ಒಳ್ಳೆಯ ಹುಡುಗಿ ಕಣೆ ನೀನು ಸುಮಿತ್ರೆ. ಅದೆಲ್ಲಿ ಹೋಗಿದ್ದೆ ಇಷ್ಟು ಹೊತ್ತಿನ ತನಕ. ನಾವು ನೀನು ಆತ್ಮಹತ್ಯ ಮಾಡಿಕೊಂಡಿದ್ದೀಯ ಎಂದುಕೊಂಡಿದ್ದೆವು. ಸದ್ಯ ಆ ಹುಚ್ಚು ಕೆಲಸ ನೀನು ಮಾಡಲಿಲ್ಲ. ದೇವರ ದಯೆಯಿಂದ ನೀನು ಜೀವದೊರಸೆ ಇದ್ದೀಯಲ್ಲ! ಅಷ್ಟೇ ಸಾಕು!" ಎಂದಳು ಶಾರದೆ.

ಶಾರದೆ, ಸುಮಿತ್ರೆ ಮನೆಯಿಂದ ಮಾಯವಾದ ಮೇಲೆ ನಡೆದ ಎಲ್ಲ ಕಥೆಯನ್ನು ಹೇಳಿ ಸುಮಿತ್ರೆಯನ್ನು ವಿನೋದವಾಗಿ ಬೈದಳು.

"ಅದಿರಲಿ, ನೀನು ಇಲ್ಲಿಯ ತನಕ ಎಲ್ಲಿಗೆ ಹೋಗಿದ್ದೆ ?"

"ನಮ್ಮ ಶಾಲೆಯಲ್ಲಿ ನಾಡಹಬ್ಬವೇರ್ಪಡಿಸಿದ್ದರು. ಮೈಸೂರಿನಿಂದ ಮೂರು ನಾಲ್ಕು ಮಂದಿ ಸಾಹಿತಿಗಳು ಬಂದಿದ್ದರು. ಹೊರಟು ಬಿಟ್ಟೆ. ಭಾಷಣ, ನಾಟಕ ಎಲ್ಲ ಮುಗಿಯುವ ಹೊತ್ತಿಗೆ ಇಷ್ಟು ಹೊತ್ತಾಯಿತು. ಶೈಲಜೆಯ ಮನೆಯ ಜವಾನ ಇಲ್ಲಿಯ ತನಕ ಕರೆತಂದು ಬಿಟ್ಟುಹೋದ."

"ಏನೇ ಆಗಲಿ ಒಳ್ಳೆಯ ಗುಂಡಿಗೆಯ ಹುಡುಗಿ ಕಾಣೆ, ನೀನು. ನಾವುಗಳೆಲ್ಲ ನಿನಗಾಗಿ ಅತ್ತು, ಕರೆದು ಗೋಳಾಡುತ್ತಿದ್ದರೆ, ನೀನು ಅಲ್ಲಿ ನಾಟಕ ನೋಡಿಕೊಂಡು ಮೋಜು ಮಾಡುತ್ತಾ ಕುಳಿತಿದ್ದಿ! ನಿನ್ನನ್ನು ಹೊಗಳ ಬೇಕೋ, ತೆಗಳಬೇಕೋ ನನಗೊಂದೂ ತಿಳಿಯದಾಗಿದೆ." ಎಂದಳು ಶಾರದೆ.

"ಮೋಜಿನ ವಿಷಯ ಹಾಗಿರಲಿ ಚಿಕ್ಕಮ್ಮ. ನನಗೆ ಅಲ್ಲಿ ಕೂತಿದ್ದರೆ ಎದೆ ಡಬಡಬನೆ ಬಡಿದುಕೊಳ್ಳುತ್ತಿತ್ತು. ಯಾವ ಗಳಿಗೆಯಲ್ಲಿ ಮನೆಯವರು ಬಂದು ಎಳೆದುಕೊಂಡು ಹೋಗುತ್ತಾರೋ ಅಂತ. ಸದ್ಯ ದೇವರ ದಯೆಯಿಂದ ಆ ಕಡೆ ಯಾರಿಗೂ ಗಮನ ಹರಿಯಲಿಲ್ಲ."

ಅವರ ಮಾತುಕತೆಗಳನ್ನು ಆಲಿಸುತ್ತಾ ಇದ್ದ ಕಿಟ್ಟಣ್ಣ "ಶಾರದೆ, ಅಂತೂ ನಿನ್ನ ಶಿಷ್ಯಳು ನಿನಗಿಂತ ಗಟ್ಟಿಗಳೇ ಹೊರತು ಯಾವುದರಲ್ಲಿಯೂ ಕಡಿಮೆಯಿಲ್ಲ. ನಿನಗೆ ಕೀರ್ತಿ ತರಲು ಇವಳೊಬ್ಬಳೇ ಸಾಕು." ಸುಮಿತ್ರೆಯ ಕಡೆ ನೋಡಿ "ಪಾಪ ಆ ಬ್ರಾಹ್ಮಣ ಹಿರಣ್ಣಯ್ಯನಿಗೆ ಒಳ್ಳೆ ಏಟು ಕೊಟ್ಟಳು. ನಿಷೇಕಕ್ಕೆ ಬಂದೋನಿಗೆ ವಿಷ ಕೊಟ್ಟಂತೆ ಮಾಡಿಬಿಟ್ಟಳು ನಿನ್ನ ಶಿಷ್ಯಳು." ಎಂದು ಗುರುಶಿಷ್ಯರನ್ನು ಹೊಗಳಿದ.

ಕಿಟ್ಟಣ್ಣ ಸ್ವಲ್ಪ ಹೊತ್ತು ಸುಮ್ಮನಿದ್ದು, "ಸುಮಿತ್ರೆ, ನಿಮ್ಮ ಮನೆಯಲ್ಲಿ ನೀನು ಏನಾದೆಯೋ ಅಂತ ಬಾಯಿಯಲ್ಲಿ ಅಕ್ಕೀಕಾಳು ಹಾಕಿಕೊಂಡು ಗಾಬರಿಯಾಗಿ ಕೂತಿದ್ದಾರೆ. ಬಾ, ಮನೆಗೆ ಹೋಗೋಣ!" ಎಂದ.

ಈ ಮಾತು ಕೇಳಿ ಸುಮಿತ್ರೆ ಇದ್ದಲ್ಲಿಯೇ ಹೌಹಾರಿದಳು.

"ನಿಮ್ಮ ದಮ್ಮಯ್ಯ ಆ ಮಾತು ಮಾತ್ರ ಹೇಳಬೇಡಿ. ನೀವು ಆ ಕೆಲಸ ಮಾಡಿದರೆ ನಾನು ಇದುವರೆಗೂ ಮಾಡದಿದ್ದ ಕೆಲಸ ಮಾಡಬೇಕಾಗುತ್ತೆ. ನಿಮಗೆ ಸುಮಿತ್ರೆ ಬದುಕಿರುವುದು ಬೇಕಾದರೆ, ನೀವು ಮನೆಯವರಿಗೆ ನನ್ನ ಸುದ್ದಿ ಕೊಡಬಾರದು."

"ತಂದೆಯ ಮನೆಗೆ ಹೋಗಲು ಯಾಕೆ ಇಷ್ಟು ಹೆದರಿಕೆ?"

"ಅದು ನನಗೆ ತಂದೆಯ ಮನೆಯಲ್ಲ. ನರಕ! ಒಮ್ಮೆ ಅಲ್ಲಿಂದ ತಪ್ಪಿಸಿಕೊಂಡು ಬಂದಿದ್ದೇನೆ. ಮತ್ತೆ ಅಲ್ಲಿ ನನ್ನನ್ನು ಸೆರೆ ಹಾಕಬೇಡಿ!"

"ಏನು ನಿನ್ನ ಮಾತು ಸುಮಿತ್ರೆ. ಹೆತ್ತ ತಂದೆ ತಾಯಿ ಕೈಹಿಡಿದ ಗಂಡನನ್ನು ಬಿಟ್ಟು, ನೀನೆಷ್ಟು ದಿನ ಒಂಟಿಯಾಗಿ ಇರಬಲ್ಲೆ. ನಿನ್ನ ಅನ್ನ ಬಟ್ಟೆಯ ಪಾಡು ಹೇಗೆ?"

"ನಾನು ಕೆಲಸಕ್ಕೆ ಸೇರುತ್ತೇನೆ."

"ಅಯ್ಯೋ ಸುಮಿತ್ರೆ. ನೀನು ಗಂಡು ಹುಡುಗನಲ್ಲ.—ಹೆಣ್ಣು ಹುಡುಗಿ. ಈ ವಯಸ್ಸಿನಲ್ಲಿ ನಿನಗೆ ಯಾರು ಕೆಲಸ ಕೊಡುತ್ತಾರೆ?"

"ಕೆಲಸ ಕೊಡದಿದ್ದರೆ ಬೇಡ. ನಾನು ಓದು ಮುಂದುವರೆಸುತ್ತೇನೆ."

"ಓದುವುದು ತಾನೇ ಯಾರ ಬೆಂಬಲವೂ ಇಲ್ಲದೇ ಹೇಗೆ ಸಾಧ್ಯ?"

"ಹೆತ್ತ ತಂದೆ ತಾಯಿಗಳಿಗೂ; ಹೆಚ್ಚಿಗೆ ನನಗಾಗಿ ಮರುಗುವ ನೀವು ಇರುವಾಗ ನನಗೆ ಏತರ ಭಯ ಚಿಕ್ಕಪ್ಪ" ಎಂದು ಹೇಳುತ್ತಾ ಕಿಟ್ಟಣ್ಣ ಶಾರದೆ

ಯರನ್ನು ದೈನ್ಯವಾಗಿ ನೋಡಿದಳು.

"ಅಯ್ಯೋ, ನನ್ನ ಕಂದ!" ಎಂದು ಶಾರದೆ ಹೇಳಿದಳೇ ಹೊರತು ಮುಂದೆ ಮಾತು ಹೊರಡಲಿಲ್ಲ.

"ಹಾಗಾದರೆ ನೀನು ಈಗ ಮನೆಗೆ ಹೋಗಲ್ಲ?"

"ಅವರು ಮನೆಬಿಟ್ಟು ಹೋಗೋತನಕ ಅಲ್ಲಿಗೆ ಕಾಲಿಡೋಲ್ಲ."

"ನಿನ್ನ ಇಷ್ಟ ಸುಮ್ಮಿ" ಎಂದಳು ಶಾರದೆ. ಅನಂತರ ಸುಮಿತ್ರೆಗೆ ಊಟ ಹಾಕಿ, ಹಾಸಿಗೆ ಹಾಸಿಕೊಟ್ಟಳು. ಸುಮಿತ್ರೆಯನ್ನು ಉಪಚರಿಸುವಾಗ ಲೆಲ್ಲಾ ಅವಳಿಗೆ ಕೃಷ್ಣವೇಣಿಯನ್ನು ಉಪಚರಿಸುತ್ತಿರುವಂತೆ ಭಾಸವಾಗುತ್ತಿತ್ತು. ಕೃಷ್ಣವೇಣಿಗೂ ಈಗ ಮದುವೆಯ ವಯಸ್ಸು. ಅವಳು ಎಲ್ಲಿದ್ದಾಳೋ........ ಏನಾಗಿದ್ದಾಳೋ ............"

ಮಾರನೆಯ ದಿನ ಸೂರ್ಯ ಹುಟ್ಟುವುದಕ್ಕಿಂತ ಮುಂಚೆಯೇ, ಹಿರಣ್ಣಯ್ಯ ಅತ್ತೆ ಮಾವನ ಮೇಲೆ ಸಿಟ್ಟು ಮಾಡಿಕೊಂಡು ತನ್ನ ಊರಿಗೆ ನಡೆದು ಬಿಟ್ಟ. ಹೆಚ್ಚು ಕಾಲ ಮಡಿಕೇರಿಯಲ್ಲಿದ್ದರೆ, ಸುಮಿತ್ರೆಯ ಸಾವಿಗೆ ತಾನೇ ಕಾರಣನೆಂದು ಜನರು ಆಡಿಕೊಳ್ಳುವುದು ಹಾಗಿರಲಿ, ಪೋಲೀಸಿರ ತನಿಖೆಗೂ ಸಿಕ್ಕಬೇಕಾಗುವುದೆಂಬ ಹೆದರಿಕೆ. ಹಾಗೊಂದು ವೇಳೆ ಸುಮಿತ್ರೆ ಸಾಯದೆ ಜೀವಂತವಿದ್ದರೂ, ಇಷ್ಟೆಲ್ಲಾ ಹಗರಣವಾದ ಮೇಲೂ, ಸುಮಿತ್ರೆಯನ್ನು ಪತ್ನಿ ಎಂದು ತಿಳಿಯುವುದು ಮೂಢತನವಲ್ಲದೆ ಮತ್ತೇನು?

ಹಿರಣ್ಣಯ್ಯ ಊರಿಗೆ ಹಿಂತಿರುಗುತ್ತಾ, ತುಂಬಾ ವಿಚಾರ ಮಂಥನ ನಡೆಸಿದ. ಸುಮಿತ್ರೆ ಅವನನ್ನು ಧಿಕ್ಕರಿಸಿದುದು ಅವನಿಗೆ ಅಂಗಾಲಿನ ಮುಳ್ಳಿನಂತೆ ಪೀಡಿಸುತ್ತಿತ್ತು. ಸುಮಿತ್ರೆಯನ್ನು ಬಿಟ್ಟು ಬೇರೆ ಹೆಣ್ಣನ್ನು ಮದುವೆಯಾಗಿದ್ದರೆ ಅವನಿಗೆ ಯಾವುದಕ್ಕೂ ಕೊರತೆಯಿರಲಿಲ್ಲ. ಆದರೆ ಹಳೆಯ ಬಾಂಧವ್ಯವೆಂದು, ಕೊಂಡು ಅವನು ತುಂಬಾ ತಪ್ಪು ಮಾಡಿದ್ದ. ಅವನು ಮಾಡಿದ ಕೆಲಸದಿಂದ ಸುಮಿತ್ರೆಯ ಬಾಳು ಗೋಳಾಯಿತು. ಅವನ ಬಾಳು ಹಾಳಾಯಿತು. ಸುಮಿತ್ರೆ ಇತರ ಹುಡುಗಿಯರಂತೆ ಅಲ್ಲ. ಅವಳು ಛಲಗಾತಿ, ಗಂಡಿನ ಗುಂಡಿಗೆ, ಸ್ಥೈರ್ಯ ಅವಳಲ್ಲಿತ್ತು. ಅವಳು ಶಾರದೆಯ ಗರಡಿಯಲ್ಲಿ ತಯಾರಾದವಳು. ಅವಳ ವಿದ್ಯಾದಾಹ, ಸ್ತ್ರೀಸ್ವಾತಂತ್ರ್ಯದ ಹುಚ್ಚು ಹಿರಣ್ಣಯ್ಯನಂಥವನಿಂದ ಪೂರೈಸಲಾಗದ ಬಯಕೆಗಳು. ತಿಳಿದೂ ತಿಳಿದೂ ಸುಮಿತ್ರೆಯನ್ನು ಮದುವೆ

ಯಾಗಿ ಅವಳ ಸುಕುಮಾರ ಬಾಳಿಗೆ ಎಂತಹ ಕುಠಾರವಾದೆ ಎಂದು ತನ್ನಲ್ಲೇ ಪರಿತಪಿಸಿದ ಹಿರಣ್ಣಯ್ಯ.

ಸುಮಿತ್ರೆ ಏನೋ ಹಿರಣ್ಣಯ್ಯನಿಗೆ ಹೇಳಿದ್ದಳು. "ನಿಮಗೆ ಬೇಕಿದ್ದರೆ ಬೇರೆ ಮದುವೆಯಾಗಿ ಸುಖವಾಗಿರಿ" ಎಂದು. ಅದರಂತೆ ಹಿರಣ್ಣಯ್ಯ ಮದುವೆಯಾಗಿ ಸುಖವಾಗಿರಬಹುದು. ಆದರೆ ಸುಮಿತ್ರೆಯ ಗತಿ? ಹಿರಣ್ಣಯ್ಯ ಕಟ್ಟಿರುವ ಮಾಂಗಲ್ಯ ಅವಳ ಕತ್ತಿನಲ್ಲಿರುವ ತನಕ ಸುಮಿತ್ರೆ ಹಿರಣ್ಣಯ್ಯನ ವಧು. ಅವಳು ಅವನವಳಾಗಲೀ ಬಿಡಲಿ........ಸುಮಿತ್ರೆ ಜೀವನಸಾಗರದಲ್ಲಿ ಈಗ ತಾನೇ ತೇಲಿಬಿಟ್ಟ ಒಂದು ಹಾಯಿ ಹಡಗು. ಅವಳ ಬದುಕು ಪ್ರಯಾಣಾರಂಭದಲ್ಲಿಯೇ ಬಾಳಿನ ಬಿರುಗಾಳಿಗೆ ಸಿಕ್ಕಿ ಇತ್ತ ಮುಳುಗದೆ, ಅತ್ತ ತೇಲದೆ ತೊಳಲಬೇಕೆ? ಅವಳಿಗೂ ಗಂಡನಿಗೆ ಇರುವಂತೆ ವಿವಾಹಸ್ವಾತಂತ್ರ್ಯವಿದ್ದಿದ್ದರೆ ಅದೆಷ್ಟು ಚೆನ್ನಾಗಿತ್ತು ಎಂದುಕೊಂಡ ಹಿರಣ್ಣಯ್ಯ.

ಹಿರಣ್ಣಯ್ಯ ಹಳೆಯ ಕಾಲದ ಮನುಷ್ಯನಾದರೂ ಹೊಸ ವಿಚಾರಗಳನ್ನು ಪೂರ್ವಾಭಿಪ್ರಾಯವಿಲ್ಲದೆ ವಿಮರ್ಶಿಸುವ ವಿಶಾಲ ಮನೋಧರ್ಮವನ್ನು ಬೆಳೆಸಿಕೊಂಡಿದ್ದ. ಅವನು ಏಕಾಏಕಿ ದುಡುಕುವ ವ್ಯಕ್ತಿಯಲ್ಲ. ಎಲ್ಲವನ್ನೂ ಕೂಲಂಕುಷವಾಗಿ ವಿಚಾರ ಮಾಡಿ, ಅನಂತರ ಕಾರ್ಯೋನ್ಮುಖನಾಗುವ ವ್ಯಕ್ತಿ. ಅವನು ಸುಮಿತ್ರೆಯನ್ನು ಮದುವೆಯಾಗುವ ವಿಷಯದಲ್ಲಿಯೂ ದುಡುಕಿರಲಿಲ್ಲ. ಆದರೆ ಅವನೊಂದು ಬಗೆದರೆ ದೈವವೊಂದು ಬಗೆಯಿತು. ಅಷ್ಟೆ.

ಹಿರಣ್ಣಯ್ಯ ಶನಿವಾರ ಸಂತೆಗೆ ಬಂದ ಕೆಲವು ದಿನ ಮಡಿಕೇರಿಯಲ್ಲಿ ಏನು ನಡೆಯಿತೆಂದು ಯಾರಿಗೂ ತಿಳಿಸಲಿಲ್ಲ. ಒಂದು ದಿನ ಮಡಿಕೇರಿಯಿಂದ ಸುಮಿತ್ರೆ ಕ್ಷೇಮವಾಗಿರುವ ಸುದ್ದಿಯನ್ನು ಹೊತ್ತ ಪತ್ರ ಬಂತು ಅದನ್ನು ಕಂಡು ಹಿರಣ್ಣಯ್ಯ ತನ್ನ ಹಾಗೂ ಸುಮಿತ್ರೆಯ ಭವಿಷ್ಯವನ್ನು ನಿರ್ಧರಿಸಿದ. ಆಗ ಅವನಿಗೆ ಒಂದು ಬಗೆಯ ತೃಪ್ತಿ ಕಾಣಿಸಿಕೊಂಡಿತು. "ಅಮ್ಮಾ, ನಾನು ಎರಡನೆಯ ಮದುವೆಯಾದರೂ ನಿನಗೆ ಕಷ್ಟ ಮಾತ್ರ ತಪ್ಪಲಿಲ್ಲ" ಎಂದು ಕೆಲಸ ಮಾಡಲು ಕೈಲಾಗದೆ ಒದ್ದಾಡುತ್ತಿದ್ದ ಮುದುಕಿಯನ್ನು ಕಂಡು ಹೇಳಿದ.

"ಯಾಕೆ ಹಿರಣ್ಣ?"

"ಸುಮಿತ್ರೆ ನನ್ನೊಡನೆ ಸಂಸಾರ ಮಾಡಿಕೊಂಡಿರಲು ಒಪ್ಪಲಿಲ್ಲ. ಅವಳಿಗೆ ನನ್ನನ್ನು ಮದುವೆಯಾಗಲು ಸುತರಾಂ ಇಷ್ಟವಿರಲಿಲ್ಲ. ಮಾವನವರು ಬಲ

ವಂತವಾಗಿ ಅವಳನ್ನು ನನಗೆ ಕಟ್ಟಿದರು."

"ಹಾಗಾದರೆ........" ಎಂದು ಮುದುಕಿ ರಾಗ ತೆಗೆದಳು.

"ಹೌದಮ್ಮಾ. ಒಲ್ಲದ ಹೆಂಡತಿಯನ್ನು ಹಿಡಿದುಕೊಂಡು ಬಂದು ಸಂಸಾರದ ಬಂಡಿಗೆ ಕಟ್ಟುವುದರಿಂದ ಯಾರಿಗೆ ಹಿತವಿದೆ? ಅವಳು ಅಲ್ಲಿ ತನ್ನ ಪಾಡಿಗೆ ತಾನು ಸುಖವಾಗಿರಲಿ. ಇಲ್ಲಿ ನನ್ನ ಪಾಡಿಗೆ ನಾನಿರುತ್ತೇನೆ."

"ಹಾಗಾದರೆ ಈ ಮಕ್ಕಳು ಮರೀನ ಯಾರು ನೋಡ್ಕೋತಾರೆ? ನನ್ನ ಕಾಲವಾಯಿತು."

ಹಿರಣ್ಣಯ್ಯ ಅದಕ್ಕೂ ಒಂದು ಬಾರಿ ಆಲೋಚಿಸಿದ್ದ. ಅದನ್ನು ಕಾರ್ಯಗತ ಮಾಡುವ ಮೊದಲೇ ತಾಯಿಗೆ ತಿಳಿಸಲು ಇಚ್ಛಿಸಲಿಲ್ಲ.

ಹಿರಣ್ಣಯ್ಯ ಸುಮಿತ್ರೆಗೊಂದು ಕಾಗದ ಬರೆದ. ಅದರಲ್ಲಿ ಸುಮಿತ್ರೆಯನ್ನು ತಾನು ವಿವಾಹವಾದುದಕ್ಕೆ ತುಂಬಾ ವಿಷಾದ ವ್ಯಕ್ತಪಡಿಸಿ ಸುಮಿತ್ರೆ ಸುಖವಾಗಿರ ಬಯಸಿದರೆ ಅದಕ್ಕಾಗಿ ತಾನು ಯಾವ ತ್ಯಾಗ ಮಾಡಲೂ ಸಿದ್ಧನಿರುವುದಾಗಿ ತಿಳಿಸಿದ. ಅಲ್ಲದೆ ಸುಮಿತ್ರೆಯ ಹೆಸರಿಗೆ ತನ್ನ ಆಸ್ತಿಯಲ್ಲಿ ಕೊಂಚ ಭಾಗ ತೆಗೆದಿರಿಸಿ "ಅದರ ಉತ್ಪತ್ತಿ ನಿನ್ನದು. ನೀನು ನನ್ನನ್ನು ಗಂಡನೆಂದು ತಿಳಿದರೂ ಸಮವೇ—ತಿಳಿಯದಿದ್ದರೂ ಸಮವೇ. ನನಗೆ ನಿನ್ನ ಮೇಲೆ ಕೋಪವಿಲ್ಲ. ನಾನು ನಿನಗೆ ತುಂಬಾ ಅನ್ಯಾಯ ಮಾಡಿದ್ದೇನೆ. ನಾನು ನೆಪಮಾತ್ರಕ್ಕೆ ಗಂಡನಾಗಿರುವುದು ನಿನ್ನ ಸುಖಕ್ಕೆ ಮುಳ್ಳಾದರೆ ಕೋರ್ಟಿನ ಮೂಲಕ ನಾವು ದಾಂಪತ್ಯ ವಿಚ್ಛೇದನ ಮಾಡಿಕೊಳ್ಳೋಣ. ಅನಂತರ ನಿನಗೆ ಮತ್ತೆ ವಿವಾಹವಾಗುವ ಮನಸ್ಸಿದ್ದರೆ ಸಂತೋಷವಾಗಿ ಆಗಿ ಸುಖದಿಂದ ಇರು." ಎಂದು ಬರೆದ.

ಈ ಕಾಗದವನ್ನು ಕಂಡ ವೆಂಕಪ್ಪಯ್ಯ ಅಳಿಯನಿಗೆ ಹುಚ್ಚು ಹಿಡಿದಿದೆ ಎಂದುಕೊಂಡರು. ಯಾರಾದರೂ ಹೆಂಡತಿಗೆ ಹೀಗೆ ಬರೆಯುತ್ತಾರೆಯೇ? ಇಷ್ಟಕ್ಕೆಲ್ಲ ಕಾರಣಳಾದ ಸುಮಿತ್ರೆಯ ಮೇಲೆ ಅವರ ಸಿಟ್ಟು ಕೇಂದ್ರೀಕೃತವಾಗಿ ಅವಳ ಮೇಲೆ ಏರಿ ಹೋಗಿ ಹತ್ತೆಂಟು ಏಟುಗಳನ್ನೂ ಬಿಗಿದರು. ಸುಮಿತ್ರೆ ಶಾಂತವಾಗಿಯೇ ಎಲ್ಲವನ್ನೂ ಸಹಿಸಿಕೊಂಡಳು. ಹಿರಣ್ಣಯ್ಯ ಸುಮಿತ್ರೆಗೆ ಬರೆದಿದ್ದ ಪತ್ರದ ಒಂದೊಂದು ಮಾತೂ, ಸುಮಿತ್ರೆ ಅಧೀರಳಾದಾಗ 'ನೀನು ಮಾಡಿದ ಕೃತ್ಯ ಸರಿ' ಎಂದು ಹುರಿದುಂಬಿಸುತ್ತಿತ್ತು.

ಕೆಲವು ದಿನ ಹೀಗೆಯೇ ಕಳೆಯಿತು.

ಒಂದು ದಿನ ಶನಿವಾರ ಸಂತೆಯಿಂದ ವೆಂಕಪ್ಪಯ್ಯನವರಿಗೆ ಒಂದು ತಾರು ಬಂತು. 'ಹಿರಣ್ಣಯ್ಯ ಆತ್ಮಹತ್ಯ ಮಾಡಿಕೊಂಡಿದ್ದಾನೆ. ಕೂಡಲೇ ಹೊರಟು ಬರುವುದು' ಎಂದು ತಿಳಿಸಿದ್ದರು. ಈ ತಾರು ಬಂದಾಗ ವೆಂಕಪ್ಪಯ್ಯ ಮನೆಯಲ್ಲಿರಲಿಲ್ಲ. ಅದು ನೇರ ಸುಮಿತ್ರೆಯ ಕೈಗೆ ಸಿಕ್ಕಿತು. ಅದನ್ನು ಓದಿ ಎಚ್ಚರ ತಪ್ಪಿ ಕುಸಿದುಬಿದ್ದಳು. ಅವಳ ಕಣ್ಣಿನಲ್ಲಿ ಒಂದೇ ಸಮನೆ ನೀರು ಉಕ್ಕಿತೇ ಹೊರತು ತುಟಿಯಿಂದ ಒಂದು ಮಾತೂ ಬರಲಿಲ್ಲ. ತಾಯಿ ಮಗಳಿಂದ ವಿಷಯ ತಿಳಿದು ಬಾಯಿಗೆ ಬಂದ ಉದ್ಗಾರ ಹೊರಡಿಸುತ್ತಾ ರೋಧಿಸತೊಡಗಿದರು. ಆಗಲೇ ವೆಂಕಪ್ಪಯ್ಯ ಬಂದುದು. ವಿಷಯ ತಿಳಿದು ಹಿರಣ್ಣಯ್ಯನ ಆತ್ಮಹತ್ಯೆಗೆ ಮಗಳೇ ಕಾರಣವೆಂದು ಮೂದಲಿಸಿ, ಅವಳನ್ನು ಬಾಯಿಗೆ ಬಂದಂತೆ ಬೈದರು. ಇನ್ನು ಮೇಲೆ ತನ್ನ ಮಗಳು ವಿಧವೆ ಎನ್ನುವ ಚಿಂತೆ ಅವರಿಗೆ ಬರಲಿಲ್ಲ. ಭಗ್ನಮನೋರಥನಾಗಿ, ಆತ್ಮಹತ್ಯೆ ಮಾಡಿಕೊಂಡ ಹಿರಣ್ಣಯ್ಯನಿಗೆ ಅವರು ಮರುಗಿದರೇ ಹೊರತು, ಮಗಳ ಮಂಗಳಸೂತ್ರ ಕಡಿದು ಬಿದ್ದುದಕ್ಕಾಗಿ ಅವರು ಮರುಗಲಿಲ್ಲ.

ಅದೇ ಸಂಜೆ ಪಾರ್ವತಮ್ಮನವರ ಮನೆಯ ಕಾರನ್ನು ಕೇಳಿ ತರಿಸಿಕೊಂಡು ಶನಿವಾರ ಸಂತೆಗೆ ಮನೆಯವರೆಲ್ಲ ಹೊರಟರು. ಅವರು ಊರು ಸೇರುವ ಹೊತ್ತಿಗೆ ಹಿರಣ್ಣಯ್ಯನ ದೇಹ ಶವಪರೀಕ್ಷೆಗೆಂದು ಡಾಕ್ಟರ ಬಳಿಗೆ ಹೋಗಿತ್ತು. ಎಲ್ಲರಿಗೂ ಹಿರಣ್ಣಯ್ಯನ ಆಕಸ್ಮಿಕ ಸಾವು ದುಃಖದ ಜೊತೆಯಲ್ಲಿ ಆಶ್ಚರ್ಯ ಉಂಟು ಮಾಡಿತ್ತು. ಹಿಂದಣ ದಿನವಷ್ಟೇ ಹಿರಣ್ಣಯ್ಯ ಕೊಳ್ಳೇಗಾಲದ ಕಡೆಯಿಂದ ಬಂದಿದ್ದ ಹುಡುಗಿಯನ್ನು ನೋಡಿ ಮೂರನೆಯ ಮದುವೆಗೆ ಒಪ್ಪಿದ್ದ. ಇನ್ನು ಕೆಲವು ದಿನಗಳಲ್ಲಿ ಲಗ್ನವೂ ನಡೆಯುವುದಿತ್ತು. ಹೀಗಿದ್ದೂ ಹಿರಣ್ಣಯ್ಯ ಏಕೆ ಆತ್ಮಹತ್ಯ ಮಾಡಿಕೊಂಡ? ಇದೊಂದು ಯಾರಿಂದಲೂ ಬಿಡಿಸಲಾಗದ ಒಗಟಾಗಿ ಉಳಿಯಿತು. ಹಿರಣ್ಣಯ್ಯನ ತಾಯಿಗೂ ಅಷ್ಟೇ. ಹಿರಣ್ಣಯ್ಯ ಆ ರಾತ್ರೆ ಎಂದಿನಂತೆ ಪುಷ್ಕಳವಾಗಿ ಉಂಡು, ಕೊಂಚ ಕಾಲ ತಾಯಿಯೊಂದಿಗೆ, ಮಕ್ಕಳೊಂದಿಗೆ ಲಲ್ಲೆ ಹೊಡೆಯುತ್ತಿದ್ದು, ಹಾಸಿಗೆ ಹಾಸಿ ಎಲೆ ಅಡಿಕೆ ಹಾಕಿಕೊಳ್ಳುತ್ತಾ ಮಲಗಿದನಂತೆ. ಬೆಳಗಾಗುವ ವೇಳೆಗೆ ಅವನು ಹಾಸಿಗೆಯ ಮೇಲೆ ಹೆಣವಾಗಿ ಬಿದ್ದಿದ್ದ! ಇಂತಹ ಸಾವನ್ನು ಏನೆನ್ನಬೇಕು?

ಡಾಕ್ಟರು ಶವವನ್ನು ಬಹಳ ಹೊತ್ತು ಪರೀಕ್ಷಿಸಿ ಸಾವಿಗೆ ಕಾರಣ ವಿಷ ಪ್ರಾಶನವೆಂದು ನಿರ್ಧರಿಸಿಕೊಂಡರು. ಆದರೆ ಇಂತಹುದೇ ವಿಷವೆಂದು ಅವರಿಂದ ಪತ್ತೆ ಮಾಡಲಾಗಲಿಲ್ಲ. ಅವರು ಅದಕ್ಕಾಗಿ ಶೋಧಿಸುತ್ತಿದ್ದಾಗ ಹಿರಣ್ಣಯ್ಯನ ಹಾಸಿಗೆಯ ಬಳಿ ಹಿಂದಣ ದಿನ ಸಂಜೆ ಹಿರಣ್ಣಯ್ಯನೇ ಖುದ್ದು ಬಿಡಿಸಿ ತಂದಿದ್ದ ಚಿಗುರು ವೀಳೆಯದೆಲೆಯ ಕಟ್ಟು ಬಿದ್ದಿತ್ತು. ಅದನ್ನು ಎತ್ತಿಕೊಂಡು ಡಾಕ್ಟರು ಸೂಕ್ಷ್ಮವಾಗಿ ಪರೀಕ್ಷಿಸಿದರು. ಒಂದೆರಡು ಚಿಗುರೆಲೆಯ ಮೇಲೆ ಎಂತಹುದೋ ಕಪ್ಪು ಮಚ್ಚೆ ಕಂಡಿತು. ಅದನ್ನು ಉಪಾಯವಾಗಿ ಬೇರ್ಪಡಿಸಿ, ಅನ್ನದಲ್ಲಿ ಕಲೆಸಿ, ಬೀದಿಯ ನಾಯಿಗೆ ತಿನ್ನಲು ಇಟ್ಟರು. ಆ ಅನ್ನವನ್ನು ತಿಂದ ನಾಯಿ ಕ್ಷಣಕಾಲ ತತ್ತರಿಸಿ ಕ್ರಮೇಣ ನಿಶ್ಚೇಷ್ಟಿತವಾಗಿ ಬಿದ್ದುಬಿಟ್ಟಿತು. ಡಾಕ್ಟರ ಊಹೆ ನಿಜವಾಯಿತು.

ಹಿರಣ್ಣಯ್ಯ ಆತ್ಮಹತ್ಯ ಮಾಡಿಕೊಂಡಿಲ್ಲ. ಕತ್ತಲಿನಲ್ಲಿ ಯಾವುದೋ ವಿಷಜಂತು ಉಗುಳಿದ್ದ ವಿಷಲೇಪ ಎಲೆಯನ್ನು ತಿಳಿಯದೆ ತಿಂದು ಮೃತಿ ಹೊಂದಿದ್ದಾನೆ ಎಂದು ತೀರ್ಪಿತ್ತರು.

ಎಲ್ಲರೂ ಡಾಕ್ಟರ ಜಾಣ್ಮೆಯನ್ನು ಹೊಗಳಿದರು. ಹಿರಣ್ಣಯ್ಯನ ದುರ್ಮರಣಕ್ಕಾಗಿ ಮರುಗಿದರು. ಸುಮಿತ್ರೆಯು ವೈಧವ್ಯಕ್ಕಾಗಿ ಕಣ್ಣೀರು ಮಿಡಿದರು.

‡ ‡ ‡ ‡

ಹಿರಣ್ಣಯ್ಯನ ದಿನ ವಾರಗಳಿಗೆಲ್ಲ ವೆಂಕಪ್ಪಯ್ಯ ಕಂಕಣ ಕಟ್ಟಿಕೊಂಡು ನಿಂತು ಸಾಂಗವಾಗಿ ನೆರವೇರಿಸಿದರು. ಹಿರಣ್ಣಯ್ಯನ ಮಕ್ಕಳು ಮರಿಗಳ ಪೋಷಣೆ, ಜಮೀನು ಜಠರೆಗಳನ್ನು ನೋಡಿಕೊಳ್ಳುವ ಕೆಲಸ ವೆಂಕಪ್ಪಯ್ಯನವರ ಕೊರಳಿಗೇ ಬಿತ್ತು. ಸುಮಿತ್ರೆಯು ಹೆಸರಿನ ಆಸ್ತಿ ಹಾಗೂ ಮಕ್ಕಳ ಆಸ್ತಿ ಎಲ್ಲಕ್ಕೂ ಹಿರಣ್ಣಯ್ಯನ ತಾಯಿ ವೆಂಕಪ್ಪಯ್ಯನವರನ್ನು ಮೇಲ್ವಿಚಾರಕನನ್ನಾಗಿ ನೇಮಿಸಿದಳು. ಹೀಗಾಗಿ ವೆಂಕಪ್ರಯ್ಯನವರ ಸಂಸಾರ ಮಡಿಕೇರಿಯಿಂದ ಶನಿವಾರ ಸಂತೆಗೆ ಬರಬೇಕಾಯಿತು. ಮಡಿಕೇರಿಯಲ್ಲಿ ವೆಂಕಪ್ಪಯ್ಯನವರ ಆದಾಯವೂ ಅಷ್ಟರಲ್ಲಿಯೇ ಇತ್ತು. ಅವರು ಹಿಡಿದಿದ್ದ ವೈದಿಕ ವೃತ್ತಿಯಿಂದ ಅವರ ಹೊಟ್ಟೆಗೆ ಬಟ್ಟೆಗೆ ಸಾಕೂ ಸಾಲದು. ಮನೆಯವರೆಲ್ಲ ಸಂತೋಷವಾಗಿಯೇ

ಶನಿವಾರ ಸಂತೆಗೆ ಹೋಗಿರಲು ಒಪ್ಪಿದರು. ಆದರೆ ಸುಮಿತ್ರೆ ಮಾತ್ರ ತಾನು ಅಲ್ಲಿಗೆ ಬರುವುದಿಲ್ಲವೆಂದು ಹಠ ಹಿಡಿದಳು. ಈ ವರ್ಷ ಸುಮಿತ್ರೆ ಮೆಟ್ರಿಕ್ಕಿಗೆ ಕುಳಿತಿದ್ದಳು. ಅದನ್ನು ಮುಗಿಸದ ಹೊರತು ಬೇರೆಲ್ಲಿಗೂ ಅವಳು ಕದಲುವಂತಿಲ್ಲ. ಅಲ್ಲದೆ ವೈದಿಕರಾದ ತಂದೆ ತಾಯಿಯರೊಡನೆ ಅವಳು ಇರುವುದು ಅಪಾಯಕರ. ವೈದಿಕ ಧರ್ಮದ ಪುಢಾರಿ ಎನಿಸಿದ ವೆಂಕಪ್ಪಯ್ಯ ಮಗಳ ಮಾಂಗಲ್ಯ ಹಣೆಯ ಕುಂಕುಮದ ಜೊತೆಗೆ, ಒಂದು ದಿನ ಶಿರದ ಮುಡಿಗೂ ಸಂಚಕಾರ ತರುವವರೇ. ಯಾವನೋ ಕಟ್ಟಿದ್ದ ಮಾಂಗಲ್ಯ ಹಾಳಾದರೆ ತನ್ನ ಹುಟ್ಟಿನೊಂದಿಗೆ ಸಹಜವಾಗಿ ಬಂದಿದ್ದ ಸೌಂದರ್ಯವೇಕೆ ವಿರೂಪಗೊಳ್ಳಬೇಕು ? ಎಂದು ಪ್ರಶ್ನಿಸಿಕೊಂಡಳು ಸುಮಿತ್ರೆ.

" ನಿಮಗೆ ಬೇಕಿದ್ದರೆ ನೀವು ಹೋಗಿ. ನಾನಂತೂ ಈ ಊರು ಬಿಟ್ಟು ಕದಲುವುದಿಲ್ಲ "

" ಬರದೇ ಹೋದರೆ ನೀನು ಇಲ್ಲಿಯೇ ನಾಯಿಯಾಗಿ ಬಿದ್ದು ಒರಗು " ಎಂದು ಒರಟಾಗಿ ಹೇಳಿದರು ವೆಂಕಪ್ಪಯ್ಯ.

ಹೊಸದಾಗಿ ವಿಧವೆಯಾದ ಮಗಳ ಮನಸ್ಸನ್ನೇಕೆ ನೋಯಿಸಬೇಕೆಂದು ತಾಯಿ ಹೇಳಿದರು. " ಅಮ್ಮಯ್ಯ ಆದುದು ಆಗಿ ಹೋಯಿತು. ಎಲ್ಲವೂ ನಮ್ಮ ನಮ್ಮ ಕರ್ಮ. ನೀನು ಯಾಕೆ ಹಠ ಮಾಡುತ್ತೀ ಮಗು? ನೀನು ಇಲ್ಲೇ ಉಳಿದರೆ ನಿನಗಾರು ದಿಕ್ಕು? ನೀನು ಹರೆಯದವಳು—ಒಂಟಿ ಹೆಂಗಸು. "

" ಅಮ್ಮ ಇದುವರೆವಿಗೆ ಮನುಷ್ಯರನ್ನು ದಿಕ್ಕೆಂದು ನಂಬಿದುದಕ್ಕೆ ನಾನು ಅನಾಥಳಾದೆ. ಈಗ ನನಗೆ ದೇವರೇ ದಿಕ್ಕು. " ಎಂದಳು ನಿರ್ವಿಣ್ಣಳಾಗಿ.

ತಾಯಿ ಮಗಳ ಮಾತನ್ನು ಕೇಳಿ ವಿಷಾದವಾಗಿ ನಕ್ಕರು.

" ನಮ್ಮ ಮಾತೂಂದ್ರೆ ನಿನಗೆ ಅಷ್ಟು ಅಲಕ್ಷ್ಯ. ನೀನು ಎಲ್ಲಾದ್ರೂ ಹಾಳಾಗು. ನಿನ್ನಂತಹ ಗಂಡುಬೀರಿ ಸಕೇಸಿಯನ್ನು ಮನೆಯಲ್ಲಿಟ್ಟುಕೊಂಡರೆ ನಮಗೂ ಮಾನವಿಲ್ಲ. ನಮ್ಮ ಕಣ್ಣೆದುರಿನಲ್ಲಿ ಇಲ್ಲದೆ ಏನಾದ್ರೂ ಮಾಡಿಕೋ. ಜಾತೀನಾದ್ರೂ ಕೆಡು, ನೀತಿನಾದ್ರೂ ಬಿಡು " ಎಂದು ಕೂತಲ್ಲಿಂದಲೇ ಗರ್ಜಿಸಿದರು ವೆಂಕಪ್ಪಯ್ಯ.

ಗಂಡನ ಕಠೋರ ನುಡಿಗಳನ್ನು ಕೇಳಿ ಸೀತಮ್ಮ ನೊಂದುಕೊಂಡು,

" ಸುಮಿತ್ರೆ, ಅವರಿಗೆ ಈಚೆಗೆ ಯಾಕೋ ಬುದ್ಧಿ ಚಂಚಲವಾಗಿದೆಯಮ್ಮ. ಅವರ ಮಾತನ್ನು ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡ. " ಎಂದು ಸಮಾಧಾನ ಪಡಿಸಿದರು.

ಸುಮಿತ್ರೆ ಮಡಿಕೇರಿಯಲ್ಲಿಯೇ ಉಳಿದುಕೊಳ್ಳುವ ಧೈರ್ಯ ಮಾಡಿದ್ದು ಶಾರದೆಯ ಮಾತಿನ ಮೇಲೆ. ಶಾರದೆಗೆ ತಮ್ಮ ಮನೆಯ ಸುದ್ದಿ ಹೇಳುತ್ತಾ ಸುಮಿತ್ರೆ ಎಂದಳು: " ಚಿಕ್ಕಮ್ಮ ನನ್ನ ಮಾಂಗಲ್ಯ ಹೋಯಿತೆಂದು ನನಗೆ ದುಃಖವಿಲ್ಲ. ಅದು ಮೈಮೇಲೆ ಇದ್ದಾಗ ನಾನು ಪಟ್ಟ ಸುಖ ಅಷ್ಟರಲ್ಲಿಯೇ ಇದೆ. ಈ ಹಳೆಯ ಗಾಯವನ್ನು ಮರೆಯಲು ನನಗಿರುವ ಒಂದೇ ಮಾರ್ಗ ವೆಂದರೆ ನನ್ನ ವ್ಯಾಸಂಗ. ಈಗ ನನ್ನ ಆ ಆಸೆಯ ಕುಡಿ ಕಳಚಿ ಬೀಳುವ ಹೊತ್ತು ಬಂದಿದೆ " ಎಂದು ಕಣ್ಣೀರು ತಂದಳು.

" ಆಗಲಿ ಸುಮಿತ್ರೆ, ನಿನಗೆಷ್ಟು ಓದುವ ಆಸೆಯಿದೆಯೋ ಅಷ್ಟೂ ಓದು. ಓದು ಗಂಡಿನ ಗುತ್ತಿಗೆಯಲ್ಲ. ಜ್ಞಾನಸಂಪಾದನೆ ಗಂಡಿಗೆಷ್ಟು ಅಗತ್ಯವೋ ಹೆಣ್ಣಿಗೂ ಅಷ್ಟೇ ಅಗತ್ಯವಿದೆ. ಆದರೆ ಗಂಡು ಹೆಣ್ಣನ್ನು ಶಾರದೆಯ ಗುಡಿ ಯಿಂದ ಹೊರದಬ್ಬಿ ಅಡಿಗೆಯ ಮನೆಯಲ್ಲಿ ಕೊಳಿಸಿದ್ದಾನೆ. ನಿನ್ನಂಥ ಹುಡುಗಿ ಯರು ಹೆಚ್ಚು ಕಲಿಯಬೇಕು ಸುಮ್ಮಿ. ಕಲಿತು, ಅಜ್ಞಾನದ ಕೂಪದಲ್ಲಿ ತೊಳಲಾಡುತ್ತಿರುವ ಸೋದರಿಯರಿಗೆ ಜ್ಞಾನದೀಪವಾಗಬೇಕು. ಹೆಣ್ಣಿನ ಅನ ರಕ್ಷತೆ ಹೋಗದ ಹೊರತು ಅವರು ಎಚ್ಚತ್ತುಕೊಳ್ಳರು. ತಮ್ಮ ಹಕ್ಕುಬಾಧ್ಯತೆ ಗಳು ಏನೆಂಬುದನ್ನು ಅರಿಯಲಾರರು. ಆದುದರಿಂದ ನಿನಗೆಷ್ಟು ಆಸೆಯೋ ಅಷ್ಟೂ ಕಲಿ. ಓದಿ ಪಂಡಿತೆಯಾಗು. " ಎಂದಳು ಶಾರದೆ.

"ಚಿಕ್ಕಮ್ಮ ನನಗೆ ಡಾಕ್ಟರಾಗುವ ಆಸೆಯಿದೆ. "

"ನಿನ್ನಂಥ ಹೆಣ್ಣಿಗೆ ಒಪ್ಪುವ ಯೋಗ್ಯವೃತ್ತಿ ಅದು ಸುಮಿತ್ರೆ. ದೀನ ದಲಿತರ ಸೇವೆಗೆ, ದರಿದ್ರನಾರಾಯಣರ ಸೇವೆಗೆ ಅದು ರಾಜಮಾರ್ಗ. ಸಮಾಜ ದಲ್ಲಿ ಎಷ್ಟೊಂದು ಬಗೆಯ ರೋಗ ರುಜಿನಗಳಿವೆ! ಅದರಲ್ಲಿಯೂ ಹೆಣ್ಣು ಸಾವಿರ ಬಗೆಯ ರೋಗಗಳ ಹುತ್ತವಾಗಿದ್ದಾಳೆ. ಹೆರಿಗೆ ಮೊದಲಾದ ಕಡ್ಡಾ ಯದ ಆಪತ್ತುಗಳಿಗೆ ಬಲಿಯಾಗಿ ಎಷ್ಟು ಮಂದಿ ಬಾಲ ಮಾತೆಯರು ಸಾವಿನ ಉಡಿಯಲ್ಲಿ ಇಲ್ಲ! ಗಂಡಿನ ಕಾಮತೃಪ್ತಿಗಾಗಿ ತಮ್ಮ ತನುಮನವನ್ನು ಆಹುತಿ ಕೊಟ್ಟ ಎಷ್ಟು ಮಂದಿ ಅನಾಥ ಭಗಿನಿಯರು ಜೀವನ್ಮುಕ್ತರಾಗಿಲ್ಲ? ಅಂಥವರ

ಉದ್ಧಾರ ನಿನ್ನಂಥ ಸೇವಾದೀಕ್ಷೆಯನ್ನೇ ಜೀವಪಥವಾಗುಳ್ಳ ಹೆಣ್ಣುಮಕ್ಕಳು ಮಾಡುವ ಕೆಲಸ ಸುಮ್ಮಿ" ಎಂದಳು ಶಾರದೆ.

ಶಾರದೆಗೆ ಮಕ್ಕಳಿಲ್ಲದ ತನ್ನ ಮನೆಯಲ್ಲಿ ಸುಮಿತ್ರೆಯನ್ನು ಮಗುವಾಗಿಟ್ಟುಕೊಳ್ಳುವುದರಲ್ಲಿ ತುಂಬಾ ಹೆಮ್ಮೆಯಿತ್ತು. ಕಿಟ್ಟಣ್ಣನಿಗೂ ಅಷ್ಟೇ. ಮಡಿಕೇರಿಗೆ ಬಂದಲಾಗಾಯ್ತು ಅವರ ಸಾಕುಮಗಳಾಗಿದ್ದ ಸುಮಿತ್ರೆ ಈಗ ಮನೆಯ ಮಗಳಾದಳು. ಸುಮಿತ್ರೆಗೆ ಶಾರದೆ ಆಸರೆ ಕೊಡಲಿರುವ ಸುದ್ದಿಯನ್ನು ಕೇಳಿ ವೆಂಕಪ್ಪಯ್ಯ ಸುಮಿತ್ರೆಯನ್ನು ಕೆಡಸಿದವಳು ಶಾರದೆಯೇ ಎಂದು ಹಾರಾಡಿದರು.

ಅಂತೂ ಇಂತೂ ಸುಮಿತ್ರೆಯ ಭವಿಷ್ಯ ಒಂದು ರೀತಿಯಾಗಿ ನಿರ್ಧರಿಸಿದಂತೆ ಆಯಿತು. ಅವಳ ಜೀವನದಲ್ಲಿ ಒಂದೆರಡು ವರ್ಷಗಳಿಂದ ಎದ್ದಿದ್ದ ಬಿರುಗಾಳಿಯ ಸದ್ದು ಅಡಗಿತ್ತು. ಆದರೂ ಅದು ಎಬ್ಬಿಸಿದ್ದ ಹಾವಳಿಯ ಗುರುತು ಹಿಂದೆ ಉಳಿಸಿತ್ತು. ಅದನ್ನು ಮರೆತು ನಗುವ ಶಕ್ತಿ ಸುಮಿತ್ರೆಗೆ ಇತ್ತು. ಶಾರದೆಯೂ ಶೈಲಜೆಯೂ ಸುಮಿತ್ರೆ ಒಂದು ಬಾರಿಯೂ ವಿಧವೆ ಎಂದು ತಿಳಿದು ಕೊರಗದಂತೆ ನೋಡಿಕೊಳ್ಳುತ್ತಿದ್ದರು. ಸುಮಿತ್ರೆಗೆ ಈಗ ತಾನು ಸುಖಿ ಎನ್ನುವ ಭಾವನೆ ಬಂದಿತ್ತು. ಅವಳು ತನ್ನ ವ್ಯಾಸಂಗದಲ್ಲಿ ತನ್ನ ದುಃಖವನ್ನು ಮರೆತಿದ್ದಳು.

೫

ಶಾಲೆಯಲ್ಲೆಲ್ಲಾ ಸುಮಿತ್ರೆ ಶೈಲಜೆಯರನ್ನು 'ಟ್ವಿನ್ ಸಿಸ್ಟರ್ಸ್'—ಅವಳಿ ಸೋದರಿಯರು—ಎಂದೇ ಕರೆಯುತ್ತಿದ್ದರು. ಅಷ್ಟರಮಟ್ಟಿನ ಅನ್ಯೋನ್ಯ ಅವರಲ್ಲಿ ಇತ್ತು. ಒಬ್ಬರು ಒಂದು ದಿನ ತರಗತಿಗೆ ಬರದೆ ಇದ್ದರೆ—ಉಪಾಧ್ಯಾಯರಾದಿಯಾಗಿ ಎಲ್ಲರೂ ಇನ್ನೊಬ್ಬರೆಲ್ಲಿ ಎಂದು ಪ್ರಶ್ನಿಸದೆ ಇರುತ್ತಿರಲಿಲ್ಲ. ಅವರು ಶಾಲೆಯ ಒಳಗೆ ಹೊರಗೆ ಸದಾಕಾಲ ಜೊತೆಯಾಗಿ ಇರುತ್ತಿದ್ದುದು ಮಾತ್ರವಲ್ಲ. ವ್ಯಾಸಂಗ, ಆಟಪಾಟಗಳಲ್ಲಿ ಒಬ್ಬರನ್ನು ಒಬ್ಬರು ಅನುಸರಿಸುತ್ತಿದ್ದರು. ಯಾವ

ಆಟವೇ ಆಗಲಿ, ಅವರೇ ಜೊತೆ. ಸಂಗ ಬಿಡುವುದರಲ್ಲೂ ಸ್ನೇಹ ಕಟ್ಟಿಕೊಳ್ಳುವುದರಲ್ಲೂ ಒಬ್ಬರು ಹಾಕಿದ ಮೇಲ್ಪಂಕ್ತಿ ಇನ್ನೊಬ್ಬರದು. ಇಷ್ಟೇ ಅಲ್ಲ. ವಿದ್ಯಾರ್ಥಿಗಳ ವಿಷಯದಲ್ಲಿಯೂ ಇಬ್ಬರದೂ ಒಂದೇ ಅಭಿಪ್ರಾಯ. ಆದರೆ ಉಪಾಧ್ಯಾಯರ ದೃಷ್ಟಿಯಲ್ಲಿ ಇಬ್ಬರೂ ಒಂದೊಂದು ರೀತಿಯಾಗಿ ಪ್ರಸಿದ್ಧರಾಗಿದ್ದರು. ಸುಮಿತ್ರೆ ಓದುವುದರಲ್ಲಿ, ಬುದ್ಧಿ ಚತುರತೆಯಲ್ಲಿ ಶೈಲಜೆಗಿಂತ ಸಾವಿರ ಪಾಲು ಮೇಲು. ಶೈಲಜೆ ತನ್ನ ಅಂದಚಂದ ನೋಡಿಕೊಳ್ಳುವುದರಲ್ಲಿ, ಹೊಸ ಹೊಸದಾಗಿ ಸಿಂಗರಿಸಿಕೊಂಡು ಶಾಲೆಗೆ ಒನಪು ಒಯ್ಯಾರಗಳಿಂದ ಬರುವುದರಲ್ಲಿ ಪ್ರಸಿದ್ಧಿ. ಅವಳಿಗೆ ಶೃಂಗರಿಸಿಕೊಳ್ಳುವುದರಲ್ಲಿ ಎಷ್ಟು ಆಸಕ್ತಿ ಇತ್ತೋ ಓದಿನಲ್ಲಿ ಅಷ್ಟೇ ನಿರಾಸಕ್ತಿ. ಸುಮಿತ್ರೆ ತರಗತಿಗೆಲ್ಲಾ ಫಸ್ಟ್—ಮೊದಲನೆಯ ಹುಡುಗಿ ಅಂತೆಯೇ ಶೈಲಜೆ ತರಗತಿಗೆಲ್ಲಾ ಲಾಸ್ಟ್—ಕೊನೆಯ ಹುಡಿಗಿ. ಈ ಬಗೆಯ ತಾರತಮ್ಯವಿದ್ದರೂ ಅವರಿಬ್ಬರು ಒಬ್ಬ ತಾಯಮಕ್ಕಳಂತೆ ಒಬ್ಬರನ್ನೊಬ್ಬರು ಕ್ಷಣ ಕಾಲ ಎಡೆಬಿಡದೆ ಇರುತ್ತಿದ್ದರು. ಅವರಿಬ್ಬರ ಸ್ನೇಹದ ನಡುವೆ ಶೈಲಜೆಯ ಸಿರಿವಂತಿಕೆಯಾಗಲೀ, ಅಂತಸ್ಥಾಗಲೀ ಅಡ್ಡಿ ಬಂದಿರಲಿಲ್ಲ.

ಶೈಲಜೆ ಸುಮಿತ್ರೆಯನ್ನು ಬಿಟ್ಟು ಇರುತ್ತಿದ್ದುದೇ ಅಪರೂಪ. ಅದರಲ್ಲಿಯೂ ಸುಮಿತ್ರೆಯ ಮದುವೆಯಾದ ಮೇಲೆ ಅವಳನ್ನು ಆ ದುಃಖದ ಕಡಲಿನಿಂದ ಕೆಲಮಟ್ಟಿಗಾದರೂ ಪಾರು ಮಾಡಲು ಶಕ್ತಿ ಇದ್ದವಳೆಂದರೆ ಅದು ಶೈಲಜೆ. ಅವಳು ಸುಮಿತ್ರೆ ತನ್ನ ದೌರ್ಭಾಗ್ಯವನ್ನು ಕ್ಷಣಕಾಲವಾದರೂ ನೆನೆದು ದುಃಖಿಸದಂತೆ ನೋಡಿಕೊಳ್ಳುತ್ತಿದ್ದಳು. ಅವಳನ್ನು ಆದಷ್ಟು ಕಾಲ ಆಟಪಾಟಗಳಲ್ಲೂ ಪಾಠಪ್ರವಚನಗಳಲ್ಲೂ ತೊಡಗಿಸುತ್ತಿದ್ದಳು. ನೆಪಮಾತ್ರಕ್ಕೆ ಶಾಂದೆಯ ಮನೆ, ಆದರೆ ಸುಮಿತ್ರೆ ವೇಳೆಯನ್ನು ಕಳೆಯುತ್ತಿದ್ದುದೆಲ್ಲ ಶೈಲಜೆಯ ಮನೆಯಲ್ಲೇ.

ಶೈಲಜೆ ಈ ಕೆಲವು ದಿನಗಳಿಂದ ಅದೇನು ಕಾರಣವೋ ಸುಮಿತ್ರೆಯಿಂದ ದೂರವಿರಲು ಯತ್ನಿಸುತ್ತಿದ್ದಳು. ಅವಳೊಡನೆ ಮಾತನಾಡಲು ಇವಳಿಗೆ ಏನೋ ಒಂದು ಅಳುಕು. ಅವಳೊಡನೆ ಸಂಚಾರ ಹೊರಡಲು ಏನೋ ಒಂದು ಬಗೆಯ ಶಂಕೆ. ಶಾಲೆಗೆ ಎಂದಿನಂತೆ ಬರಲು ಏನೋ ಅಂಜಿಕೆ. ಏನೋ ಹೀನಾಯ. ಎಷ್ಟೋ ದಿನ ಶಾಲೆಗೆ ಜೊತೆಯಲ್ಲಿ ಹೋಗಲೆಂದು ತನ್ನ ಮನೆಗೆ ಬಂದ ಸುಮಿತ್ರೆಯನ್ನು ತನಗೆ ತಲೆನೋವೆಂದು ಹೇಳಿ ಅವಳೊಬ್ಬಳನ್ನೇ

ಶಾಲೆಗೆ ಕಳುಹಿಸಿಬಿಡುತ್ತಿದ್ದಳು. ಇಷ್ಟು ಮಾತ್ರವೇ ಅಲ್ಲ. ಸುಮಿತ್ರೆಯ ಜೊತೆಯಲ್ಲಿ ಮೊದಲು ಎಷ್ಟು ಸಲಿಗೆಯಿಂದ ಇದ್ದಳೋ ಈಗ ಅಷ್ಟೊಅಷ್ಟು ದೂರವಿರಲು ಪ್ರಯತ್ನಿಸುತ್ತಿದ್ದಳು.

ಇದರ ರಹಸ್ಯವೇನೆಂದು ಸುಮಿತ್ರೆಗೆ ಮೊದಲು ತಿಳಿಯದಾಯಿತು. ಅವಳು ಶೈಲಜೆಯನ್ನು ಪೀಡಿಸಿ ಹಾಗೇಕೆ ವರ್ತಿಸುವಳೆಂದು ತಿಳಿಯಲೆತ್ನಿಸಿ ವಿಫಲಳಾದಳು. ಅವಳ ಒಂದೊಂದು ಕೆಲಸದಲ್ಲಿ ಕಣ್ಣಿಟ್ಟು ನೋಡಿದರೂ ಯಾವುದೂ ಹೊರಪಡಲಿಲ್ಲ. ಬರಬರುತ್ತ ಸುಮಿತ್ರೆಗೆಲ್ಲಿ ತನ್ನ ಗುಟ್ಟು ರಟ್ಟಾಗುವುದೋ ಎಂದು ಹೆದರಿ ಶೈಲಜೆ ಅವಳ ಕಣ್ಣು ತಪ್ಪಿಸಿ ಇರಲೆತ್ನಿಸಿದಳು. ಶಾಲೆಗೆ ವಾರಗಟ್ಟಲೆ ರಜಕ್ಕೆ ಬರೆದಳು. ಶೈಲಜೆಯ ವಿಚಿತ್ರ ವರ್ತನೆ ಶಾರದೆಯ ಗಮನಕ್ಕೂ ಬರದೆ ಇರಲಿಲ್ಲ. ಅವಳೂ ಆಬಗ್ಗೆ ಕುತೂಹಲಗೊಂಡಿದ್ದಳು. ಆದರೆ ವಾಸ್ತವವಾಗಿ ನಡೆದಿದ್ದ ಸಂಗತಿ ಅವರಿಬ್ಬರಿಗೂ ತಿಳಿದಿರಲಿಲ್ಲ.

ಶೈಲಜೆ ನೋಡಲು ಚೆನ್ನಾಗಿಯೇ ಇದ್ದಳು. ಅವಳ ಪ್ರಾಯ ಅಂತಹದು. ಮಾಟವಾದ ಮೈಕಟ್ಟು, ವಯಸ್ಸಿಗೆ ಮೀರಿದ ಬೆಳವಣಿಗೆಯಿಂದ ಅವಳು ಯುವತಿಯಂತೆ ಇದ್ದಳು. ಲಕ್ಷಣವಾದ ಮುಖಚರ್ಯೆ. ಒಂದು ಮಾತಿನಲ್ಲಿ ಹೇಳಬಹುದಾದರೆ ಅವಳು ಚೆಲುವೆ. ಅವಳು ಸಿಂಗಾರ ಮಾಡಿಕೊಳ್ಳುವುದರಲ್ಲಿ ನಿಸ್ಸೀಮಳು. ಮೊದಲೇ ರೂಪವತಿಯಾದ ಅವಳು ದಿವ್ಯ ವಸ್ತ್ರಾಭರಣಗಳಿಂದ ಇನ್ನಷ್ಟು ಸುಂದರಿಯಾಗಿ ಕಾಣುತ್ತಿದ್ದಳು. ಶಾಲೆಯ ಹುಡುಗರು ಅವಳಿಗೆ 'ಮೋಹಿನಿ' ಎಂದು ಹೆಸರಿಟ್ಟಿದ್ದರು. ಅವಳನ್ನು ಕಂಡು ಬೆರಗಾಗದವರು ಅವಳ ಶಾಲೆಯಲ್ಲಿ ಒಬ್ಬರಿಲ್ಲ. ಅನೇಕ ವೇಳೆ ಅವಳ ಉಪಾಧ್ಯಾಯರು ಅವಳನ್ನು ಮಂತ್ರಮುಗ್ಧರಾಗಿ ನೋಡುತ್ತಾ ನಿಂತದ್ದುಂಟು. ಅಂತಹವರ ಪೈಕಿ ಜಯಂತ ಒಬ್ಬ. ಅವನು ಶೈಲಜೆಯ ರೂಪರಾಶಿಗೆ ಮಾರುಹೋಗಿದ್ದ. ಅವನು ಇನ್ನೂ ಯುವಕ. ಅವಿವಾಹಿತ. ಅವನು ಶೈಲಜೆಯಲ್ಲಿ ಆಸಕ್ತಿ ವಹಿಸಿದುದನ್ನು ಕಂಡು ಅವನ ಸಹೋದ್ಯೋಗಿಗಳು ಕುಚೇಷ್ಟೆ ಮಾಡುತ್ತಿದ್ದರು. 'ಬೇಗ ಮದುವೆಯಾಗು' ಎಂದು ಉಪದೇಶಿಸತೊಡಗಿದ್ದರು. ಜಯಂತ ಸುಮ್ಮನೆ ನಕ್ಕುಬಿಡುತ್ತಿದ್ದ.

ಜಯಂತ–ಶೈಲಜೆಯನ್ನು ಹತ್ತಿರ ತರುವಂತಹ ಒಂದು ಘಟನೆ ನಡೆಯಿತು. ಶೈಲಜೆ ತನ್ನ ಶೃಂಗಾರಕ್ಕೆ ತೆಗೆದುಕೊಳ್ಳುತ್ತಿದ್ದಷ್ಟು ಶ್ರಮ ಓದಿನಕಡೆ

ತೆಗೆದುಕೊಳ್ಳದೆ ಇರುತ್ತಿದ್ದುದರಿಂದ ಅವಳು ಪರೀಕ್ಷೆಯಲ್ಲಿ ಯಾವಾಗಲೂ ನಪಾಸು. ಉಪಾಧ್ಯಾಯರು ಶಾಂತಮಲ್ಲಯ್ಯನವರ ಮುಖ ನೋಡಿಕೊಂಡು ಇಲ್ಲಿಯ ತನಕ ಮುಂದಕ್ಕೆ ತಳ್ಳುತ್ತಾ ಬಂದಿದ್ದರು. ಈಗ ಶೈಲಜೆ ಮೆಟ್ರಿಕ್ ತರಗತಿಗೆ ಬಂದಿದ್ದುದರಿಂದ ಶಾಂತಮಲ್ಲಯ್ಯನವರು ಶೈಲಜೆಗೆ ಮನೆಯಲ್ಲಿ ಪಾಠ ಹೇಳಿಸಿಕೊಳ್ಳಲು ಹೇಳಿದರು. ಶೈಲಜೆ ಹೈಸ್ಕೂಲಿನಲ್ಲೆಲ್ಲಾ ಚೆನ್ನಾಗಿ ಪಾಠ ಹೇಳುತ್ತಾನೆಂದು ಹೆಸರು ಗಳಿಸಿದ್ದ ಜಯಂತನನ್ನು ಮನೆಯ ಉಪಾಧ್ಯಾಯನನ್ನಾಗಿ ಆರಿಸಿದಳು.

ಈಗ ಅವರಿಬ್ಬರಿಗೆ ನಿಕಟ ಪರಿಚಯವಾಗಿ ತುಂಬಾ ಸಲಿಗೆ ಬೆಳೆಯಿತು. ಜಯಂತನಿಗೆ, ಶೈಲಜೆಗೆ ಪಾಠ ಹೇಳಿಕೊಡುವುದೆಂದರೆ ಹಿಗ್ಗು. ಅವನಿಗೆ ಅದೊಂದು ರಸನಿಮಿಷ. ತಾಸುಗಟ್ಟಲೆ ಪಾಠ ಹೇಳುತ್ತಾ ಕುಳಿತರೂ ಅವನಿಗೆ ತೃಪ್ತಿಯಿಲ್ಲ. ನೆಪಮಾತ್ರಕ್ಕೆ ಪಾಠ. ವಾಸ್ತವಿಕವಾಗಿ ನಡೆಯುತ್ತಿದ್ದುದು ಹರಟೆ, ವಿನೋದ. ಒಮ್ಮೆ ಗುರುಶಿಷ್ಯರು ಮಾತಿಗೆ ಕುಳಿತರೆಂದರೆ ಅದಕ್ಕೆ ಕೊನೆ ಮೊದಲೇ ಇಲ್ಲ. ಶಾಂತಮಲ್ಲಯ್ಯನವರೋ ಅಥವಾ ಅವರ ಪತ್ನಿಯೋ ಆ ಕಡೆ ಬಂದಾಗ ಅವರ ಕಾಡುಹರಟೆ ನಿಲ್ಲುವುದು. ಅವರು ಅಲ್ಲಿಂದ ಮಾಯವಾದರೆ ಮತ್ತೆ ಮಾತಿಗೆ ಆರಂಭ. ಆದರೂ ಜಯಂತ ಪಾಠ ಆರಂಭಿಸಿದ ಮೊದಲ ದಿನಗಳಲ್ಲಿ ತನ್ನ ವರ್ತನೆಯ ಬಗ್ಗೆ ತುಂಬಾ ಎಚ್ಚರ ತೆಗೆದುಕೊಂಡಿದ್ದ. ಭಾವೋನ್ಮಾದದಲ್ಲಿ ಮಾತಿನಲ್ಲಾಗಲೀ ಕೃತಿಯಲ್ಲಾಗಲೀ ದುಡುಕಿ ಹಿರಿಯರ ಅಪನಂಬಿಕೆ, ಅವಿಶ್ವಾಸಕ್ಕೆ ಪಾತ್ರನಾಗದಂತೆ ನೋಡಿಕೊಳ್ಳುತ್ತಿದ್ದ. ಅವನ ಸಂಕೋಚ ವರ್ತನೆಯನ್ನು ಕಂಡು ಶಾಂತಮಲ್ಲಯ್ಯನವರಿಗೆ ಜಯಂತನ ಬಗ್ಗೆ ಬಗ್ಗೆ ಒಳ್ಳೆಯ ಅಭಿಪ್ರಾಯವುಂಟಾಯಿತು.

ದಿನ ಕಳೆದಂತೆ ಜಯಂತನ ಸಂಯಮ ಮೊದಲಿನಂತೆ ಉಳಿಯಲಿಲ್ಲ. ಮೊದಲೇ ಇಬ್ಬರೂ ಜವ್ವನಿಗರು. ಪರಸ್ಪರ ಅಭಿಮಾನಿಗಳು. ಅವರ ಏಕಾಂತ ಸಲಿಗೆ ಹೆಚ್ಚಿದಂತೆ ಇಬ್ಬರೂ ಪತನದ ದಾರಿ ತುಳಿಯಹತ್ತಿದರು. ಇಷ್ಟಾದರೂ ಜಯಂತನಾಗಲೀ, ಶೈಲಜೆಯಾಗಲೀ ಒಬ್ಬರಮುಂದೆ ಒಬ್ಬರು ತಮ್ಮ ಮನಸ್ಸಿನ ಭಾವನೆಗಳನ್ನು ತೋಡಿಕೊಳ್ಳಲಿಲ್ಲ. ಹಾಗೆ ಮಾಡಿದರೆ ಹೇಗೋ ಏನೋ. ಜಯಂತ ಎಷ್ಟೋ ದಿನ ವಿರಹಿಯಂತೆ ಶೈಲಜೆಗಾಗಿ ಪರಿತಪಿಸುತ್ತಾ ಹಾಸಿಗೆಯಲ್ಲಿ ನಿದ್ರೆಯಿಲ್ಲದೆ ಹೊರಳುತ್ತಿದ್ದ. ತಾನು ಶೈಲಜೆಯ ಹತ್ತಿರವಿದ್ದೂ ಎಷ್ಟು

ದೂರ ಇರುವೆನೆಂದು ಕೊರಗುತ್ತಿದ್ದ. ಶೈಲಜೆಯ ಬಗ್ಗೆ ತನ್ನ ನಿಜವಾದ ಭಾವನೆಗಳೇನು? ಬಹುಶಃ ಪ್ರೇಮವೇ ಇರಬೇಕು. ಹಾಗಾದರೆ ಅದನ್ನು ಶೈಲಜೆಯ ಮುಂದೆ ಪ್ರಕಟಿಸಿ, ಅವಳ ಒಪ್ಪಿಗೆ ಪಡೆಯಬಾರದೇಕೆ? ಅದು ಸರಿ. ಆದರೆ........ಆದರೆ ಶೈಲಜೆ ವೀರಶೈವಳು. ತಾನು ಬ್ರಾಹ್ಮಣ. ತಮ್ಮಿಬ್ಬರ ಪ್ರೇಮಕ್ಕೆ ಸಮಾಜ ಅಡ್ಡಿ ಬರುವುದು ಖಂಡಿತ. ಸಮಾಜವನ್ನು ಧಿಃಕರಿಸಿ, ಶೈಲಜೆಯನ್ನು ವಿವಾಹವಾಗುವ ಧೈರ್ಯ ತನಗಿದೆಯೇ? ಅದೇ ಸಂದೇಹ! ತಾನು ಜಾತಿಭ್ರಷ್ಟನಾಗಬಾರದು. ಶೈಲಜೆ ತನ್ನವಳಾಗಬೇಕು! ಎರಡು ಧೃವಗಳ ಅಂತರವಿರುವ ಈ ವಿಷಯ ಸೇರುವ ಬಗೆ ಎಂತು?

ಒಂದು ದಿನ ಜಯಂತ ಪಠ್ಯ ಪುಸ್ತಕದಲ್ಲಿದ್ದ 'ರೋಮಿಯೋ ಜೂಲಿಯೆಟ್' ನಾಟಕದ ಭಾಗವನ್ನು ಬೋಧಿಸುತ್ತಿದ್ದಾಗ, ಹಠಾತ್ತಾಗಿ ಸ್ಫೂರ್ತಿ ಹೊಂದಿ ಪ್ರೇಮದ ಅಮರತ್ವದ ಬಗ್ಗೆ ಒಂದು ದೊಡ್ಡ ಭಾಷಣವನ್ನೇ ಮಾಡಿಬಿಟ್ಟ. ಅವನ ಅಂತರಂಗದ ಭಾವನೆಗಳನ್ನೆಲ್ಲ ಹೊರಗೆಡವಲು ಯೋಗ್ಯಸಮಯ ಸಿಕ್ಕಿತ್ತು. ಶೈಲಜೆ ಎವೆಯಿಕ್ಕದೆ ಜಯಂತನ ಮುಖಮುದ್ರೆಯನ್ನು ನೋಡುತ್ತ ಅವಾಕ್ಕಾಗಿ ಕುಳಿತಿದ್ದಳು. ಜಯಂತ ತನ್ನ ಮಾತನ್ನು ಪರಿಸಮಾಪ್ತಿಗೊಳಿಸುತ್ತಾ ಹೇಳಿದ "ಪ್ರೇಮಕ್ಕೆ ಕಣ್ಣಿಲ್ಲ ಶೈಲಜ. ಅದು ದೇಶ, ಕಾಲ, ಜಾತಿ, ಮತ, ಅಂತಸ್ತುಗಳನ್ನೊಂದೂ ನೋಡದು." ಈ ಮಾತು ಶೈಲಜೆಯ ಮೇಲೆ ತುಂಬಾ ಪರಿಣಾಮ ಉಂಟು ಮಾಡಿತು. ಜಯಂತ ಮಾತು ಮುಗಿಸಿ ಸುಮ್ಮನೆ ಕುಳಿತಾಗ ಶೈಲಜೆ ತನ್ನಲ್ಲೇ ನಸುನಕ್ಕಳು. ಅವಳ ತುಂಟ ನಗೆಯನ್ನು ಕಂಡು ಜಯಂತ ನಗುವಿನ ಕಾರಣ ಪ್ರಶ್ನಿಸಿದ.

"ಇದು ಕೇವಲ ಪುಸ್ತಕಗಳ ಮಾತು. ಜೀವನದಲ್ಲಿ ಸುಳ್ಳು" ಎಂದಳು ಶಿಷ್ಯೆ.

"ಹಾಗಾದರೆ ಜೂಲಿಯೆಟ್ಟಳ ಕಥೆ?"

"ಅದೊಂದು ಕಟ್ಟುಕಥೆಯಾಕಾಗಿರಬಾರದು!"

"ಹೋಗಲಿ. ಅದು ಬೇಡ. ನಮ್ಮ ಸಮಾಜದಲ್ಲಿ ನಡೆಯುವ ಘಟನೆಗಳನ್ನು ತೆಗೆದುಕೊಳ್ಳೋಣ. ಮಾತಿಗೆ--ನಮ್ಮಿಬ್ಬರ ವಿಷಯವೇ ಆಗಲಿ. ನಾವಿಬ್ಬರೂ ಬೇರೆ ಬೇರೆ ಜಾತಿ. ಆದರೂ ನಾವಿಬ್ಬರೂ ಪ್ರೀತಿಸುತ್ತೇವೆ. ಒಬ್ಬರಿಗಾಗಿ ಒಬ್ಬ ಪ್ರಾಣ ಬಿಡಲೂ ಸಿದ್ಧರಾಗಿದ್ದೇವೆ ಎಂದೇ ತಿಳಿಯೋಣ"

ಈ ಮಾತು ಕೇಳಿ ಶೈಲಜೆಯ ಎಣ್ಣೆಗೆಂಪಿನ ಮುಖ ಗುಲಾಬಿಯಾಯಿತು. ಅವಳು ಜಯಂತನನ್ನು ತೀಕ್ಷ್ಣವಾಗಿ ನೋಡಿದಳು. ಜಯಂತನಿಗೆ ಶೈಲಜೆಯ ದೃಷ್ಟಿಯನ್ನು ಇದುರಿಸಲು ಧೈರ್ಯವಿಲ್ಲದೆ ತಲೆ ತಗ್ಗಿಸಿ ಹೇಳತೊಡಗಿದ— "ಅಲ್ಲಾ ಮಾತಿಗೆ ಹೇಳುತ್ತೇನೆ. ನಾವು ಪರಸ್ಪರ ಪ್ರೀತಿಸುವುದನ್ನು ತಿಳಿದಿದ್ದರೂ ನಿಮ್ಮ ತಂದೆ ನಮ್ಮಿಬ್ಬರ ವಿವಾಹಕ್ಕೆ ಅನುಮತಿ ಕೊಡುವುದಿಲ್ಲ. ಅಂತಹ ಹೊತ್ತಿನಲ್ಲಿ ನೀನೇನು ಮಾಡುತ್ತೀಯೆ?"

"ಪ್ರಾಣ ಕಳೆದುಕೊಳ್ಳುತ್ತೇನೆ!" ಎಂದಳು ಶೈಲಜೆ ತಟಕ್ಕನೆ. ಇದು ಅವಳ ಹೃದಯದಿಂದ ಬಂದ ಪಳಮಾತು. ಅದನ್ನು ತನಗೆ ತಿಳಿಯದಂತೆಯೇ ಹೇಳಿದ್ದಳು. ಅವಳೂ ಜಯಂತನಲ್ಲಿ ಮೋಹಗೊಂಡಿದ್ದಳು. ಆದರೆ ಸ್ತ್ರೀ-ಸಹಜ ನಾಚಿಕೆಯಿಂದ ಅದನ್ನು ಬಾಯಿಯಲ್ಲಿ ತಿಳಿಸಿರಲಿಲ್ಲ. ಆದರೇನು? ಅವಳು ಮಾಡಿಕೊಳ್ಳುತ್ತಿದ್ದ ಸಿಂಗಾರ ಜಯಂತನಿಗಾಗಿಯೇ! ಅವಳು ಕೊಡುತ್ತಿದ್ದ ಹಣ್ಣು ಹಂಪಲು, ತಿಂಡಿ ತೀರ್ಥಗಳು ಅವಳ ಅನುರಾಗದ ಪ್ರತಿಕ್ರಿಯೆ. ಅಷ್ಟೇ.

"ಶೈಲಜಾ, ನನ್ನನ್ನು ನೀನು ನಿಜವಾಗಿಯೂ ಪ್ರೀತಿಸುವೆಯಾ?"

"ನೀವು"

"ನಾನು ನಿನಗಾಗಿ ಎಂದೋ ಹುಚ್ಚನಾಗಿದ್ದೇನೆ"

"ನಾನೂ ನಿಮಗಾಗಿ........" ಮುಂದೆ ಮಾತು ಹೊರಡಲಿಲ್ಲ.

"ಹಾಗಾದರೆ, ಇಷ್ಟು ದಿನ ನನ್ನನ್ನೇಕೆ ಸೊರಗಿಸಿದೆ?"

"ನಮ್ಮಿಬ್ಬರ ಜಾತಿಭೇದ"

"ಆದರೇನು? ಪ್ರೇಮಕ್ಕೆ........" ಎಂದು ಮಾತು ಮುಗಿಸುವ ಮುನ್ನ "ಕಣ್ಣಿಲ್ಲ" ಎಂದು ದನಿಗೂಡಿಸಿದಳು ಶೈಲಜೆ.

ಜಯಂತ ಮಾತನಾಡದೆಯೇ ಶೈಲಜೆಯ ಕೈಯನ್ನು ತೆಗೆದುಕೊಂಡು ಮುತ್ತಿಟ್ಟ. ಶೈಲಜೆ ಪ್ರತಿಭಟಿಸಲಿಲ್ಲ. ಅವಳ ರೀತಿ, ನೋಟ ಜಯಂತನನ್ನು ಉತ್ತೇಜನಗೊಳಿಸಿತು. ಅವನು ಶೈಲಜೆಯನ್ನು ಬರಸೆಳೆದು ಅಪ್ಪಿದ........

ತರುಣ ಪ್ರಣಯಿಗಳು ಪ್ರಣಯೋನ್ಮತ್ತರಾದರು. ಅವರಲ್ಲಿ ವಿವೇಕ ಮರೆಯಾಯಿತು. ಕೊಠಡಿಯ ಗಂಭೀರ ವಾತಾವರಣ, ಅವರ ಏಕಾಂತ, ಅವರಲ್ಲಿ ವಿಲಕ್ಷಣ ಆಸೆ, ಬಯಕೆಗಳನ್ನು ಕೆರಳಿಸಿದವು. ಇಬ್ಬರೂ ಹಿಂದೆ

ಮುಂದೆ ನೋಡದೆ ಒಬ್ಬರನ್ನೊಬ್ಬರು ಒಪ್ಪಿಸಿಕೊಂಡರು. ಆ ಕ್ಷಣದಲ್ಲಿ ಅವರಿಬ್ಬರ ವೈಕಾವು ಅವರ ಹೃದಯಗಳನ್ನೂ ಒಂದಾಗಿ ಬೆಸೆಯಿತು.

ಈ ಘಟನೆ ನಡೆದ ಮೂರು ನಾಲ್ಕು ತಿಂಗಳಲ್ಲಿ ಅವರಿಬ್ಬರಲ್ಲಿ ಮಹತ್ಪೂರಿತ ಬದಲಾವಣೆಗಳು ಸಂಭವಿಸಿದವು. ಜಯಂತನಿಗೆ ಶೈಲಜೆಯಲ್ಲಿ ಇದ್ದ ಅನುರಾಗ ಇದ್ದಕ್ಕಿದ್ದಂತೆ ಕಡಿಮೆಯಾಗಿ ಅದರ ಬದಲು ಒಂದು ಬಗೆಯ ಭೀತಿಯುಂಟಾಗಿತ್ತು. ಅವನು ಶಾಂತಮಲ್ಲಯ್ಯನವರಿಗೆ ಅದೂ ಇದೂ ಸಬೂಬು ಹೇಳಿ, ಮನೆಯ ಪಾಠದಿಂದ ಬಿಡುಗಡೆ ಮಾಡಿಸಿಕೊಂಡ. ಅವನಿಗೆ ಶೈಲಜೆಯೊಂದಿಗೆ ಮುಖ ಕೊಟ್ಟು ಮಾತನಾಡಲು ಒಂದು-ಬಗೆಯ ಅಳುಕು. ಆದಷ್ಟು ಅವಳಿಂದ ದೂರವಿರಲು ಪ್ರಯತ್ನಿಸುತ್ತಿದ್ದ. ಆದರೆ ಶೈಲಜೆಯ ಸ್ಥಿತಿ ಇದಕ್ಕೆ ತದ್ವಿರುದ್ಧ. ಜಯಂತ ಅವಳನ್ನು ಮರೆಯಲೆತ್ನಿಸುತ್ತಿದ್ದರೂ ಶೈಲಜೆಗೆ ಜಯಂತನನ್ನು ಮರೆಯಲು ಸಾಧ್ಯವಾಗಲಿಲ್ಲ. ಹೇಗೆ ಸಾಧ್ಯವಾದೀತು ? ತನ್ನ ಶರೀರದ ಒಂದು ಭಾಗದಲ್ಲಿ ಜಯಂತನ ವರಪ್ರಸಾದವನ್ನು ಹೊತ್ತುಕೊಂಡಿರುವಾಗ ! ಗಂಡಸು ತನ್ನ ವೈತೀಟೆಯನ್ನು ತೀರಿಸಿಕೊಂಡು ನಿರಾತಂಕನಾಗಿರಬಹುದು. ಆದರೆ ಹೆಣ್ಣು ? ಅವಳಿಗೆ ಪ್ರಕೃತಿಯ ಶಾಪವಿದೆ. ಮತ್ತೊಬ್ಬರ ಭೋಗದ ಫಲ ಅವಳು ಹೊರಬೇಕೆಂದು. ಅವಳು ಒಮ್ಮೆ ಜಾರಿದಳೆಂದರೆ ಅವಳ ಕಥೆ ತೀರಿತು!

ಶೈಲಜೆ ದಿನ ಕಳೆದಂತೆ ತುಂಬಾ ಮಂಕಾಗಿ ಬಿಟ್ಟಳು. ಅವಳಿಗೆ ಊಟ ತಿಂಡಿಯಲ್ಲಿ ಆಸಕ್ತಿ ಕಡಿಮೆಯಾಯಿತು. ಶೃಂಗಾರದಲ್ಲಾಗಲೀ, ಓದಿನ ಕಡೆಗಾಗಲೀ ಮನಸ್ಸು ಇಲ್ಲವಾಯಿತು. ಸದಾ ಏನನ್ನೋ ಕುರಿತು ಚಿಂತಿಸಿ ಹಲುಬುವಳು. ಯಾರೂ ಇಲ್ಲದ ವೇಳೆಯಲ್ಲಿ ಅತ್ತುದೂ ಉಂಟು. ಆದರೆ ಎಲ್ಲರ ಇದುರಿನಲ್ಲಿ ತನ್ನ ಪರಿಸ್ಥಿತಿ ಬಯಲು ಮಾಡಲು ಅವಳಿಗೆ ಸಂಕೋಚ. ಅದಕ್ಕೂ ಹೆಚ್ಚಿನ ಹೆದರಿಕೆ, ತಾನು ಊರಿಗೆಲ್ಲಾ ಗಣ್ಯವರ್ತಕರಾದ ಶಾಂತಮಲ್ಲಯ್ಯನವರ ಏಕ ಮಾತ್ರ ಪುತ್ರಿಯಾಗಿದ್ದುಕೊಂಡು ಅವರ ಸತ್ಕೀರ್ತಿಗೆ ಕಳಂಕ ತರುವ ಎಂತಹ ಕೆಲಸ ಮಾಡಿದೆ ಎಂದು! ಇನ್ನು ಕೆಲವು ದಿನ ಕಳೆದರೆ ತನ್ನ ಗುಟ್ಟನ್ನು ಇದುವರೆಗೆ ಮುಚ್ಚಿಟ್ಟಂತೆ ಮುಚ್ಚಿಡಲು ಸಾಧ್ಯವಿಲ್ಲ. ಆಗ ಈ ಸುದ್ದಿಯನ್ನು ಕೇಳಿ ತಂದೆ ತಾಯಿಗಳ ಎದೆಯೊಡೆದರೆ..........? ಇಷ್ಟೆಲ್ಲಾ ಅನಾಹುತವಾಗುವ ಮೊದಲೇ ಎಲ್ಲವನ್ನೂ ಸರಿಪಡಿಸಬೇಕು. ಹೇಗಾದರೂ

ಮಾಡಿ ಜಯಂತ ತನ್ನನ್ನು ಮದುವೆಯಾಗುವಂತೆ ಮಾಡಬೇಕು. ಹೇಗೂ ಅವನು ಮದುವೆಯಾಗುವುದಾಗಿ ಭಾಷೆಯಿತ್ತಿದ್ದಾನೆ ಎಂದುಕೊಂಡು ಜಯಂತ ನನ್ನು ಮಾತನಾಡಿಸಲು ಹೊಂಚಿದಳು. ಜಯಂತ ಬೇಕೆಂತಲೇ ಕಳ್ಳ ತಪ್ಪಿಸಿ ಕೊಂಡು ತಿರುಗುತ್ತಿದ್ದ. ಅವನು ಸದಾ ಯಾರೊಂದಿಗಾದರೂ ಇರುತ್ತಿದ್ದ. ಶಾಲೆಯಲ್ಲಿ ಇದ್ದಾಗ ಅವನು ಉಪಾಧ್ಯಾಯರ ಕೋಣೆ ಬಿಟ್ಟು ಬರುತ್ತಲೇ ಇರ ಲಿಲ್ಲ. ತರಗತಿ ಮುಗಿದೊಡನೆಯೇ ನಾಗಾಲೋಟದಲ್ಲಿ ಮನೆ ಸೇರಿಬಿಡುತ್ತಿದ್ದ. ಅವನ ರೀತಿಯನ್ನು ಕಂಡು ಶೈಲಜೆಗೆ ಹೆದರಿಕೆಯಾಯಿತು. ಅವನು ತನ್ನನ್ನು ಮದುವೆಯಾಗದೆ ಹೋದರೆ ಗತಿ ?

ಈ ಮಧ್ಯೆ ಶಾಂತಮಲ್ಲಯ್ಯನವರು ಮಗಳಿಗಾಗಿ ಒಂದು ಗಂಡು ಗೊತ್ತು ಮಾಡಿದ್ದರು. ಅವನಿಗೆ ಮಂಗಳೂರಿನಲ್ಲಿ ಕೆಲಸ. ಅವನ ತಂದೆ ಮಂಗಳೂ ರಿನ ಹೆಂಚಿನ ಕಾರ್ಖಾನೆಯ ಮಾಲೀಕ. ಹುಡುಗ ಲಕ್ಷಣವಾಗಿದ್ದು ತಕ್ಕ ಮಟ್ಟಿಗೆ ಓದಿಯೂ ಇದ್ದ. ಇದು ಒಳ್ಳೆಯ ನೆಂಟಸ್ತನವೆಂದು ಎಲ್ಲರ ಅಭಿ ಮತವಾಗಿತ್ತು. ಹಿರಿಯರು ಹಿರಿಯರಲ್ಲಿ ಮಾತುಕತೆಗಳು ನಡೆದ ಮೇಲೆ ಹುಡುಗ ಹುಡುಗಿಯನ್ನು ನೋಡಲು ಒಂದು ದಿನ ಬರುವುದಾಗಿ ತಿಳಿಸಿದ. ಶೈಲಜೆ ತನಗೆ ಸದ್ಯಕ್ಕೆ ಮದುವೆ ಬೇಡವೆಂದು ಹಠ ಹಿಡಿದಳು. ಕಣ್ಣೀರು ಸುರಿಸಿದಳು. ಶಾಂತಮಲ್ಲಯ್ಯನವರು "ಹಾಗೆಯೇ ಆಗಲಿ. ನಿನ್ನ ಪರೀಕ್ಷೆಗಳು ಮುಗಿದು ರಜ ಬರುವ ತನಕ ಮದುವೆ ಮಾಡುವುದಿಲ್ಲ. ಆದರೆ ಈಗ ಹುಡುಗ ನಿನ್ನನ್ನು ನೋಡಲು ಬರುತ್ತಾನೆ. ಅವನು ಒಪ್ಪಿದರೆ ಅನಂತರ ಮದುವೆಯ ಮಾತು " ಎಂದು ಸಮಾಧಾನಪಡಿಸಿದರು.

ಹುಡುಗ ಶೈಲಜೆಯನ್ನು ನೋಡಿ ಮದುವೆಯಾಗಲು ಒಪ್ಪಿದ. ಮೊದಲೇ ಸುರಸುಂದರಿಗೆ ಸಾಟಿಯಾಗಿದ್ದ ಶೈಲಜೆಗೆ, ಗರ್ಭಿಣಿಯ ಕಾಂತಿಯು ಸೇರಿ ಹುಡುಗನ ಕಣ್ಣಿಗೆ ಅವಳು ಮನಮೋಹನಾಂಗಿಯಾಗಿ ಕಂಗೊಳಿಸಿದುದರಲ್ಲಿ ಆಶ್ಚರ್ಯವಿಲ್ಲ. ಹುಡುಗ ತನ್ನನ್ನು ಒಪ್ಪಿದುದು ಶೈಲಜೆಯನ್ನು ಮತ್ತಷ್ಟು ಇಕ್ಕಟ್ಟಿನಲ್ಲಿ ಸಿಕ್ಕಿಸಿತು. ಇರುವ ಸುದ್ದಿಯನ್ನು ತಂದೆಗೆ ಹೇಳಿದರೆ ಒಂದು ದುರಂತ—ಹೇಳದಿದ್ದರೆ ಮತ್ತೊಂದು ದುರಂತ. ಏನು ಮಾಡಬೇಕು ಶೈಲಜೆ ?

ಒಂದು ದಿನ ಶೈಲಜೆ ಸುಮಿತ್ರೆಯೊಡನೆ ಸಂಚಾರ ಹೊರಟಿದ್ದಾಗ ದೂರ ದಲ್ಲಿ ಜಯಂತ ಒಂಟಿಯಾಗಿ ಬರುತ್ತಿರುವುದು ಕಾಣಿಸಿತು. ಶೈಲಜೆ ಸುಮಿತ್ರೆ

ಯನ್ನು ಉಪಾಯವಾಗಿ ಹಿಂದಕ್ಕೆ ಕಳುಹಿಸಿಕೊಟ್ಟು ಜಯಂತನನ್ನು ಸಂಧಿಸಿದಳು.

"ಈಚೆಗೆ ಯಾಕೆ ನನ್ನನ್ನು ಕಾಣಲು ನೀವು ಕಳ್ಳ ಬೀಳುತ್ತಿದ್ದೀರಿ?"

"ನನಗೆ ವಿರಾಮವಿಲ್ಲ."

"ನನ್ನ ಮದುವೆಯ ವಿಷಯವೇನು ಮಾಡಿದಿರಿ?"

"ನಮ್ಮ ತಾಯಿಯವರೊಂದಿಗೆ ಈ ವಿಷಯ ಮಾತನಾಡಿದೆ. ಅವರು ನನ್ನನ್ನು ಬಾಯಿಗೆ ಬಂದಂತೆ ಬೈದು ಬಿಟ್ಟರೇ ಹೊರತು ಈ ಮದುವೆಗೆ ಒಪ್ಪಲಿಲ್ಲ"

"ಹಾಗಾದರೆ ನನ್ನ ಗತಿ ?" ಹೌಹಾರಿ ಕೇಳಿದಳು ಶೈಲಜೆ.

"ಈಗ ಅಂತಹ ಪ್ರಮಾದವೇನು ನಡೆದಿದೆ ?"

"ನಿಮಗೆ ಅಂತಹ ಪ್ರಮಾದವಲ್ಲ. ನನಗೆ ಪ್ರಾಣಸಂಕಟ."

"ನೀನು ವೃಥಾ ತೊಂದರೆ ಪಟ್ಟುಕೊಳ್ಳುತ್ತಿದ್ದೀ. ಕೊಂಚ ಸಮಾಧಾನದಿಂದ ಇರಬಾರದೇ ?"

"ಹಾಗಿರಲು ನಿಮಗೆ ಸಾಧ್ಯ! ನನಗೆ ಹೇಗೆ ಸಾಧ್ಯ? ಒಂದೊಂದು ಗಳಿಗೆಯೂ ಒಂದೊಂದು ಯುಗವಾಗಿದೆ. ನೀವು ಯಾವುದನ್ನು ನಿರ್ಧರಿಸಲು ಕಾಲ ವಿಳಂಬ ಮಾಡಿದಂತೆ ನಾನು ಮಾಡಲು ಸಾಧ್ಯವಿಲ್ಲ. ನನ್ನ ಕಷ್ಟ ನಿಮಗೇನು ಗೊತ್ತು. ಹೆಣ್ಣಿನ ಕಷ್ಟ ಹೆಣ್ಣಿಗೆ ಗೊತ್ತು."

"ಹಾಗಾದರೆ ನೀನು ನನ್ನನ್ನು ಏನು ಮಾಡಲು ಹೇಳುತ್ತಿ ?"

"ಇದುವರೆಗೂ ಹೇಳುತ್ತಾ ಬಂದಿದ್ದ ಆ ಮಾತನ್ನು ನಡೆಸಿಕೊಡಿ."

"ಯಾವ ಮಾತು ?"

ಈ ಮಾತು ಕೇಳಿ ಶೈಲಜೆಗೆ ಎಚ್ಚರ ತಪ್ಪುವಂತಾಯಿತು. "ನನ್ನನ್ನು ಮದುವೆಯಾಗುವುದಾಗಿ ಹೇಳಿದ್ದ ಮಾತು" ಎಂದು ಏದುತ್ತಾ ಹೇಳಿದಳು.

"ಶೈಲಜ, ನೀನು ನನ್ನನ್ನು ಮದುವೆಯಾಗುವ ದಾರಿ ಯನ್ನುಳಿದು ಬೇರೆ ದಾರಿಯೇ ಇಲ್ಲವೇ ?"

"ನನಗೆ ತಿಳಿಯದು. ಇದ್ದರೂ ಆ ದಾರಿ ನನಗೆ ಬೇಡ. ನಾನು ನಿಮ್ಮನ್ನು ಪ್ರಾಣಕ್ಕಿಂತಲೂ ಹೆಚ್ಚಿಗೆ ಪ್ರೀತಿಸುತ್ತೇನೆ. ನೀವು ಎಲ್ಲಿಗೆ ಬಾ ಅಂದರೆ ಅಲ್ಲಿಗೆ ಹೊರಟುಬರಲು ಸಿದ್ಧಳಿದ್ದೇನೆ. ನಿಮಗಾಗಿ ನಾನು ತಂದೆ

ತಾಯಿ, ಎಲ್ಲರನ್ನೂ ಬಿಟ್ಟು ಬರಬಲ್ಲೆ. ನಿಮಗೆ ನನ್ನನ್ನು ಮದುವೆಯಾಗಿ ಈ ಊರಿನಲ್ಲಿರುವುದು ಮರ್ಯಾದೆಗೆ ಕಡಿಮೆಯಾದರೆ, ನನ್ನ ಮೈಮೇಲೆ ಒಂದೆರಡು ಸಾವಿರ ರೂಪಾಯಿ ಬೆಲೆ ಬಾಳುವ ನಗಗಳಿವೆ. ನಾವು ಬೇರೆ ಊರಿಗೆ ಹೋಗಿ ನಮ್ಮ ಪಾಡಿಗೆ ನಾವು ನೆಮ್ಮದಿಯಾಗಿ ಇರೋಣ. ಕೆಲಸ ಸಿಕ್ಕುವ ತನಕ ನನ್ನ ನಗಗಳನ್ನು ಮಾರಿ ಹೊಟ್ಟೆ ಹೊರೆಯೋಣ. ಮೊದಲು ನನ್ನನ್ನು ಇಲ್ಲಿಂದ ಬೇರೆಲ್ಲಿಗಾದರೂ ಕರೆದುಕೊಂಡು ಹೋಗಿ............"

"ನಿಂತ ಹೆಜ್ಜೆಯಲ್ಲಿ ಈ ಕೆಲಸವೆಲ್ಲಿ ಸಾಧ್ಯ ? ನೀನು ಕೆಲವು ದಿನ ತಾಳಿಕೊಂಡಿದ್ದರೆ, ನಾನು ಯಾವುದನ್ನೂ ನಿರ್ಧರಿಸಿ ತಿಳಿಸುತ್ತೇನೆ."

"ಅದು ಸಾಧ್ಯವಿಲ್ಲ. ನನಗೆ ಈಗ ಬೇಕಾಗಿರುವುದು ಪ್ರಾಣವಲ್ಲ ! ಮಾನ !"

ಜಯಂತ ಮಾತಿಲ್ಲದಾದ.

"ಯಾಕೆ ಆಲೋಚನೆ ?"

"ನನ್ನನ್ನೇ ನಂಬಿ ಕುಳಿತಿರುವ ತಾಯಿ ತಮ್ಮಂದಿರನ್ನು ಬಿಟ್ಟು ದೇಶಾಂತರ ಹೋಗಲು ನನ್ನಗೆ ಮನಸ್ಸಿಲ್ಲ."

"ಹಾಗಾದರೆ ನಾವು ಇಲ್ಲೇ ಇರೋಣ. ನಾನು ಹೇಗಾದರೂ ಮಾಡಿ ನಮ್ಮ ತಂದೆಯವರನ್ನು ಒಪ್ಪಿಸುತ್ತೇನೆ. ನಾವು ಶಾಸ್ತ್ರೋಕ್ತವಾಗಿ ಮದುವೆಯಾಗಿ ಇಲ್ಲೇ ಇರೋಣ."

"ಅದಕ್ಕೆ ನಾನು ಸಿದ್ಧನಿಲ್ಲ."

"ಕಾರಣ ?"

"ನಾನು ಜಾತಿ ಬಿಡಬೇಕಾಗುತ್ತೆ !"

"ಇದಕ್ಕೆ ನೀವು ಸಿದ್ಧರಿಲ್ಲವೇ ?........... ನೀವು ಆ ದಿನ ಹೇಳಿದ ಮಾತು, ಇಟ್ಟ ಆಣೆ ಏನಾಯಿತು ? ಎಲ್ಲಿಗೆ ಹೋಯಿತು ?"

ಜಯಂತ ತಲೆ ತಗ್ಗಿಸಿಕೊಂಡಿದ್ದ.

"ನಾನು ಆ ದಿನ ನಿಮ್ಮ ಸವಿ ಮಾತಿಗೆ ಮರುಳಾಗಿ ನೀತಿ ಬಿಟ್ಟೆ. ನನ್ನ ಪಾಡನ್ನು ನೆನೆದು ನಿಮಗೆ ಕಿಂಚಿತ್ತೂ ಕರುಣೆ ಬರುವುದಿಲ್ಲವೇ ?"

"..................."

"ನಾನು ಯಾವನೋ ಶ್ರೀಮಂತನ ಧರ್ಮಪತ್ನಿಯಾಗಿ ಸುಖಪಡುವು ದನ್ನು ಬಿಟ್ಟು ನಿಮ್ಮ ಪ್ರೀತಿಯನ್ನೇ ಹಿರಿದಾಗಿ ಭಾವಿಸಿ ನಿಮಗೆ ಆತ್ಮಾರ್ಪಣೆ ಮಾಡಿದೆ. ನನ್ನನ್ನು ನೀವು ನಡುನೀರಿನಲ್ಲಿ ಕೈಬಿಡುವುದು ನ್ಯಾಯವೇ ?"

"ನಾನೆಲ್ಲಿ ಹಾಗೆ ಮಾಡಿದೆ. ? ನಿನ್ನನ್ನು ಒಂದು ದಡ ಮುಟ್ಟಿಸಲೆಂದೇ ನಾನು ಟೊಂಕಕಟ್ಟಿ ನಿಂತಿದ್ದೇನಲ್ಲ! ಶೈಲಜಾ, ನನ್ನ ಮಾತು ಕೇಳು. ಇದ ರಿಂದ ನಮ್ಮಿಬ್ಬರಿಗೂ ಒಳ್ಳೆಯದಾಗುತ್ತದೆ. ನಿನ್ನ ಮಾನವೂ ಉಳಿಯುತ್ತದೆ. ನೀನು ಶ್ರೀಮಂತನ ಪತ್ನಿಯೂ ಆಗಬಹುದು. ನಾನು ಜಾತಿಯನ್ನು–ತಾಯಿ ತಮ್ಮಂದಿರನ್ನು ತೊರೆಯಬೇಕಾಗುವುದಿಲ್ಲ" ಎಂದು ಹೇಳುತ್ತಾ ಮಾತನ್ನು ಹಠಾತ್ತನೆ ನಿಲ್ಲಿಸಿಬಿಟ್ಟ.

ಅವನು ಹೇಳುವ ಮಾತು ಇಂತಹದೇ ಎಂದು ಶೈಲಜೆಗೆ ಹೊಳೆಯಿತು. ಆದರೂ ಪ್ರಶ್ನಿಸಿದಳು. "ಏನದು?"

"ಈಗ ನಿನಗೆ ಎಷ್ಟು ತಿಂಗಳು ?"

"ಸುಮಾರು ಮೂರು."

"ಹಾಗಾದರೆ ಭಯವಿಲ್ಲ. ನನಗೊಬ್ಬ ವೈದ್ಯರ ಪರಿಚಯವಿದೆ. ಅವರ ಕಡೆಯಿಂದ ನಾನು ಔಷಧಿ ತಂದುಕೊಡುತ್ತೇನೆ. ಅದನ್ನು ಸೇವಿಸಿದರೆ ಗರ್ಭ ಪಾತವಾಗುತ್ತದೆ. ನಿನ್ನ ಪ್ರಾಣಕ್ಕೂ ಭಯವಿಲ್ಲ" ಎಂದ.

ಈ ಮಾತನ್ನು ಕೇಳಿ "ಶಿವಶಿವಾ!" ಎಂದು ಶೈಲಜೆ ಕಿವಿ ಮುಚ್ಚಿಕೊಂ ಡಳು.

"ಆ ಕೆಲಸ ನನ್ನಿಂದ ಖಂಡಿತ ಸಾಧ್ಯವಿಲ್ಲ."

"ಯಾಕೆ ?"

"ನನ್ನ ಕಂದನನ್ನು ನಾನು ಕೈಯಾರೆ ಕೊಲ್ಲಲಾರೆ. ಹೀಗೆ ಮಾಡಿದರೆ ಭ್ರೂಣಹತ್ಯಾ ದೋಷ ಬರುತ್ತದೆ."

"ನಿನ್ನ ಪ್ರಾಣ, ಮಾನ, ಬಚಾವಾಗುವುದು ಬೇಕಿದ್ದರೆ, ನೀನು ಆ ಕೆಲಸ ಮಾಡಲೇಬೇಕು."

"ಇದು ಸಾಧ್ಯವಿಲ್ಲವೆಂದು ಹೇಳಿದರೆ ?"

ಈ ಮಾತು ಕೇಳಿ ಜಯಂತ ಅದೇ ಗತ್ತಿನಲ್ಲಿ ಹೇಳಿದ—

"ನಿನ್ನನ್ನು ನಾನು ಮದುವೆಯಾಗಲು ಸಾಧ್ಯವಿಲ್ಲದೆಂದು ಹೇಳಿದರೆ ?"

"ದಮ್ಮಯ್ಯ—ಆ ಮಾತು ಹೇಳಬೇಡಿ—ನೀವು ಕೈಬಿಟ್ಟರೆ ನಾನು ಸಾಯುತ್ತೇನೆ. ಖಂಡಿತ."

"ಸಾಯುವ ಗುಂಡಿಗೆ ಇದ್ದರೆ ಭ್ರೂಣಹತ್ಯಾ ದೋಷಕ್ಕೆ ಏಕೆ ಹೆದರ ಬೇಕು ?"

"ಅದು ನಿಮ್ಮ ಸಂತಾನ! ಅದನ್ನು ಕೊಲ್ಲುವ ಹಕ್ಕಿಲ್ಲ ನನಗೆ."

"ನಾನು ಅದರ ಜನಕ. ನಾನು ಹೇಳುತ್ತೇನೆ."

"ಹಾಗೆ ಹೇಳಲು ನಿಮಗೆ ಅಧಿಕಾರವಿಲ್ಲ !" ಎಂದು ಗರ್ಜಿಸಿದಳು ಶೈಲಜೆ.

"ಹಾಗಾದರೆ ಒಳ್ಳೆಯದು. ನಿನ್ನ ಯಾವ ಸುದ್ದಿಯಲ್ಲಿ ತಲೆ ಹಾಕುವ ಅಧಿಕಾರ ನನಗಿಲ್ಲ ! ನಾನು ಬರುತ್ತೇನೆ " ಎಂದು ಅಲ್ಲಿಂದ ಹೋಗಲೆತ್ನಿಸಿದ. ಶೈಲಜೆ ಬಟ್ಟೆ ಕೊಳೆಯಾಗುವುದನ್ನು ಲೆಕ್ಕಿಸದೆ ಹೋಗಿ ಜಯಂತನ ಕಾಲು ಗಳನ್ನು ಹಿಡಿದುಕೊಂಡಳು. ಜಯಂತ ಅವಳನ್ನು ದೂರ ತಳ್ಳಿ ಹೋಗಲು ನೋಡಿದ.

"ಬೇಡಿ ! ನನ್ನನ್ನು ಕೈಬಿಡಬೇಡಿ !" ಎಂದು ಒಂದೇ ಸಮನೆ ಬೇಡಿ ಕೊಂಡಳು ಶೈಲಜೆ.

"ಹಾಗಿದ್ದಲ್ಲಿ ನನ್ನ ಮಾತನ್ನು ಕೇಳು. ನಾನು ನಿನ್ನನ್ನು ಮದುವೆಯಾ ಗುವುದು ಖಂಡಿತ ಸಾಧ್ಯವಿಲ್ಲ. ಕಾರಣ ತಿಳಿಸಿದ್ದೇನೆ. ನಿನ್ನ ಮಾನ, ಪ್ರಾಣ, ನಿನ್ನ ಸುಖ ನನಗೆ ಬೇಕಾಗಿರುವುದರಿಂದ ನಾನು ಈ ಮಾತು ಹೇಳುತ್ತಿದ್ದೇನೆ. ಗರ್ಭಪಾತ ಮಾಡಿಕೊಳ್ಳುವುದೊಂದೇ ನಿನಗಿರುವ ದಾರಿ ! ಕಾಲ ಮಿಂಚಿ ಹೋದರೆ ಅದೂ ಕೆಡಕೇ ಆದೀತು. ಆದುದರಿಂದ ನೀನು ನಾಳಿದ್ದು ಸಂಜೆ ಇದೇ ಹೊತ್ತಿನಲ್ಲಿ, ಇದೇ ಜಾಗದಲ್ಲಿ ಬಂದು ಕಾಣು. ಮದ್ದು ತಂದು ಕೊಡು ತ್ತೇನೆ !" ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟೇ ಬಿಟ್ಟ ಜಯಂತ.

ಶೈಲಜೆ ಎಳೆ ಮಕ್ಕಳಂತೆ ಮಣ್ಣಿನಲ್ಲಿ ಹೊರಳಿದಳು. ಅವಳ ಕಣ್ಣಿಗೆ ಕತ್ತಲೆ ಕವಿಯಿತು. ಇದುವರೆವಿಗೂ ಅವಳಿಗೊಂದು ದೂರದ ಆಶೆಯಿತ್ತು. ಅದೂ ಇಂದು ಹೆಸರಿಲ್ಲದಂತಾಯಿತು. ಅವಳು ಯಾವುದು ನಡೆಯಬಾರ ದೆಂದು ಆಶಿಸಿದ್ದಳೋ ಅದು ನಡದೇ ಹೋಯಿತು. ಕಡೆಗೂ ಜಯಂತ ತನ್ನನ್ನು ನಂಬಿಸಿ ಕೊರಳನ್ನು ಕೊಯ್ದ. ಅವನ ಬೆಣ್ಣೆ ಮಾತುಗಳಿಗೆ ಬೆರಗಾಗಿ

ತಾನೆಂತಹ ಪಾಪಿಯಾದೆ! ಅಯ್ಯೋ ಹಾಳು ಜನ್ಮ, ಈ ಹೆಣ್ಣಿನ ಜನ್ಮ! ಎಂದುಕೊಂಡು ತನ್ನ ದುಃಖಕ್ಕೆಲ್ಲಾ ಕಾರಣವಾಗಿದ್ದ ಉಬ್ಬಿ ಬೆಳೆದಿದ್ದ ಹೊಟ್ಟೆಯನ್ನು ಕಿವಿಚಿದಳು! ಒಳಗಿದ್ದ ಮಗು ಕಿಟಾರನೆ ಚೀರಿತೋ ಎಂಬಂತೆ "ಶೈಲಜಾ" ಎಂದು ಯಾರೋ ಕಿರುಚಿದರು. ಶೈಲಜೆ ಎಚ್ಚೆತ್ತು ನೋಡಿದಳು. ಎದುರಿಗೆ ನಡುಗುತ್ತಾ ನಿಂತ ಸುಮಿತ್ರೆ! ಸುಮಿತ್ರೆಯನ್ನು ಶೈಲಜೆ ಉಪಾಯವಾಗಿ ಹಿಂದಿರುಗಿಸಿದ್ದರೂ, ಸುಮಿತ್ರೆ—ಶೈಲಜೆ—ಜಯಂತನ ಸಂಬಂಧವನ್ನು ಕೊಂಚ ತಿಳಿದಿದ್ದುದರಿಂದ, ಅವಳು ಅಲ್ಲೇ ಮರೆಯಾಗಿ ನಿಂತು ಅವರ ಸಂಭಾಷಣೆಯನ್ನು ಆಲಿಸಿದ್ದಳು. ಶೈಲಜೆ ಹೊಟ್ಟೆಯನ್ನು ಕಿವುಚಿಕೊಳ್ಳಲು ಪ್ರಯತ್ನಿಸಿದಾಗ ಗಾಬರಿಗೊಂಡು ಹಾಗೆ ಕಿರುಚಿದಳು ಸುಮಿತ್ರೆ!

ಸುಮಿತ್ರೆಯನ್ನು ಕಂಡು, ತಾನು ಇದುವರೆವಿಗೂ ಗೋಪ್ಯವಾಗಿರಿಸಿದ್ದ ಗುಟ್ಟು ಸುಮಿತ್ರೆಗೆ ತಿಳಿದು ಹೋಯಿತಲ್ಲ ಎಂದು ಶೈಲಜೆಗೆ ತುಂಬಾ ದುಃಖವಾಯಿತು. ಕ್ಷಣಕಾಲ ಅವಳಿಂದ ಮಾತೇ ಹೊರಡಲಿಲ್ಲ.

"ಸುಮಿತ್ರೆ, ನನ್ನ ಹಣೆಯ ಬರಹ ಕೆಟ್ಟದ್ದಮ್ಮ. ಮಾನವಾಗಿ ಮನೆಯಲ್ಲಿ ಇದ್ದ ನಾನು ಬೀದಿಗೆ ಬರುವಂತೆ ಆದೆ!" ಎಂದು ಗೋಳೋ ಎಂದು ಅತ್ತಳು.

ಸುಮಿತ್ರೆ ಶೈಲಜೆಯನ್ನು ಸಮಾಧಾನಪಡಿಸುತ್ತಾ "ನೀನು ಚಿಂತಿಸಬೇಡ ಶೈಲಜಾ, ನಿನ್ನನ್ನು ಜಯಂತ ಕೈಬಿಡದಂತೆ ಚಿಕ್ಕಮ್ಮನ ಮೂಲಕ ಪ್ರಯತ್ನಿಸೋಣ!" ಎಂದಳು.

ಸುಮಿತ್ರೆಗೆ ತನ್ನ ಒಡಲ ದುಃಖವನ್ನು ಹೇಳಿಕೊಂಡ ಮೇಲೆ ಶೈಲಜೆಯ ಮನಸ್ಸು ಎಷ್ಟೋ ಹಗುರವಾಯಿತು. ಸುಮಿತ್ರೆಯೂ ನೊಂದ ಜೀವ. ಅವಳಿಗೆ ಶೈಲಜೆಯ ನೋವಿನ ಗಾಢತೆ ಬೇಗನೆ ಅರಿವಾಯಿತು. ಅವಳು ಸೂಕ್ತ ರೀತಿಯಲ್ಲಿ ಸಂತೈಸಿ, ಬಲವಂತವಾಗಿ ಮನೆಗೆ ಕರೆದುಕೊಂಡು ಹೋದಳು. ಅವರು ಮನೆಯನ್ನು ಸೇರಿದಾಗ ಮನೆಯಲ್ಲಿ ದೀಪ ಹಚ್ಚಿತ್ತು. ಅದನ್ನು ಕಂಡು ತನ್ನ ಆಶಾದೀವಿಗೆಯೂ ಮತ್ತೆ ಉರಿಯುವಂತಾದರೆ? ಎಂದುಕೊಂಡಳು ಶೈಲಜೆ.

೬

ಶಾರದೆ ಸಮಾಧಾನಚಿತ್ತದಿಂದ ಶೈಲಜೆಯ ಕಥೆಯನ್ನು ಕೇಳಿ ನಿಟ್ಟುಸಿರು ಬಿಟ್ಟಳು. ಜಯಂತ ಹೇಗೆ ತನ್ನ ಬಣ್ಣದ ಮಾತುಗಳಿಂದ ಶೈಲಜೆಯನ್ನು ಬೆರಗುಗೊಳಿಸಿ, ಅವಳ ಬಾಳನ್ನು ಕಿತ್ತು, ಈಗ ಪಕ್ಕನೆ ತಲೆ ತಪ್ಪಿಸಿಕೊಂಡು ಬಿಟ್ಟಿರುವ ಸಂಗತಿಯನ್ನು ಕೇಳಿ ಶಾರದೆ ಉರಿದು ಬಿದ್ದಳು. ಹೆಣ್ಣಿನ ಬಾಳಿನಲ್ಲಿ ಹೆಜ್ಜೆ ಹೆಜ್ಜೆಗೂ ವಿಷ ಹಿಂಡುತ್ತಿರುವ ಈ ವಿಷಯಲಂಪಟ ಗಂಡುಗಳ ಉಪಟಳಕ್ಕೆ ಕೊನೆಯೇ ಇಲ್ಲವೇ ? ಅವಳೊಡನೆ ಸುಖಿಸುವುದೊಂದು ಅವನಿಗೆ ಬೇಕು. ಅವಳ ಕಷ್ಟ ಸುಖಗಳು ಒಂದಿನಿತೂ ಅವನಿಗೆ ಬೇಡ ! ಇಂತಹ ಕೃತಘ್ನ ಗಂಡಿನ ಮೋಸದ ಬಲೆಯಲ್ಲಿ ತಾನಾಗಿ ಬಂದು ಬೀಳುವ ಹೆಣ್ಣುಗಳನ್ನು ಏನೆನ್ನಬೇಕು ? ಹೆಣ್ಣು ಗಂಡಿನ ಮುಚ್ಚಟೆಯ ಮಾತುಗಳಿಗೆ ಬಾಯಿಬಿಟ್ಟು ತಾಯಿತನದ ಹೊರೆಗೆ ಹಿಂದುಮುಂದು ತುಳಿಯದೆ ತಲೆ ಕೊಡುವಷ್ಟು ತಿಳಿಗೇಡಿಯೇ ? ಅವಳಿಗೆ ಶೀಲದ ಬೆಲೆಯೇ ಇಲ್ಲವೇ ? ಅವಳು ಅಷ್ಟು ನಿರ್ಲಜ್ಜಳೇ ? ಅಷ್ಟು ದುರ್ಬಲಳೇ ? ಅವಳಿಗೆ ಸಂಯಮವಿಲ್ಲವೇ ? ಕಾಮಪ್ರೇಮಗಳ ಪ್ರಭೇದದ ಅರಿವಿಲ್ಲವೇ ?

ಹೆಣ್ಣಿಗೆ ಗಂಡಿನ ಪ್ರೇಮ ಬೇಕು. ಪ್ರೀತಿ ಬೇಕು. ಅವಳ ಜೀವನದ ಮಾಧುರ್ಯ ಒಡೆದು ಉಕ್ಕಲು ಗಂಡಿನ ಒಲವು ಬೇಕು. ಅವನ ಸಹವಾಸ ಬೇಕು. ದಿಟ. ಹೀಗೆಂದ ಮಾತ್ರಕ್ಕೆ ಲೈಂಗಿಕ ಸುಖವೇ ಜೀವನದಲ್ಲಿ ಪ್ರಧಾನವಾಗಬೇಕೇ ? ಸುರತಕೇಳಿಯಿಲ್ಲದೆ ದಾಂಪತ್ಯ ಜೀವನವಿಲ್ಲವೇ ? ಗಂಡುಹೆಣ್ಣುಗಳ ಸಂಭೋಗ ಕೇವಲ ಸಂತಾನೋತ್ಪತ್ತಿಗೆಂದು ಮೀಸಲಿಟ್ಟ ಜೀವನದ ವಿಭಾಗ ! ಅದನ್ನೇ ಅನುದಿನದ ಬೇಟೆಯಾಗಿ, ಜೀವನದ ನೀತಿಯಾಗಿ ತಿಳಿದು ಕೂಡುವ ಹೆಣ್ಣುಗಂಡುಗಳು ಮಾನವರೋ ? ಪಶುಗಳೋ ? ............... ಗಂಡೊಮ್ಮೆ ವಿಚಾರಶೂನ್ಯನಾಗಿ ಪಶುವಾದರೆ, ಅವನನ್ನು ತಿದ್ದಬಲ್ಲ ಹೆಣ್ಣು ಪಶುವಾಗಬೇಕೇ ? ಇಂಥವೇ ಸಾವಿರ ವಿಷಯಗಳು ಶಾರದೆಯ ತಲೆಯಲ್ಲಿ ಕುದಿದವು. ಶಾರದೆ ಜಯಂತನ ಬಗ್ಗೆ ಎಷ್ಟು ಉಗ್ರಳಾದಳೋ ಶೈಲಜೆಯ ಬಗ್ಗೆ ಅಷ್ಟೇ ವ್ಯಗ್ರಳಾದಳು. ಶೈಲಜೆ ಯೌವನದ ಕಾವಿನಲ್ಲಿ ಬಗೆಗೆಟ್ಟು ಎಂತಹ

ತಪ್ಪು ಮಾಡಿದ್ದಾಳೆ ! ಮದುವೆಯಾದ ಮೇಲೆ ಅದರ ಮುಖವಾಡದ ಹಿಂದೆ ಅವಳು 'ಒಡಲಿನ ಹಸಿವನ್ನು' ಹಿಂಗಿಸಿಕೊಂಡಿದ್ದರೆ—ಆ ಮಾತು ಬೇರೆಯಿತ್ತು. ಅದು ಸಮಾಜ ಸಮ್ಮತವೂ ಹೌದು. ಧರ್ಮ ಸಮ್ಮತವೂ ಹೌದು. ಅದು ಬಿಟ್ಟು ಮದುವೆಯ ಮುನ್ನ ದುಡಿಕಿ ಎಂತಹ ವಿಪತ್ತು ತಂದುಕೊಂಡಿದ್ದಾಳೆ ! ಶೈಲಜೆಯ ಪ್ರೇಮ ದೈವಿಕವಿರಬಹುದು. ಅದು ಜಾತಿ ಮತಗಳ ಅಂಕೆಗೆ ನಿಲುಕದ ದಿವ್ಯಪ್ರೇಮವಿರಬಹುದು. ಅವಳು ತನ್ನ ಸ್ವಾಮಿಗೆ ಸರ್ವಸ್ವವನ್ನೂ ಧಾರೆಯೆರೆದಿರಬಹುದು. ಆದರೆ ಜಯಂತ ಅವಳ ಪ್ರೇಮ ಪೂಜೆಗೆ ಅರ್ಹನೇ? ಮತಾಂಧನೂ ವಚನಭ್ರಷ್ಟನೂ ಆದ ಅವನು ಶೈಲಜೆಯ ಪವಿತ್ರ ಪ್ರೇಮಕ್ಕೆ ಬಾಧ್ಯನೇ? ಶಾರದೆ ಹೀಗೆ ಆಲೋಚಿಸುತ್ತಾ ತನ್ನನ್ನೇ ತಾನು ಮರೆತು ಕುಳಿತಾಗ ಶೈಲಜೆ ಹೇಳಿದಳು "ಚಿಕ್ಕಮ್ಮ ನಾನಂತೂ ವೈಕಳೆದುಕೊಳ್ಳಲಾರೆ. ಹೊಟ್ಟೆಯ ಮಗುವನ್ನು ಕೊಂದು ಬದುಕುವುದು ನನಗೆ ಬೇಕಿಲ್ಲ. ನಾನು ಮತ್ತೆ ಮದುವೆಯಾಗಬಹುದು. ಆದರೆ ನಾಯಿ ಮುಟ್ಟಿದ ಅನ್ನವನ್ನು ಮತ್ತೊಬ್ಬರಿಗೆ ನಾನು ಬಡಿಸಲಾರೆ !"

"ಹಾಗಾದರೆ ನಿನ್ನ ಆಶಯವೇನು ?"

"ಅವರನ್ನು ಮತ್ತೊಮ್ಮೆ ಪ್ರಾರ್ಥಿಸುವುದು. ನನ್ನ ಮೇಲೆ ಅವರಿಗೆ ಕರುಣೆ ಬರದೇ ಹೋದರೆ, ತಿಳಿದೇ ಇದೆ—ಆತ್ಮಹತ್ಯೆ !"

"ಒಮ್ಮೆ ದುಡುಕಿ ಅಷ್ಟಾಯಿತು. ಇನ್ನೊಮ್ಮೆ ದುಡುಕಿ ಮತ್ತೇನು ಅನಾಹುತವೋ ?....ಶೈಲಜ....ದೇವರಿದ್ದಾನೆ. ಅನಾಥ ಬಂಧು ಅವನು. ನಾವು ಕಟ್ಟೆಯ ಕಲ್ಲನ್ನು ಕಟ್ಟೆಗೆ ಕೂಡಿಸಲು ಪ್ರಯತ್ನಿಸೋಣ. ಅವನು ಕೃಪೆ ಮಾಡಬಹುದು."

ಎಂದು ಶೈಲಜೆಯನ್ನು ಸಮಾಧಾನಪಡಿಸಿ, ಹೇಳಬೇಕಾಗಿದ್ದ ವಿಷಯಗಳನ್ನು ಹೇಳಿ ಅವಳನ್ನು ಮನೆಗೆ ಕಳುಹಿಸಿಕೊಟ್ಟಳು.

ಜಯಂತ ಹೇಳಿದ್ದ ಸಂಜೆ ಬಂತು. ಆ ಹೊತ್ತಿಗೆ ಸರಿಯಾಗಿ ಶಾರದೆ ಶೈಲಜೆಯೊಡನೆ ಗೊತ್ತಾಗಿದ್ದ ಗಮ್ಯಸ್ಥಳಕ್ಕೆ ಹೋದಳು. ಜಯಂತ ಇನ್ನೂ ಬಂದಿರಲಿಲ್ಲ. ಶಾರದೆ ಶೈಲಜೆಯನ್ನು ಒಂಟಿಯಾಗಿ ಉಳಿಸಿ, ತಾನು ಅಲ್ಲೇ ಇದ್ದ ಗಿಡಮರಗಳ ಪೊದೆಯಲ್ಲಿ ಅವಿತುಕೊಂಡಳು. ಜಯಂತ ಹೇಳಿದ್ದ ಹೊತ್ತಿಗೆ ಸರಿಯಾಗಿ ಬಂದ. ಅವನು ತುಂಬಾ ಉತ್ಸಾಹದಲ್ಲಿದ್ದ. ಈ ದಿನ ಅವನು

ಶೈಲಜೆಯೊಡನೆ ಇದ್ದ ತನ್ನ ದೇಹಸಂಬಂಧವನ್ನು ಕಡಿದುಕೊಳ್ಳುತ್ತಾನೆ. ಈ ಪ್ರಶ್ನೆ ಅನೇಕ ದಿನಗಳಿಂದ ಅವನನ್ನು ಅನ್ನ ನೀರಿಗೆ ಬಿಡದೆ ಕಾಡಿದ್ದವು. ಯಾಕಂದರೆ ಅದು ಶೈಲಜೆಯ ಸಮಸ್ಯೆ ಮಾತ್ರವಲ್ಲ. ಅವನ ಸಮಸ್ಯೆಯೂ ಆಗಿತ್ತು. ನಾಳೆ ಗುಟ್ಟು ಬಯಲಾಗಿ, ಶಾಂತಮಲ್ಲಯ್ಯನವರು ಕೋಪಾವೇಶ ವಾದರೆ ಅಲ್ಲಿಗೆ ತನ್ನ ಕಥೆ ಪೂರೈಸಿದಂತೆಯೇ ಸರಿ. ಊರಿನಲ್ಲಿ ತಲೆ ಎತ್ತಿ ತಿರುಗದಂತೆ ಅಪಮಾನ ಮಾಡುವರು. ಇವುಗಳಿಂದ ಪಾರಾಗುವ ದಾರಿ ? ತಾಯಿಯಾಗಿರುವ ಶೈಲಜೆ ಮತ್ತೆ ಕನ್ಯೆಯಾಗುವುದು! ಅದಕ್ಕಾಗಿ ಜಯಂತನ ಭಗೀರಥ ಪ್ರಯತ್ನ !

ಶೈಲಜೆಯನ್ನು ಕಂಡೊಡನೆಯೇ ಜಯಂತನಿಗೆ ಸಂತೋಷವಾಯಿತು. ಅವನಿಗೆ ಶೈಲಜೆ ಎಲ್ಲಿ ಬರುವುದಿಲ್ಲವೋ ಎನ್ನುವ ಸಂದೇಹ ಪೂರಾ ಇತ್ತು.

"ಶೈಲಜ ನನ್ನ ಮಾತು ನಿನಗೆ ಸೇರಿತೆಂದು ಕಾಣುತ್ತೆ !" ಎಂದು ಶೈಲ ಜೆಯ ಕೈ ಹಿಡಿಯಲು ಹೋದ. ಶೈಲಜೆ ಅವನ ಕೈಯನ್ನು ಕೊಸರಿ ಕೊಂಡಳು.

"ಇಲ್ಲ. ಆ ಕೆಲಸ ನನ್ನ ಮನಸ್ಸಿಗೆ ಒಪ್ಪಲಿಲ್ಲ ! "

"ಹಾಗಾದರೆ ಮುಂದಿನ ದಾರಿ ?"

"ನನ್ನ ಮದುವೆ !"

"ಅದು ಖಂಡಿತ ಸಾಧ್ಯವಿಲ್ಲ !"

"ಯಾಕೆ ಸಾಧ್ಯವಿಲ್ಲ ? ಎಂದು ಹೂಂಕರಿಸುತ್ತಾ, ಶೈಲಜೆಯ ಬಳಿಗೆ ಬರುತ್ತಾ ಪ್ರಶ್ನಿಸಿದಳು ಶಾರದೆ. ಅವಳು ಅಲ್ಲಿಯೇ ಅಡಗಿದ್ದು ಅವರಲ್ಲಿ ನಡೆದ ಮಾತುಗಳನ್ನು ಕೇಳಿಕೊಂಡಿದ್ದಳು.

"ಯಾಕೆ ಸಾಧ್ಯವಿಲ್ಲ !" ಅಂದು ಅವಳ ಜೀವನವನ್ನು ಹಾಳು ಮಾಡಲ್ಕು ಸಾಧ್ಯವಾಯಿತು. ಇಂದು ಇವಳ ಉದ್ಧಾರ ಏಕೆ ಸಾಧ್ಯವಿಲ್ಲ ?"

ಶಾರದೆಯನ್ನು ಕಂಡು ಜಯಂತ ಬೆಪ್ಪಾಗಿ ನಿಂತುಬಿಟ್ಟ. ಶಾರದೆ ಹಠಾ ತ್ತಾಗಿ ಕಾಣಿಸಿಕೊಂಡ ರೀತಿ, ಮಾತನಾಡಿದ ರೀತಿ, ಅವನನ್ನು ಅಚ್ಚರಿಗೊಳಿಸಿ ದ್ದವು. ಅವನು ಶಾರದೆಯ ನೆಟ್ಟ ನೋಟವನ್ನಿದಿರಿಸಲಾರದೆ ನೆಲ ನೋಡುತ್ತಾ ಕ್ಷಣಕಾಲ ನಿಂತು ಮಾತನಾಡಲು ತಲೆ ಎತ್ತಿದ. ಮಾತು ತೊದಲಿತು. ಉಗುಳು ನುಂಗಿ, ಗಂಟಲು ಸರಿಪಡಿಸಿಕೊಂಡು ಮತ್ತೊಮ್ಮೆ ಮಾತನಾಡಲು

ಪ್ರಯತ್ನಿಸಿ "ನೀವು........?" ಎಂದ.

"ಹ್ಞೂಂ. ನಾನು ಶಾರದೆ. ನಿಮ್ಮ ಶೈಲಜೆಯ 'ಚಿಕ್ಕಮ್ಮ'. ಅವಳು ಎಲ್ಲವನ್ನೂ ವಿಷದವಾಗಿ ತಿಳಿಸಿದ್ದಾಳೆ. ನಾನು ಈ ಸುದ್ದಿಗೆ ಹೊಸಬಳಾದರೂ ಗತ್ಯಂತರವಿಲ್ಲದೆ ತಲೆ ಹಾಕಬೇಕಾಯಿತು."

ಶಾರದೆ ತನ್ನ ಬೆಂಬಲಕ್ಕಿರುವ ಸಂಗತಿ ಶೈಲಜೆಯನ್ನು ಹುರುಪುಗೊಳಿಸಿತು.

"ಹೇಳಿಬಿಡಿ—ಯಾವುದನ್ನೂ. ಚಿಕ್ಕಮ್ಮನ ಎದುರಿನಲ್ಲಿ ನನ್ನ ಭವಿಷ್ಯ ನಿರ್ಣಯವಾಗಿ ಬಿಡಲಿ!"

"ನಾನು ಈ ಮೊದಲೇ ಹೇಳಿದ್ದೆನಲ್ಲಾ. ನಿನ್ನನ್ನು ವಿವಾಹವಾಗಲು ನನ್ನ ತಾಯಿ ಅನುಮತಿ ಕೊಡಲಿಲ್ಲ."

"ಶೈಲಜೆಯನ್ನು ವಿವಾಹವಾಗುವವರು ನೀವು—ನಿಮ್ಮ ತಾಯಿಯಲ್ಲ. ನಿಮ್ಮ ಅನುಮತಿ, ಒಪ್ಪಿಗೆ ಇತ್ತರಾಯಿತು." ಎಂದಳು ಶಾರದೆ.

"ನನಗೆ ಮದುವೆಯಾಗಲು ಆಸೆಯಿದೆ. ಆದರೆ ನಮ್ಮ ಸಮಾಜದಲ್ಲಿ ಇದನ್ನು ಕಾರ್ಯಗತ ಮಾಡಲು ಸಾಧ್ಯವಿಲ್ಲ!"

"ಯಾಕೆ ಸಾಧ್ಯವಿಲ್ಲ?"

"ಶೈಲಜೆಯನ್ನು ಮದುವೆಯಾದರೆ ನನ್ನ ಬ್ರಾಹ್ಮಣ್ಯ ಹಾಳಾಗುತ್ತದೆ. ಸ್ವಜನರು ನನ್ನನ್ನು ತಮ್ಮಿಂದ ದೂರ ಹಾಕುತ್ತಾರೆ."

"ನಾನು ಈ ಮಾತು ಹೇಳುವೆನೆಂದು ನೀವು ಸಿಟ್ಟಾಗಬಾರದು. ಈಗ ನೀವು ಬ್ರಾಹ್ಮಣ್ಯ ಉಳಿಸಿಕೊಂಡಿದ್ದೀರಾ? ಬ್ರಾಹ್ಮಣರೆಂದು ಹೇಳಿಕೊಳ್ಳುವ ನೀವು ಬ್ರಹ್ಮಜ್ಞಾನ ಪಡೆದಿದ್ದೀರಾ? ನಿಷ್ಠಾವಂತ ಬ್ರಾಹ್ಮಣನ ಆಚಾರವಿಚಾರ ನಡೆಸಿದ್ದೀರಾ?............ ಈಗ ಹೇಳಿ. ಬ್ರಾಹ್ಮಣ ತ್ರಿಕಾಲ ಸಂಧ್ಯಾವಂದನೆ ಮಾಡಲು ಮತಗ್ರಂಥಗಳಲ್ಲಿ ಹೇಳಿದೆ. ನೀವು ಅದರಂತೆ ನಡೆಯುತ್ತಿದ್ದೀರಾ? ಬ್ರಾಹ್ಮಣರು ವೈದಿಕ ವೃತ್ತಿಯಿಂದ ಹೊಟ್ಟೆ ಹೊರೆಯಲು ಶಾಸ್ತ್ರಗಳು ತಿಳಿಸುತ್ತಿವೆ. ಆದರೆ ನೀವು? ಶಾಸ್ತ್ರಗಳು ಬ್ರಾಹ್ಮಣನಿಗೆ ವರ್ಣಾಶ್ರಮ ಧರ್ಮಗಳನ್ನು ಬೋಧಿಸುತ್ತವೆ. ನೀವು ಇದನ್ನು ಪಾಲಿಸುತ್ತಿದ್ದೀರಾ? ಇವುಗಳೆಲ್ಲ ಬಾಹ್ಯಾಡಂಬರದ ಚಿಹ್ನೆಯಾಯಿತು. ಇವುಗಳ ಮಾತು ಬೇಡ. ಎಲ್ಲಿ ಹೃದಯ ಬಿಚ್ಚಿ ಹೇಳಿರಿ. ಆತ್ಮಸಾಕ್ಷಾತ್ಕಾರದ ಬಗೆಗಾಗಲೀ, ಲೋಕ ಕಲ್ಯಾಣದ

ವಿಷಯದಲ್ಲಾಗಲೀ, ನೀವು ಎಂದಾದರೂ ವಿಚಾರ ಮಾಡಿದ್ದೀರಾ? ಇವು ಗಳೊಂದನ್ನೂ ಕಿಂಚಿತ್ತೂ ಮಾಡದ ನೀವು ಬ್ರಾಹ್ಮಣರೆಂದು ಕರೆದುಕೊಳ್ಳಲು ನಾಚಿಕೆಯಾಗುವುದಿಲ್ಲವೇ ? ಏನೂ ಅರಿಯದ ಮಗುವಿಗೆ ಜೇನುತುಪ್ಪ ಸವರಿದ ವಿಷದಗುಳಿಗೆಯನ್ನು ತಿನ್ನಿಸಿ, ಅವಳ ಜೀವನವನ್ನು ಹಾಳುಮಾಡಲೂ ಹೇಸದ ನೀವು ಬ್ರಾಹ್ಮಣರೋ ? ಅವಳ ಜೀವದ ಜೀವ-ನಿಮ್ಮ ಸಂತಾನ ನಿಮ್ಮ ಕಣ್ಣೆ ದುರಿನಲ್ಲಿಯೇ ಮಿಲಮಿಲನೆ ಒದ್ದಾಡಿ ಸಾಯುವದನ್ನು ಕಣ್ಣಿಂದ ನೋಡುತ್ತಾ ನಿಲ್ಲುವ, ನೀವು ಬ್ರಾಹ್ಮಣರೋ ?—ಕಟುಕರೋ—ನೀವೇ ಹೇಳಿ. ಬ್ರಾಹ್ಮಣ ರಂತೆ ಬ್ರಾಹ್ಮಣರು ! ಆ ಮಾತಿಗೊಂದು ಅರ್ಥ ಬೇಡವೇ ? " ಎಂದು ಗುಡುಗಿ ದಳು ಶಾರದೆ. ಜಯಂತ ಮಂತ್ರಮುಗ್ಧನಂತೆ ಆಲಿಸುತ್ತಾ ನಿಂತ. ಹೌದು, ಶಾರದೆಯ ಮಾತು ವಾಸ್ತವವೇ ? ತಾನು ಹೆಸರಿನಲ್ಲಿ ಬ್ರಾಹ್ಮಣನಾದರೂ, ಈಗ ಕೆಲಸದಲ್ಲಿ ಚಾಂಡಾಲನಿಗೂ ಹೇಯವಾದ ಕೆಲಸ ಮಾಡುತ್ತಿಲ್ಲವೇ ? ತಾನು ಬ್ರಾಹ್ಮಣನೋ ಕರ್ಮ ಚಾಂಡಾಲನೋ ?

" ನಾನು ಏನೂ ತಿಳಿಯದವಳು. ಮೇಲಾಗಿ ಹೆಂಗಸು. ನಿಜ. ಆದರೆ ನನ್ನ ಮಾತನ್ನು ಹೆಂಗಸಿನ ಮಾತೆಂದು ಉಪೇಕ್ಷೆ ಮಾಡದೆ ವಿಚಾರ ಮಾಡಿ. ನೀವು ವಿದ್ಯಾವಂತರು, ಸುಸಂಸ್ಕೃತರು. ಒಬ್ಬ ವ್ಯಕ್ತಿಯ ನಿಜವಾದ ಯೋಗ್ಯತೆ ಯನ್ನು ಎತ್ತಿ ತೋರಿಸುವುದು ಅವನ ಜಾತಿಯಲ್ಲ, ಅವನ ನಡತೆ, ಆಚಾರ-ವಿಚಾರ. ಬ್ರಾಹ್ಮಣನ ಹೊಟ್ಟೆಯಲ್ಲಿ ಹುಟ್ಟಿದ ಮಾತ್ರಕ್ಕೇ ಒಬ್ಬ ಮನುಷ್ಯನು ಬ್ರಾಹ್ಮಣನಾಗುತ್ತಾನೆಯೇ ? ಶುಕ, ಶಂಬೂಕ, ವಸಿಷ್ಠ, ವ್ಯಾಸ, ವಾಲ್ಮೀಕಿ, ರೈಕ್ವ, ಇವರುಗಳು ಹುಟ್ಟಿನಿಂದ ಬ್ರಾಹ್ಮಣರಲ್ಲದಿದ್ದರೂ, ಬ್ರಹ್ಮಜ್ಞಾನ ಪಡೆದು, ಬ್ರಾಹ್ಮಣರೆನಿಸಿಕೊಳ್ಳಲಿಲ್ಲವೇ? ನಮಗೆ ಹೇಳಿಕೊಳ್ಳಲು ದೊಡ್ಡ ಹೆಸರು ಬೇಕು. ನಮ್ಮ ನಡೆ-ನುಡಿ ಆ ಮಟ್ಟಕ್ಕೆ ಬರದಿದ್ದರೂ ಚಿಂತೆಯಿಲ್ಲ. ಎಲ್ಲಾ ಒಣ ಜಂಭ, ಕೃತಕತೆ, ಆಡಂಬರ, ಸತ್ವ ಮಾತ್ರ ಸೊನ್ನೆ. " ಎಂದು ಹಂಗಿಸಿ ಜರೆ ದಳು ಶಾರದೆ.

ಶಾರದೆಯ ಮಾತುಗಳನ್ನು ಕೇಳುತ್ತಿದ್ದ ಜಯಂತ ಇವಳು ಅಸಾಧ್ಯಳು ಎಂದುಕೊಂಡ.

" ಶೈಲಜೆಯನ್ನು ವಿವಾಹವಾದರೆ ನನ್ನ ಜಾತಿಯ ವಿಷಯದಲ್ಲಿ ಮಾತ್ರ ವಲ್ಲ, ನಮ್ಮ ಗೃಹಕೃತ್ಯವೂ ಪೇಚಿಗೆ ಬೀಳುತ್ತದೆ. ನನ್ನನ್ನೇ ನಂಬಿದ ತಾಯಿ

ತಮ್ಮಂದಿರಿಗೆ ನಾನು ಮೋಸ ಮಾಡಿದಂತೆ ಆಗುತ್ತದೆ. ನಾನು ಕರ್ತವ್ಯ ಚ್ಯುತನಾಗುತ್ತೇನೆ."

"ಕರ್ತವ್ಯದ ಕಡೆಗೆ ಗಮನ ಉಳ್ಳ ನಿಮಗೆ ಶೈಲಜೆಯ ಬಗ್ಗೆ ನಿಮ್ಮ ಕರ್ತವ್ಯದ ಕಣ್ಣು ಏಕೆ ಮುಚ್ಚಿತು? ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ....ಶೈಲಜೆಯನ್ನು ವಿವಾಹವಾದಾಕ್ಷಣಕ್ಕೆ ನಿಮ್ಮ ತಾಯಿಯನ್ನು ನೀವೇಕೆ ಬಿಡಬೇಕು?"

"ಶೈಲಜೆಯನ್ನು ಹಳೆಯ ಕಾಲದ ತಾಯಿ ಸೊಸೆಯಾಗಿ ಒಪ್ಪುವುದಿಲ್ಲ."

"ಆಕೆ ಒಪ್ಪದಿದ್ದರೆ ನೀವು ಗಂಡ-ಹೆಂಡಿರು ಬೇರೆಯಾಗಿದ್ದುಕೊಂಡು ನಿಮ್ಮ ತಾಯಿಗೆ ನೋವಾಗದಂತೆ ನೋಡಿಕೊಳ್ಳಬಹುದಲ್ಲ! ಇನ್ನು ಹಣಕಾಸಿನ ಪ್ರಶ್ನೆ! ನಿಮ್ಮ ವರಮಾನಕ್ಕೆ ಒಂದು ಜೀವದ ಹೊರೆ ಹೆಚ್ಚಾಗಲಾರದು. ಇದು ಹೊರೆಯೂ ಅಲ್ಲ. ಇಂದಲ್ಲದಿದ್ದರೂ ಮುಂದೊಮ್ಮೆ ನೀವು ಇಚ್ಛೆ ಪಟ್ಟು ತಲೆಗೊಡುತ್ತೀರಿ!"

"ನೋಡಿದ ಜನ ಏನನ್ನುತ್ತಾರೆ? ನಿಮ್ಮಿಬ್ಬರ ವಿವಾಹದಿಂದ ವರ್ಣ ಸಂಕರವಾಯಿತೆಂದು ಬ್ರಾಹ್ಮಣರೂ ಲಿಂಗಾಯತರೂ ನಮ್ಮಿಬ್ಬರ ಮೇಲೆ ಕತ್ತಿ ಕಟ್ಟುತ್ತಾರೆ. ಅದರಲ್ಲಿಯೂ ಶೈಲಜೆಯ ಮನೆಯವರು ನಿಷ್ಠಾವಂತ ಶಿವ ಭಕ್ತರು. ನಾವು ಹರಿಭಕ್ತರು. ನಮ್ಮಿಬ್ಬರ ಮತಭೇದ ಊರಿನ ಮತಾಂಧರ ಆಹಾರವಾಗಿ, ನಮಗೆ ತೊಂದರೆಯಾಗಬಹುದು."

"ತೊಂದರೆಯಾಗುವ ಭೀತಿ ಕೇವಲ ಮನಸ್ಸಿನ ಭ್ರಾಂತಿ. ಹರಿಹರರ ಜಗಳವೆಷ್ಟು ಅರ್ಥವಿಲ್ಲವೋ, ಜಂಗಮ ಬ್ರಾಹ್ಮಣರ ವೈಷಮ್ಯ ಅಷ್ಟೇ ಹುರುಳಿಲ್ಲ ದುದು. ಹರಿಹರರು ಪರಮಾತ್ಮನ ಬೇರೆ ಬೇರೆ ಮುಖಗಳು. ಅಂತೆಯೇ ವೀರಶೈವ, ಬ್ರಾಹ್ಮಣ ಮತಗಳು ಆ ಪರಮಾತ್ಮನ ಸಾಕ್ಷಾತ್ಕಾರಕ್ಕಿರುವ ಬೇರೆ ಬೇರೆ ಮಾರ್ಗಗಳು. ಯಾವ ಧರ್ಮ ಹಿಡಿದರೇನು? ನಾವು ಸೇರಬೇಕೆನ್ನುವ ಗುರಿ ಒಂದೇ ಆಗಿರುವಾಗ, ತಿಳಿದವರು ಯಾರೂ ಈ ಬಗ್ಗೆ ಗೊಂದಲವೆಬ್ಬಿಸರು. ತಿಳಿಯದ ಮೂರ್ಖರು ಎಬ್ಬಿಸುವ ಹುಯಿಲು ವ್ಯರ್ಥಾಲಾಪವಲ್ಲದೆ ಮತ್ತೇನೂ ಅಲ್ಲ."

ಜಯಂತ ಏನನ್ನೋ ಆಲೋಚಿಸುತ್ತಾ ಸುಮ್ಮನಿದ್ದ. ಶಾರದೆ ಮಾತು ಮುಂದುವರಿಸಿದಳು.

" ಎಲ್ಲ ನಮ್ಮ ಭ್ರಾಂತಿಯಲ್ಲದೆ ಬೇರೆಯಲ್ಲ. ಮನಸ್ಸೊಂದು ದೃಢ ವಾಗಿದ್ದರೆ ಜಾತಿಮತಗಳು ಏನೂ ಮಾಡವು. ಈಗ ಬೇಕಾಗುವುದು ದೃಢಚಿತ್ತ. ಸ್ಥಿರ ಸಂಕಲ್ಪ. ಇವು ನಿಮ್ಮಲ್ಲಿದ್ದರಾಯಿತು.... "

" ಸದ್ಯದ ಪರಿಸ್ಥಿತಿಯಲ್ಲಿ ಅವುಗಳು ನನ್ನಲ್ಲಿ ಇಲ್ಲವೆಂದೇ ನನ್ನ ಭಾವನೆ." ಈ ಮಾತು ಕೇಳಿ ಶಾರದೆ ಕೆರಳಿದಳು.

" ನಿಮ್ಮಲ್ಲಿ ದೃಢಚಿತ್ತವಿಲ್ಲ, ಸ್ಥಿರಸಂಕಲ್ಪವಿಲ್ಲ. ನೀವು ಚಪಲಚಿತ್ತರು, ಚಂಚಲರು ಎಂದೇ ತಿಳಿಯೋಣ. ಬಾಧಕವಿಲ್ಲ. ನಿಮ್ಮಲ್ಲಿ ಶೈಲಜೆಗಾಗಿ, ಅಚಲ ವಾದ ಪ್ರೇಮವಿದೆಯೋ, ಇಲ್ಲವೋ ? "

" ಶೈಲಜೆಗಾಗಿ ಪ್ರೇಮವಿದೆ. ಆದರೆ ಅದಕ್ಕಾಗಿ ನಾನು ಸರ್ವಸ್ವವನ್ನೂ ತ್ಯಾಗಮಾಡಲು ಸಿದ್ಧನಿಲ್ಲ. "

" ಹಾಗಾದರೆ ನೀವು ಶೈಲಜೆಯನ್ನು ಏನೆಂದು ಭಾವಿಸಿದಿರಿ ? ಒಮ್ಮೆ ಪ್ರೀತಿಸಿ.........ಮೂಸಿ, ಬಿಸುಡುವ ಪುಷ್ಪವೆಂದು ಭಾವಿಸಿದಿರಾ ? ನೆನಪಿಡಿ. ಶೈಲಜೆ— ವೇಶ್ಯೆಯಲ್ಲ. ಕುಲೀನ ಮನೆತನದ ಹೆಣ್ಣುಮಗಳು. ಮಾನವಂತರ ಹೆಮ್ಮಗಳು ! "

" ಅದು ನನಗೂ ತಿಳಿದಿದೆ. "

" ನಿಮಗೂ ತಿಳಿದಿದೆ. ಅರಿಯದ ಹೆಣ್ಣನ್ನು ಬೀದಿಗೆ ಎಳೆಯುವ ಕಲೆ ಚೆನ್ನಾಗಿ ತಿಳಿದಿದೆ. ಮಾನವಾಗಿ ಮನೆಯಲ್ಲಿದ್ದ ಶೈಲಜೆಯನ್ನು ಕೆಡಿಸಿ, ಅದಕ್ಕಾಗಿ ಕಿಂಚಿತ್ತೂ, ಪಶ್ಚಾತ್ತಾಪ ಪಡದ ನೀವು—ನಿಮ್ಮನ್ನು ಏನೆಂದು ಕರೆಯಬೇಕು ? "

" ನಾನು ನಿಮ್ಮೊಂದಿಗೆ ಚರ್ಚಿಸಲು ಬರಲಿಲ್ಲ ! "

" ಹೌದು. ನಾನು ನಿಮ್ಮೊಂದಿಗೆ ಚರ್ಚಿಸಲು ಬಂದಿದ್ದೇನೆ ! ನನ್ನ ಪ್ರಶ್ನೆಗೆ ಉತ್ತರ ಕೊಡಿ. ನೀವು ಮಾಡಿದ ಕೆಲಸ ನ್ಯಾಯವೋ ? ಶೈಲಜೆ ಗಾಗಿ ಕಿಂಚಿತ್ತೂ ಮರುಕಗೊಳ್ಳದ ನೀವು— ನಿಮ್ಮ ಎದೆ ಅಂತಃಕರಣ ಶೂನ್ಯ ಬೆಂಗಾಡೇ ? "

" ಶೈಲಜೆಯ ಬಗೆಗೆ ಮರುಕವಿರುವುಧರಿಂದಲೇ ಮದ್ದು ತಂದಿರು ವುದು. "

" ನಿಮ್ಮದು ಬಲು ದೊಡ್ಡ ಉಪಕಾರ ! ಹಾಗೆ ಹೇಳಲು ನಿಮಗೆ ನಾಚಿಕೆ

ಇಲ್ಲವೇ ? ನೀವು ಮನುಷ್ಯರೋ-ಮೃಗವೋ ? ಮೃಗವೆಂದೂ ತನ್ನನ್ನು ನಂಬಿದ ನಲ್ಲೆಗೆ ಈ ಅನ್ಯಾಯ ಮಾಡದು. "

ಈ ಬೀಭತ್ಸನೆಯನ್ನು ಕೇಳಿ ಬೆಂಕಿ ಬೆಂಕಿಯಾದ ಜಯಂತ. ಎಷ್ಟೇ ಆಗಲಿ ಜಯಂತ ಗಂಡಸು. ಹೆಣ್ಣು ಜರೆಯುವದನ್ನು ಎಷ್ಟೆಂದು ಕೇಳಿ ಕೊಂಡಿದ್ದಾನು ?

" ಆಗಲಿ. ನನ್ನನ್ನು ಪಶುವೆಂದೇ ತಿಳಿಯಿರಿ........ " " ನಾನು ಇನ್ನು ಬರುತ್ತೇನೆ " ಎಂದು ಅಲ್ಲಿಂದ ಹೊರಟು ಹೋಗಲು ಪ್ರಯತ್ನಿಸಿದ.

" ಅದಾಗದು........ ನೀವು ಮನುಷ್ಯರಾಗಿಯೇ ಇಲ್ಲಿಂದ ಕಾಲ್ದೆಗೆಯ ಬೇಕು ! "

" ಶೈಲಜೆಯನ್ನು ಮದುವೆಯಾಗುವುದು ಅಸಾಧ್ಯ ? "

" ಅದು ಸಾಧ್ಯ ಮಾಡುತ್ತೇನೆ ! "

" ನಾನು ' ಒಲ್ಲೆ ' ಎಂದರೆ ನಿಮ್ಮಿಂದೇನಾದೀತು ? "

" ನನ್ನಿಂದಲೇ........ " ವಿಕಟವಾಗಿ ನಗುತ್ತಾ ಹೇಳಿದಳು. " ನನ್ನಿಂ ದಲೇ........ಹೆಣ್ಣು-ಗಂಡಿನ ದೃಷ್ಟಿಯಲ್ಲಿ ಅಬಲೆಯಿರಬಹುದು. ಅಬಲೆಯ ಕೈಯ್ಯನ್ನೊಮ್ಮೆ ನಿಮಗೆ ತೋರಿಸುತ್ತೇನೆ. "

" ನಿಮ್ಮಿಂದೇನು ಸಾಧ್ಯ. "

" ನೀವು ತಿನ್ನುವ ಅನ್ನಕ್ಕೆ ಮಣ್ಣು ಹಾಕಿಸುತ್ತೇನೆ.........ಹೆಣ್ಣಿನ ಮಾನ ಪ್ರಾಣ ಹೋಗುವ ಹೊತ್ತು ಬಂದಾಗ ಅವಳು ಗಂಡಿನ ಮಾನ ಪ್ರಾಣ ತೆಗೆ ಯಲೂ ಹೇಸುವದಿಲ್ಲ. ಒಲಿದರೆ ನಾರಿ, ಮುನಿದರೆ ಮಾರಿ........ಮರೆಯ ದಿರಿ........ಇನ್ನೊಮ್ಮೆ ಹೇಳುತ್ತೇನೆ........ಈಗಲೂ ಕಾರ್ಯ ಮಿಂಚಿ ಹೋಗಿಲ್ಲ. ಶಾಂತವಾಗಿ ವಿಚಾರ ಮಾಡಿ. ಹೆಂಗಸು ಹೇಳುವಳೆಂದು ನಿರ್ಲಕ್ಷಿಸಿ ಮಡುಕ ಬೇಡಿ ! " ಎಂದವಳೇ ಶೈಲಜೆಯೊಂದಿಗೆ ಬಿರುಗಾಳಿಯ ವೇಗದಲ್ಲಿ ಹೊರಟು ಹೋದಳು.

ಶೈಲಜೆ ಶಾರದೆಯ ಪೌರುಷವನ್ನು ಕಂಡು ದಂಗುಬಡೆದು ನಿಂತಿದ್ದಳು. ಶಾರದೆ ಇಷ್ಟು ಧೈರ್ಯಶಾಲಿನಿ ಎಂದು ಅವಳು ತಿಳಿದಿರಲಿಲ್ಲ. ಅಷ್ಟು ಮಾತ್ರ ವಲ್ಲ ! ವಾದಕೌಶಲ, ವಿಷಯಜ್ಞಾನ, ಅವಳ ಬೆಂಕಿಯಂತಹ ಮಾತುಗಳು—ಅಬ್ಬ ! ಬೇರೊಬ್ಬರಾಗಿದ್ದರೆ ಹೆಣ್ಣಿನ ಕೈಲಿ ಆದ ತೇಜೋವಧೆಗೆ-ಪ್ರಾಣ ಬಿಡು

ತ್ತಿದ್ದರೋ ಏನೋ. ಆದರೆ ಜಯಂತ.... ?

ಹೆಣ್ಣಿನ ಕೈಲಿ ಹಣ್ಣಾಗಿ ಸಣ್ಣ ಮೋರೆ ಹೊತ್ತು ಮನೆಗೆ ಬಂದು ಉಶ್ ಎಂದು ಸುಸ್ತಾಗಿ ಕುಳಿತ. ಶಾರದೆ ಜಯಂತನನ್ನು ತನ್ನ ಮಾತುಗಳ ಪೆಟ್ಟಿನಿಂದ ಬಾರಿಬಾರಿಗೂ ಸೋಲಿಸಿದ್ದಳು. ಶಾರದೆಯಂತಹ ಸಾಮಾನ್ಯ ಹೆಂಗಸಿನ ಕೈಯಲ್ಲಿ ಆದ ·ಪರಾಭವ—ಅವನು ಎಷ್ಟು ಮರೆಯಲೆತ್ನಿಸಿದರೂ ಮರೆಯಲಾಗಲಿಲ್ಲ. ಜೊತೆಗೆ ಶಾರದೆ ತಿನ್ನುವ ಅನ್ನಕ್ಕೆ ಮಣ್ಣು ಹಾಕಿಸುವದಾಗಿ ಬೆದರಿಕೆ ಬೇರೆ ಹಾಕಿದ್ದಾಳೆ. ಅವಳು ನುಡಿದಂತೆ ನಡೆಯುವ ಹೆಣ್ಣೇ. ಅವಳು ಖಂಡಿತವಾದಿ. ಊರಿನ ಪ್ರಮುಖ ವ್ಯಕ್ತಿಗಳ ಪರಿಚಯವಿದೆ. ಪಾರ್ವತಮ್ಮನವರ ಮೂಲಕ—ಅವರ ಯಜನಮಾನರು ಮಂಜಯ್ಯನವರ ಕಿವಿಗೆ ಈ ಸುದ್ದಿ ಮುಟ್ಟಿದರೆ—ತನ್ನ ಕೆಲಸ ಹೋದಂತೆಯೇ ಸರಿ. ಅವರು ಜಿಲ್ಲಾ ಬೋರ್ಡಿನ ಅಧ್ಯಕ್ಷರು. ಜಯಂತ ಕೆಲಸ ಮಾಡುವ ಸ್ಕೂಲು ಅವರ ಅಧಿಕಾರ ವಲಯದಲ್ಲಿ ಬರುವುದು. ಕೆಲಸ ಕಳೆದುಕೊಳ್ಳುವುದರ ಜೊತೆಗೆ ಎಷ್ಟು ಅಪಮಾನ ! ತಾನು ಶೈಲಜೆಯನ್ನು ಭಂಗಪಡಿಸಿದ ಸುದ್ದಿಯನ್ನು ಕೇಳಿ ಶಾಂತಮಲ್ಲಯ್ಯನವರು—ಸ್ವಯಂ ಶಾಂತ ಸ್ವಭಾವದವರಾದರೂ—ಮನೆತನಕ್ಕೆ ಆದ ಅಪಮಾನ ಸಹಿಸದೆ— ತನ್ನ ಕೊಂಪೆಯನ್ನೇ ತೆಗೆಯಬಹುದು. ರೊಚ್ಚಿಗೆದ್ದ ಜಂಗಮರು ಏನು ಬೇಕಾದರೂ ಮಾಡಲು ಹಿಂಜರಿಯರು. ಈ ಗಂಡಾಂತರದಿಂದ ಪಾರಾಗ ಬೇಕಾದರೆ ಸಂಸಾರ ಸಮೇತ ಮಡಿಕೇರಿಯನ್ನು ಬಿಟ್ಟು ಹೊರಟು ಬಿಡಬೇಕು. ಇಲ್ಲಿ ಶೈಲಜೆಯನ್ನು ಮದುವೆಯಾಗಬೇಕು. ಇವೆರಡು ದಾರಿಗಳಲ್ಲಿ ಶೈಲಜೆಯನ್ನು ಮದುವೆಯಾಗುವುದೇ ಸಾಧುವಾದ ದಾರಿ. ಹೇಗೂ ವ್ರತ ಕೆಟ್ಟಿದೆ. ಆದರೊಂದಿಗೆ ಸುಖವೂ ಏಕೆ ಕೆಡಬೇಕು ?........ಶೈಲಜೆ ಎಲ್ಲದರಲ್ಲಿಯೂ ತನಗೆ ಅನುರೂಪಳಾದ ಹುಡುಗಿ. ವಿದ್ಯೆ, ಯೌವ್ವನ, ಶ್ರೀಮಂತಿಕೆ ಎಲ್ಲವೂ ಇದೆ., ಅವಳದು ತನ್ನ ಜಾತಿಯೇ ಆಗಿದ್ದರೆ ಅಂಥವಳನ್ನು ಮದುವೆಯಾಗಲು ಪುಣ್ಯ ಮಾಡಿದ್ದೆ ಎಂದು ಭಾವಿಸುತ್ತಿದ್ದ. ಆದರೆ ಈಗ, ಹಾಳು ಜಾತಿಯೊಂದು ತಮ್ಮಿಬ್ಬರ ನಡುವೆ ನುಸುಳಿ ಬಂದಿದೆ. ಜಾತಿ........ಜಾತಿಯನ್ನು ನಂಬಿ ಬದುಕಿದವರು ಯಾರು? ಆರ್ಯರ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆನ್ನುವ ಚಾತುರ್ವರ್ಣಗಳು ಕೇವಲ ವೃತ್ತಿ-ಕಸುಬಿನ ಮೇಲೆ ವಿಂಗಡಗೊಂಡ ಪಂಗಡಗಳು. ಹಿಂದಿನವರ ಈ ವಿಭಜನೆ ಇಂದು ಸಂಕುಚಿತಾರ್ಥ ಪಡೆದು ಅನೇಕ ಅನರ್ಥ

ಪರಂಪರೆಗೆ ಕಾರಣವಾಗಿದೆ. ಇದನ್ನು ತಿಳಿದೂ ತಿಳಿದೂ ತಾನು ಅಂಧಶ್ರದ್ಧೆಯ ಬಾಯಿಬಡಕರ ಬಾಲವಾಗಬೇಕೇ? ಶೈಲಜೆ! ಅವಳು ತನ್ನನ್ನು ಎಷ್ಟು ಪ್ರೀತಿ ಸುತ್ತಾಳೆ! ಅಂತಹ ಪ್ರೇಮನಿಧಿಯನ್ನು ಪಡೆದು ಸುಖವಾಗಿರುವುದನ್ನು ಬಿಟ್ಟು ತಾನು ಜಾತಿ-ಮತಗಳ ಒಣ ತರ್ಕಕ್ಕೆ ಬಲಿಯಾಗಿ ಎಂತಹ ತಪ್ಪು ಮಾಡಿದ್ದೆ. ತನ್ನ ವಿಚಾರದ ಕಣ್ಣಿಗೆ ಮುಚ್ಚಿದ ಪರೆಯನ್ನು ಬಿಡಿಸಲು ಶಾರದೆಯಂತಹ ಹೆಣ್ಣು ಹೆಂಗಸು ಬೇಕಾಯಿತು. ಶಾರದೆ....ಅಬ್ಬಾ! ಆಕೆ ಹೆಣ್ಣಲ್ಲ! ಕ್ರಾಂತಿ ಕಾಳಿ! ತನ್ನಂತಹ ನೂರು ಮೂರ್ಖಂಗೆ ಅರಿವುರಿಟು ಮಾಡಬಲ್ಲ ತಾಯಿ ಅವಳು. ಆಕೆಯ ಇದಿರಿನಲ್ಲಿ ತಾನು ಹಸುಗೂಸೇ ಸರಿ......... ಆ ರಾತ್ರೆ ಅವನ ಕಣ್ಣಿಗೆ ನಿದ್ರೆ ಹತ್ತಲಿಲ್ಲ. ಕಣ್ಣು ಮುಚ್ಚಿದರೆ ಶಾರದೆ—ಕಣ್ಣು ತೆರೆದರೆ ಶೈಲಜೆ. ಅವರು ಹಾಕಿದ್ದ ಬೊಬ್ಬೆ ಬೆದರಿಕೆಗಳಲ್ಲಿ ಅವನಿಗೆಲ್ಲಿಯ ನಿದ್ರೆ?

ಮಾರನೆಯ ದಿನ ಜಯಂತ ಒಂದು ಪತ್ರ ಬರೆದು ಸುಮಿತ್ರೆಯ ಕೈಯಲ್ಲಿ ಶಾರದೆಗೆ ಕಳುಹಿಸಿದ. ಆ ಪತ್ರದ ತುಂಬಾ ಪಶ್ಚಾತ್ತಾಪದ ಮಾತುಗಳು. ಶಾರದೆಯನ್ನು ತನ್ನ ಕಣ್ಣು ತೆರೆಸಿದ ದೇವತೆಯೆಂದು ಹೊಗಳಿದ್ದ. ಶೈಲಜೆ ಯನ್ನು ತಾನು ಮದುವೆಯಾಗಲು ಸಿದ್ಧವಿರುವುದಾಗಿ ತಿಳಿಸಿ, ಶೈಲಜೆಯ ಮನೆ ಯವರನ್ನು ಮದುವೆಗೆ ಒಪ್ಪಿಸುವ ಭಾರವನ್ನು ಶಾರದೆಗೇ ವಹಿಸಿದ.

ಶಾರದೆ; ಕಿಟ್ಟಣ್ಣ, ಒಂದು ಒಳ್ಳೆಯ ದಿನ ನೋಡಿಕೊಂಡು ಶಾಂತ ಮಲ್ಲಯ್ಯ ದಂಪತಿಗಳನ್ನು ಕಂಡು ಸೂಕ್ಷ್ಮವಾಗಿ ಇರುವ ಸಂಗತಿಯನ್ನು ತಿಳಿಸಿ ದರು. ಈ ಸುದ್ದಿಯನ್ನು ಕೇಳಿ ಅವರ ಮುಖ ವಿವರ್ಣವಾದರೂ, ಶಾಂತವಾಗಿ ಪರ್ಯಾಲೋಚಿಸಿ, ಅವರು ಈ ವಿವಾಹಕ್ಕೆ ಅನುಮತಿ ಕೊಟ್ಟರು. ಅವರಿಗೆ ಜಾತಿ-ಮತಗಳಿಗಿಂತ ಮಗಳ ಸುಖ ಮುಖ್ಯವಾಯಿತು.

ಮಡಿಕೇರಿಯಲ್ಲಿ, ಬ್ರಾಹ್ಮಣನು ಲಿಂಗಾಯತರ ಹೆಣ್ಣನ್ನು ವಿವಾಹ ವಾಗುವ ಸುದ್ದಿ ತುಂಬಾ ಕೋಲಾಹಲದ ಸುದ್ದಿಯಾಯಿತು. ಯಾರ ಬಾಯಲ್ಲಿ ನೋಡಿದರೂ ಇದೇ ಮಾತೇ. ಕೆಲವರು ಪ್ರೇಮ ವಿವಾಹವೆಂದರು. ಮತ್ತೆ ಕೆಲವರು ದುಡ್ಡಿಗೆ ಮರುಳಾದ ಮೂಳ ಎಂದರು. ಇನ್ನು ಕೆಲವರು ಹುಡುಗಿಗೆ ಬಾಯಿಬಿಟ್ಟ ಎಂದರು. ವ್ಯವಹಾರ ಜ್ಞಾನಿಗಳು ಈ ಮದುವೆಯ ಹಿಂದಿನ ಕಥೆ ಏನೋ ಯಾರಿಗೆ ಗೊತ್ತು? ಎಂದು ಮೂಗು ಮುರಿದರು. ಮದುವೆಗೆ ಜಯಂತನ ಮನೆಯವರಾರೂ ಬರಲಿಲ್ಲ. ಕಿಟ್ಟಣ್ಣ ಶಾರದೆಯರು ವರನ

ಕಡೆ ಹಸೆಗೆ ಕೂತರು. ಮಂಜಯ್ಯ ದಂಪತಿಗಳು ಮದುವೆಯ ಮುಂದಾಳಾಗಿ ಕೆಲಸ ಮಾಡಿದರು. ಈ ಶ್ರೀಮಂತ ವಿವಾಹಕ್ಕೆ ಕಲೆಕ್ಟರು, ಇನ್ನಿತರ ಉನ್ನತ, ಗಣ್ಯ ಅಧಿಕಾರಿಗಳು ಬಂದು ವಧೂ-ವರರನ್ನು ಆಶೀರ್ವದಿಸಿದರು.

ಮದುವೆಗೆ ತಾಯಿ ಬಾರದೆ ಹೋದರೂ, ಹೆಂಡತಿಯನ್ನು ತಾನೇ ಕರೆದು ಕೊಂಡು ಒಮ್ಮೆ ಜಯಂತ ತಾಯಿಯ ಮನೆಗೆ ಹೋದ. ತಾಯಿ ವೀರಶೈವ ವಧುವನ್ನು ಕಂಡು, ಮುಖ ಸೊಟ್ಟ ಮಾಡಿ, ಮಗನನ್ನು ಅಗಲಿಸಿದ ಮೋಹಿನಿ ಎಂದು ಬಾಯಿಗೆ ಬಂದಂತೆ ಬೈದು ಹೊರಗಟ್ಟಿದಳು. ಅದೇ ದಿನ ಜಯಂತ ಬಿಡಾರವನ್ನು ಮಾವನ ಮನೆಗೆ ಬದಲಾಯಿಸಿದ. ಶಾಂತಮಲ್ಲಯ್ಯನವರು ಅಡಿಗೆಗೆ ಒಬ್ಬ ಬ್ರಾಹ್ಮಣನನ್ನು ನೇಮಿಸಿ, ಹೆಂಡತಿಯನ್ನು ಅಡಿಗೆ ಕೆಲಸದಿಂದ 'ರಿಟೈರ್' ಮಾಡಿದರು. ಜಯಂತ ಮಾವನ ಮನೆಯಲ್ಲಿ ವೈಭವವಾಗಿ ಇದ್ದರೂ, ತಾಯಿ-ತಮ್ಮಂದಿರನ್ನು ಕೈಬಿಡಲಿಲ್ಲ. ತಿಂಗಳ ಪಗಾರವನ್ನು ತಾಯಿಯ ಕೈಗೆ ಹಾಕಿ, ಅವರ ಸಂಸಾರಕ್ಕೆ ಯಾವ ಕೊರತೆಯಾಗದಂತೆ ನೋಡಿಕೊಳ್ಳುತ್ತಿದ್ದ.

ಶೈಲಜೆಯ ಮದುವೆಯಿಂದ ಶಾರದೆಗೆ ತುಂಬಾ ಸಮಾಧಾನ. ತಮ್ಮೆಲ್ಲರ ಮೊರೆಯನ್ನು ಕೇಳಿ ದೇವರು ಕಣ್ಣುಬಿಟ್ಟು ಶೈಲಜೆಯನ್ನು ಉದ್ಧಾರ ಮಾಡಿದು ದಕ್ಕೆ ಮನದಲ್ಲಿ ಸಾವಿರ ಬಾರಿ ವಂದಿಸಿದಳು. ಮದುವೆಯ ಮನೆಯಲ್ಲಿ ಬೀಗ ರಿಗಿಂತ ಬೀಗರಾಗಿ, ಓಡಾಡಿದ ಅವಳಿಗೆ, ಮದುವೆಯಾದ ಮೇಲೆ ಒಂದು ಬಗೆಯ ನಿಶ್ಶಕ್ತಿ ಕಾಣಿಸಿಕೊಂಡಿತು. ಯಾವ ಕೆಲಸ ಮಾಡಿದರೂ ಸುಸ್ತು. ಕಿಟ್ಟಣ್ಣನ ಕೆಲಸದಲ್ಲಿ ಈಚೆಗೆ ಸ್ವಲ್ಪ ಬದಲಾವಣೆ ನಡೆದಿತ್ತು. ಎರಡನೆಯ ಮಹಾಯುದ್ಧ ಆರಂಭವಾಗಿದ್ದುದರಿಂದ ಪರದೇಶದಿಂದ ಬರುತ್ತಿದ್ದ ಕಾಫೀ ಬೀಜದ ಪ್ರಮಾಣ ಕಡಿಮೆಯಾಯಿತು. ನುರಿತ ವ್ಯಾಪಾರಗಾರರಾದ ಮುದ್ದಣ್ಣನವರು ಕಾಫೀಬೀಜಕ್ಕೆ ಮುಂದೆ ಒಳ್ಳೆಯ ಬೆಲೆ ಬರುವುದೆಂದು ತಮ್ಮ ದಾಸ್ತಾನವನ್ನು ದ್ವಿಗುಣಗೊಳಿಸಲು ಆಶಿಸಿದರು. ಅವರು ಕಿಟ್ಟಣ್ಣನಿಗೆ ಪತ್ರ ಬರೆದು ಅವನಿಗೆ ಹತ್ತು ರೂಪಾಯಿ ಬಡ್ತಿ ಕೊಟ್ಟಿರುವುದಾಗಿ ತಿಳಿಸಿ, ಮಡಿಕೇರಿಯ ಗಡಂಗನ್ನು ನೋಡಿಕೊಳ್ಳುವುದರ ಜೊತೆಗೆ ಕೊಡಗಿನ ಪ್ರಾಂತದಲ್ಲೆಲ್ಲಾ ಸುತ್ತಾಡಿ, ಬೇಸಾಯಗಾರರಿಗೆ ಮುಂಗಡ ಹಣ ಕೊಟ್ಟು ಕಾಫೀ ಬೀಜ ತಮಗೇ ಕೊಡುವಂತೆ ಒಪ್ಪಂದ ಮಾಡಿಕೊಳ್ಳುವಂತೆ ಆಜ್ಞಾಪಿಸಿದರು. ಕಿಟ್ಟಣ್ಣನಿಗೆ

ಊರು ಸುತ್ತುವ ಕೆಲಸವೆಂದರೆ ಬೇಸರ. ಅದರಲ್ಲೂ ಮಲೆನಾಡು ಪ್ರಾಂತ. ಸದಾ ಜಡಿಮಳೆ. ರೋಗಗಳ ಉಪದ್ರವ. ಆದರೂ ವಿಧಿಯಿಲ್ಲದೆ ಒಂದೆರಡು ಊರು ಸುತ್ತಿ ಬಂದ. ಬರುವಾಗ ಜೊತೆಗೆ ಮಲೇರಿಯಾ, ಜ್ವರವನ್ನೂ ಕರೆ ತಂದ.

ಕಿಟ್ಟಣ್ಣ ಬಂದವನೇ ಹಾಸಿಗೆ ಹಿಡಿದು ಬಿಟ್ಟ. ಅದೇ ವೇಳೆಯಲ್ಲಿ ಶಾರ ದೆಯೂ, ಮೈ, ಕೈ ನೋವೆಂದು ಹಾಸಿಗೆ ಹಿಡಿದು ಬಿಟ್ಟಿದ್ದಳು. ಈಗ ಮನೆಯ ಯಜಮಾನಿ ಸುಮಿತ್ರೆ. ಅವಳ ಆರೈಕೆಯಿಂದ ಕಿಟ್ಟಣ್ಣ ಕೆಲವು ದಿನಗಳಲ್ಲಿ ಚೇತರಿಸಿಕೊಂಡರೂ ಶಾರದೆ ಮಾತ್ರ ಚೇತರಿಸಿಕೊಳ್ಳಲಿಲ್ಲ. ಶಾರದೆಯ ಕಾಹಿಲೆ ಇಂಥದೇ ಎಂದು ಹೇಳಲಾಗದ ಕಾಹಿಲೆ. ಪಕ್ಕೆಗಳಲ್ಲಿ, ಎದೆಯಲ್ಲಿ ಚಳುಕು. ತಿಂದ ಅನ್ನ ಮೈಗೆ ಹತ್ತಲಿಲ್ಲ. ಶಾರದೆ ತಿಂಗಳಿಗೇ ಹಂಚಿಕಡ್ಡಿಯಂ ತಾದಳು. ಕಿಟ್ಟಣ್ಣ ಶಾರದೆಯನ್ನು ಡಾಕ್ಟರಿಗೆ ತೋರಿಸಿದ. ಅವರು ಯಾವ ಯಾವುದೋ ಔಷಧಿ ಮತ್ತು ಟಾನಿಕ್ ಕೊಟ್ಟರು. ಹತ್ತೆಂಟು ಇಂಜಕ್ಷನ್ ಕೊಟ್ಟರು. ಯಾವುದೂ ಪ್ರಯೋಜನಕ್ಕೆ ಬರಲಿಲ್ಲ. ಹೊಟ್ಟೆಯಲ್ಲಿ ಏನಾ ದರೂ ಸೇರಿರಬಹುದೆಂದು 'ಎಕ್ಸ್‌ರೇ' ಫೋಟೋ ತೆಗೆದು ನೋಡಿದರು. ಆದರೂ ಶಾರದೆಯ ಕಾಹಿಲೆಯ ಗುಟ್ಟನ್ನು ತಿಳಿಯಲು ಡಾಕ್ಟರಿಂದ ಸಾಧ್ಯವಾಗಲಿಲ್ಲ. ಅವರು ಹತಾಶರಾಗಿ ಮೈಸೂರಿಗೆ ಕರೆದುಕೊಂಡು ಹೋಗಿ ದೊಡ್ಡ ಆಸ್ಪತ್ರೆ ಯಲ್ಲಿ ತೋರಿಸಿಬರಲು ಸೂಚಿಸಿದರು. ಈ ವೇಳೆಗೆ ಶಾರದೆ ತುಂಬಾ ನಿತ್ರಾಣ ಳಾಗಿ ನಾಲ್ಕೈದು ಹೆಜ್ಜೆ ನಡೆಯಲೂ ಅಸಮರ್ಥಳಾಗಿದ್ದಳು.

ಶಾರದೆಯ ಸಖತ್ ಕಾಹಿಲೆಯನ್ನು ಕೇಳಿ ಪಾರ್ವತಮ್ಮ ಶಾರದೆಯ ಮನೆಗೆ ಬಂದರು. ಶಾರದೆಯ ಸ್ಥಿತಿಯನ್ನು ಕಂಡೇ ಅವರಿಗೆ ಗಾಬರಿಯಾ ಯಿತು. ಅವರಿಗೆ ಏನೋ ಸಂಶಯ ತೋರಿತು.

"ನಿನ್ನ ಕಾಹಿಲೆ ಔಷಧಿ ಪಥ್ಯಕ್ಕೆ ಹೋಗೋ ಕಾಹಿಲೆ ಅಲ್ಲಾಂತ ಕಾಣು ತ್ತದೆ ಶಾರದ!" ಎಂದರು ಅನುಮಾನಿಸುತ್ತಾ.

" ಹಾಗಾದರೆ ಇದು ವಾಸಿಯಾಗುವುದೇ ಇಲ್ಲವೇ ?"

" ಹಾಗಲ್ಲ ವಾಸಿಯಾಗುತ್ತೆ............ ಆದರೆ ಡಾಕ್ಟರಿಂದ ಅಲ್ಲ. ನಿನ್ನ ನೋಡಿದ್ರೆ ಯಾರೋ ಮದ್ದೀಡು ಗಿದ್ದೀಡು ಮಾಡಿರೋ ಹಾಗೆ ಕಾಣಿಸುತ್ತೆ ನನಗೆ. " ಎಂದು ಹೇಳಿ ಕೊಡಗಿನಲ್ಲಿ ಮಾಟ, ಮದ್ದು, ಶೂನ್ಯ ಮೊದಲಾದ

ವಮಾಚಾರದ ವಿದ್ಯೆಯಿಂದ ತಮಗೆ ಆಗದವರನ್ನು ಹೇಗೆ ಹಿಂಸಿಸುತ್ತಾರೆ ಎನ್ನು ವುದನ್ನು ಹೇಳಿದರು.

ಶಾರದೆಗೆ ಬೇರೆ ಹೊತ್ತಿನಲ್ಲಾದರೆ ಅವುಗಳಲ್ಲಿ ನಂಬಿಕೆ ಇರುತ್ತಿರಲಿಲ್ಲ. ಅವಳ ಕ್ಷೀಣ ಆರೋಗ್ಯ ಹಾಗೂ ಡಾಕ್ಟರ ವಿಫಲತೆಯಿಂದ ಅದೇ ಇದ್ದರೂ ಇರ ಬಹುದೇನೋ ಎನ್ನುವ ಸಂದೇಹ ಉಂಟಾಯಿತು. ಅದಕ್ಕೆ ತಕ್ಕಂತೆ ಪಾರ್ವ ತಮ್ಮ ಜಯಂತನ ತಾಯಿಯ ಮೇಲೆ ಗುಮಾನಿ ಕಟ್ಟಿದರು. ಆಕೆಗೆ ಶಾರ ದೆಯ ತಲೆ ಕಂಡರೆ ಆಗುತ್ತಿರಲಿಲ್ಲ. ತನ್ನ ಮಗನನ್ನು ಹಾಳು ಮಾಡಿ ಜಾತಿ ಕೆಡಸಿದವಳು ಶಾರದೆ ಎಂದೇ ಅವಳ ಭಾವನೆ. ಆಕೆ ತನ್ನ ಮೇಲೆ ಕೋಪ ತೀರಿಸಿಕೊಳ್ಳಲು ಹೀಗೆ ಮಾಡಿದ್ದಾರೆಯೇ ? "ಆಕೆಯೇ ಇದ್ದರೂ ಇರಬಹುದು. ಅವಳು ಅಂತಹವಳೇ. ಅವಳ ತವರುಮನೆ ಮಾಟಮಂತ್ರಗಳಿಗೆ ಪ್ರಸಿದ್ಧ ವಾದ ಮಲೆಯಾಳ........" ಎಂದು ಪಾರ್ವತಮ್ಮ ಬೇರೆ ಹೇಳಿದರು.

"ಹಾಗಾದರೆ ಇದರಿಂದ ಮುಕ್ತಿಯಿಲ್ಲವೇ " ಎಂದು ಪ್ರಶ್ನಿಸಿದಳು ಶಾರದೆ ಅಳುಕುತ್ತಾ.

"ಇದೆ. ಆದರೆ ಸರಿಯಾದ ಆಸಾಮಿ ಸಿಗಬೇಕು. " ಎಂದು ಹೇಳಿ ತಾನು ಯಾರನ್ನಾದರೂ ಪತ್ತೆ ಹಚ್ಚುವುದಾಗಿ ಆಶ್ವಾಸನವಿತ್ತು ಮನೆಗೆ ತೆರಳಿದರು. ಪಾರ್ವತಮ್ಮನವರಿಗೆ ಯಾವ ವಿಷಯ ಮನಸ್ಸಿಗೆ ಬಂದರೆ ಅದು ಕೂಡಲೇ ನಡೆದು ಹೋಗಬೇಕು. ಅವರು ಅಲ್ಲಿ ಇಲ್ಲಿ ವಿಚಾರಿಸಿ, ನಾಲ್ಕೆಂಟು ದಿನದ ಲ್ಲಿಯೇ ಒಬ್ಬ ಮಂತ್ರವಾದಿಯನ್ನು ಬರಮಾಡಿಕೊಂಡು ಶಾರದೆಯನ್ನು ಅವನಿಗೆ ತೋರಿಸಿದರು. ಅವನು ಇಂತಹ ವಿದ್ಯೆಯಲ್ಲಿ ಆ ಸೀಮೆಗೆಲ್ಲಾ ಸಾಕಷ್ಟು ಪ್ರಸಿದ್ಧಿ ಪಡೆದಿದ್ದ. ಅವನು ತನ್ನ ಹಡಪೆಯಿಂದ ಯಾವುದೋ ಬೇರನ್ನು ತೆಗೆದು, ಯಾವುದೋ ರಸದಲ್ಲಿ ತೇಯಿದು ಕುಡಿಯಲು ಕೊಟ್ಟ. ಅದು ಹೊಟ್ಟೆಗೆ ಬಿದ್ದೊಡನೆಯೇ ಶಾರದೆಗೆ ನಾಲ್ಕೈದು ಬಾರಿ ವಾಂತಿಯಾಯಿತು. ಒಂದು ಸಲ ವಾಂತಿಯಾದಾಗ ನಿಂಬೆಹಣ್ಣಿನಗಾತ್ರದ ಎನೋ ಒಂದು ಕಪ್ಪ ನೆಯ ವಸ್ತು ವಾಂತಿಯೊಡನೆ ಹೊರಬಂತು. ಅದನ್ನು ಕಡ್ಡಿಯಿಂದ ಬೇರ್ಪಡಿ ಸುತ್ತಾ ಮಂತ್ರವಾದಿ ಹೇಳಿದ—

"ನಿಮ್ಮ ನಸೀಬು ಗಟ್ಟಿಯಾಗಿತ್ತು. ಬದುಕಿಕೊಂಡಿರಿ. ನೀವು ಇನ್ನು ಕೆಲವು ದಿನ ಇದನ್ನು ಹೀಗೆಯೇ ಹೊಟ್ಟೆಯಲ್ಲಿ ಇರಲು ಬಿಟ್ಟಿದ್ದರೆ ನಿಮ್ಮ ಕಥೆ

ಮುಗಿಯುತ್ತಿತ್ತು. ಇದು ಅಂತಹ ವಿಷ. ಯಾರೋ ನಿಮಗಾಗದವರು ಮಾಡಿರೋ ಕೆಲಸ ಇದು. ನೀವು ಸಕಾಲದಲ್ಲಿ ಎಚ್ಚತ್ತುಕೊಂಡಿರಿ" ಎಂದು ವ್ಯಾಖ್ಯಾನ ಮಾಡಿದ.

ಶಾರದೆ ಪಾರ್ವತಮ್ಮ ಎಲ್ಲರಿಗೂ ಆ ಮಾತು ನಿಜವೆನಿಸಿತು. ಸುಮಿತ್ರೆ ಗಂತೂ ಸಂತೋಷಾಶ್ಚರ್ಯ. ಶಾರದೆಗೆ ಇನ್ನು ಮೇಲೆ ಭಯವಿಲ್ಲವೆಂದು ಸಂತೋಷ. ನಿಂಬೆಹಣ್ಣಿನ ಗಾತ್ರದ ಆ ಕಪ್ಪು ಪದಾರ್ಥ ಶಾರದೆಗೆ ತಿಳಿಯ ದಂತೆ ಹೇಗೆ ಹೊಟ್ಟೆಗೆ ಸೇರಿತು ಎಂದು ಆಶ್ಚರ್ಯ.

"ಯಾರೋ ನೋಡಿಕೊಂಡಿದ್ದವರು, ಯಾವ ಮಾಯದಲ್ಲೋ ಎಲೆ ಅಡಿಕೆಯಲ್ಲೋ, ತಿಂಡಿಯಲ್ಲೋ ಹೊಟ್ಟೆಗೆ ಸೇರಿಸಿಬಿಟ್ಟಿದ್ದಾರೆ" ಎಂದು ಮಂತ್ರ ವಾದಿ ಸಮಜಾಯಿಷಿ ಹೇಳಿದ. ಸುಮಿತ್ರೆಗೆ ಈ ಉತ್ತರ ತೃಪ್ತಿಪಡಿಸಲಿಲ್ಲವಾ ದರೂ ತೆಪ್ಪಗಾದಳು.

ಶಾರದೆಯ ಸಂಸಾರದಲ್ಲಿ ಹಠಾತ್ತನೆ ಕಾಣಿಸಿಕೊಂಡಿದ್ದ ಅನಾರೋಗ್ಯದ ಕಾರ್ಮೋಡ ಚದುರಿತು. ಶಾರದೆಗೆ ಒಳ್ಳೆಯ ಹಾಲು ತುಪ್ಪ ಸಿಕ್ಕುವುದಿಲ್ಲ ವೆಂದು, ಪಾರ್ವತಮ್ಮನವರು ತಮ್ಮ ಮನೆಯಿಂದಲೇ, ಹಾಲು ತುಪ್ಪಗಳನ್ನು ತಿಂಗಳ ಕಾಲ ಕಳುಹಿಸಿಕೊಟ್ಟರು. ಅವರೆಲ್ಲರ ಆರೈಕೆಯಿಂದ ಒಂದೆರಡು ತಿಂಗಳ ಲ್ಲಿಯೇ ಶಾರದೆ ಮೊದಲಿನಂತೆ ಆದಳು. ಈ ಮಧ್ಯೆ ಮುದ್ದಣ್ಣನವರಿಂದ ಒಂದು ಪತ್ರ ಬಂದಿತ್ತು. ಕಿಟ್ಟಣ್ಣ ಊರು ಸುತ್ತುವ ಕೆಲಸ ತನ್ನಿಂದಾಗ ದೆಂದು ಬರೆದಿದ್ದಕ್ಕೆ ಮುದ್ದಣ್ಣನವರು "ಕೊಂಚದಿನ ಎರಡೂ ನೋಡಿಕೋ— ಮುಂದಿನ ಸೀಸನ್ ವೇಳೆಗೆ ಬೇರೆ ಏರ್ಪಾಡು ಮಾಡೋಣ" ಎಂದು ಬರೆದಿ ದ್ದರು. ಮುದ್ದಣ್ಣನವರು ಏನು ಏರ್ಪಾಡು ಮಾಡುತ್ತಾರೋ ಎಂದು ಕಿಟಣ್ಣ ಒಂದೆರಡು ತಿಂಗಳು ನೋಡಿದ. ಮುದ್ದಣ್ಣನವರು ತನ್ನ ಸ್ಥಳಕ್ಕೆ ಬೇರೊಬ್ಬರನ್ನು ನೇಮಿಸಲು ಯೋಚಿಸುತ್ತಿದ್ದಾರೆ ಎನ್ನುವ ಸುದ್ದಿ ಹೇಗೋ ಕಿಟ್ಟಣ್ಣನ ಕಿವಿ ಮುಟ್ಟಿತು. ಅವರು 'ಹೋಗು' ಎಂದು ಹೇಳುವ ಮುನ್ನ 'ಹೊರಟೆ' ಎಂದು ಹೇಳುವುದು ಮರ್ಯಾದೆಯಾಗಿ ಕಾಣಿಸಿತು. ಶಾರದೆ ಯೊಡನೆ ಈ ಪ್ರಸ್ತಾಪ ಮಾಡಿದ. ಅವಳು ಗಂಡನ ಅಭಿಪ್ರಾಯಕ್ಕೆ ಪುಷ್ಟಿ ಕೊಟ್ಟಳು. ಅವಳು ಪುಷ್ಟಿ ಕೊಡಲು ಕಾರಣ ಸುಮಿತ್ರೆಯ ಪರೀಕ್ಷೆಯ ಫಲಿ ತಾಂಶ ಕೆಲವು ದಿನಗಳ ಹಿಂದೆ ಪ್ರಕಟವಾಗಿತ್ತು. ಸುಮಿತ್ರೆ ಮೊದಲನೆಯ

ದರ್ಜೆಯಲ್ಲಿ ಪಾಸಾಗಿದ್ದಳು. ಇನ್ನು ಅವಳ ವಿದ್ಯಾಭ್ಯಾಸ ಮಡಿಕೇರಿಯಲ್ಲಿ ಮುಂದುವರಿಯುವಂತಿರಲಿಲ್ಲ. ಬೆಂಗಳೂರು, ಮೈಸೂರು-ಮಂಗಳೂರುಗಳಿಗೆ ಹೋಗಬೇಕು. ಕಾಲೇಜಿನಲ್ಲಿ ಕಲಿಯುವುದಿದ್ದರೆ, ಸುಮಿತ್ರೆಯ ವಿಷಯವನ್ನೇನು ಮಾಡಬೇಕೆಂದು ಆಲೋಚಿಸುತ್ತಿರುವಾಗಲೇ—ಕಿಟ್ಟಣ್ಣ ತನ್ನ ನಿರ್ಧಾರ ಹೇಳಿದುದು. ಅಲ್ಲದೆ ಮಡಿಕೇರಿಯನ್ನು ಬಿಟ್ಟುಹೋಗಲು ಮತ್ತೊಂದು ಕಾರಣ, ಶಾರದೆ ಹವಾ ಬದಲಿಸಬೇಕೆಂದು ಡಾಕ್ಟರರು ಸಲಹೆ ಮಾಡಿದ್ದರು. ಹೀಗಾಗಿ ಮೂರು ವಿಷಯಗಳು ಮುಪ್ಪುರಿಗೊಂಡು ಮಡಿಕೇರಿಯನ್ನು ಬಿಟ್ಟು ಹೊರಡುವ ವಿಷಯ ತೀರ್ಮಾನವಾಯಿತು. ಅದು ಸರಿ. “ಹೋಗುವುದು ಎಲ್ಲಿಗೆ ?”

“ನಮ್ಮ ಸುಮಿತ್ರೆಗೆ ಕಾಲೇಜು ಇರುವ ಊರಾಗಬೇಕು” ಎಂದಳು ಶಾರದೆ.

“ನಿನ್ನ ಆರೋಗ್ಯಕ್ಕೆ ಅನುಕೂಲವಾದ ಹವೆಯುಳ್ಳ ಊರಾಗಬೇಕು” ಎಂದ ಕಿಟ್ಟಣ್ಣ.

“ಕೈತುಂಬ ಸಂಬಳದ ಕೆಲಸ ಬೇಗ ಸಿಕ್ಕುವ ಊರಾಗಬೇಕು” ಎಂದಳು ಸುಮಿತ್ರೆ.

ಅದು ಯಾವ ಊರು ?

ಯಾಕೋ ಮೈಸೂರು ಸೀಮೆಯ ವ್ಯಾಮೋಹ ಅವರನ್ನು ಆ ಕಡೆಗೇ ಎಳೆಯಿತು. ಅವರು ಅಲ್ಲಿಗೇ ಹೊರಡಲು ನಿಶ್ಚಯಿಸಿದರು.

ಅಂತೂ ಮೈಸೂರಿಗೆ ಹೊರಡುವ ವಿಷಯ ನಿರ್ಧರವಾಯಿತು. ಶಾರದೆ ತಮ್ಮೂರನ್ನು ಬಿಡುವ ವಿಷಯವನ್ನು ಕೇಳಿ ಪಾರ್ವತಮ್ಮ, ಶೈಲಜೆಯರು ಮೊದಲು ಒಪ್ಪಲಿಲ್ಲ. ಕಡೆಗೆ ನಿರ್ವಾಹವಿಲ್ಲದೆ ಒಡಂಬಟ್ಟರು. ಪಾರ್ವತಮ್ಮ ಶಾರದೆಯ ಮನೆಯವರನ್ನು ಊಟಕ್ಕೆ ಕರೆದು ಭಾರಿ ಔತಣವೇರ್ಪಡಿಸಿದರು.

“ಶಾರದೆ ನಿನಗೆ ಮೈಸೂರು ಬೇಸರವಾದರೆ, ಇಲ್ಲಿಗೆ ಬಂದು ಬಿಡಮ್ಮ. ಇದು ನಿನ್ನ ತವರುಮನೆ ಎಂದು ತಿಳಿದುಕೋ” ಎಂದು ಹೇಳಿ ಹನಿಗೂಡಿದ್ದ ಕಣ್ಣನ್ನು ಒರೆಸಿಕೊಂಡರು. ಅವರಿಗೆ ಶಾರದೆಯನ್ನು ಕಳುಹಿಸಿ ಕೊಡುವುದು ಮಗಳನ್ನು ಅತ್ತೆಯ ಮನೆಗೆ ಕಳುಹಿಸುವಂತೆ ಆಗಿತ್ತು. ಅಷ್ಟೇ ದುಃಖ.

ಶೈಲಜೆ ಶಾರದೆಯನ್ನು ಮನೆಗೆ ಕರೆಸಿಕೊಂಡು, ಹೊಸ ಸೀರೆಯುಡಿಸಿ

ನಮಸ್ಕರಿಸಿದಳು. ಅವಳು ಈಗ ತಿಂಗಳ ಬಾಣಂತಿ. ಮಗುವೆಲ್ಲಾ ಜಯಂತನ ಹಾಗೇ. ಆದರೆ ಹೆಣ್ಣು. ಅವಳಿಗೆ ಜಯಶ್ರೀ ಎಂದು ಹೆಸರಿಟ್ಟಿದ್ದರು. ಅವಳನ್ನು ಎತ್ತಿಕೊಂಡು ಶಾರದೆ ಮುದ್ದಾಡುತ್ತಿರುವಾಗ, ಶೈಲಜೆ ಏನನ್ನೋ ನೆನಪಿಗೆ ತಂದುಕೊಂಡು ಹೇಳಿಡಳು. "ಚಿಕ್ಕಮ್ಮ ನನ್ನ ಸಕಲ ಸೌಭಾಗ್ಯವೂ ನಿನ್ನ ವರ ಪ್ರಸಾದ ಚಿಕ್ಕಮ್ಮಾ...."

ಈ ಮಾತನ್ನು ಕೇಳಿ ಶಾರದೆ, "ನನ್ನ ವರಪ್ರಸಾದವೇನು? ಎಲ್ಲವೂ ಭಗವಂತನ ಕೃಪೆ!" ಎಂದಳು. ಶಾರದೆಯ ಕೈಯಲ್ಲಿದ್ದ ಕೂಸು ಜಯಶ್ರೀ ಹೌದೆಂಬಂತೆ ನಕ್ಕಳು!

## ೭

ಕಿಟ್ಟಣ್ಣ ಮೈಸೂರಿಗೆ ತುಂಬಾ ಆಶಾವಾದಿಯಾಗಿ ಬಂದಿದ್ದ. ಮಂಜಯ್ಯನವರು ಮೈಸೂರಿನಲ್ಲಿ ತಮಗೆ ಪರಿಚಯವಿದ್ದ ಅನೇಕರಿಗೆ ಕಿಟ್ಟಣ್ಣನಿಗೊಂದು ಕೆಲಸ ಕೊಡಿಸಲು ನೇರವಾಗಬೇಕೆಂದು ಪರಿಚಯ ಪತ್ರಗಳನ್ನು ಬರೆದುಕೊಟ್ಟಿದ್ದರು. ಆ ಪತ್ರಗಳ ಮುಖೇನ ಶೀಘ್ರವಾಗಿ ತನಗೊಂದು ಕೆಲಸ ಸಿಕ್ಕಬಹುದೆಂದು ಕಿಟ್ಟಣ್ಣ ಭಾವಿಸಿದ್ದ. ಆದರೆ ಪರಿಚಯ ಪತ್ರಗಳನ್ನು ಓದಿಕೊಂಡ ಮಹನೀಯರು "ಆಗಲಿ, ಖಾಲಿ ಬಿದ್ದಾಗ ತಿಳಿಸುತ್ತೇವೆ" ಎಂದು ಜಾರಿಕೊಂಡರು. ಕಿಟ್ಟಣ್ಣನೂ ಅವುಗಳನ್ನು ನಂಬಿಕೊಳ್ಳದೆ ಸರ್ಕಾರಿ ಹಾಗೂ ಖಾಸಗೀ ಸಂಸ್ಥೆಗಳನ್ನು ಭೇಟಿ ಮಾಡಿ ಬಂದನು. ಎಲ್ಲಿಯೂ ಕೆಲಸ ಅನುಕೂಲವಾಗಲಿಲ್ಲ. ತಾನು ಯಾವುದಾದರೊಂದು ನೌಕರಿ ಹುಡುಕಿ ಅನಂತರ ಸಂಸಾರ ಕರೆತರಬೇಕಾಗಿತ್ತೆಂದು ಒಂದೆರಡು ಬಾರಿ ಕಿಟ್ಟಣ್ಣನಿಗೆ ಅನಿಸದಿರಲಿಲ್ಲ! ಮಡಿಕೇರಿಯನ್ನು ಬಿಟ್ಟುಬರುವ ಹುರುಪಿನಲ್ಲಿ ಕೆಲಸದ ಏರ್ಪಾಡು ಮುಂದಾಗಿ ಮಾಡಿಕೊಳ್ಳದಿದ್ದರೂ ಎಲ್ಲವೂ ಸುಸೂತ್ರವಾಗಿಯೇ ನಡೆಯುವುದೆಂದು ಅವನು ಭಾವಿಸಿದ್ದ. ಅದರಂತೆ ಕಿಟ್ಟಣ್ಣನ ಸಂಸಾರಕ್ಕೆ ಅನುಕೂಲವಾದ ಮನೆಯೊಂದು ಶಿವರಾಮು ಪೇಟೆಯಲ್ಲಿ ಸಿಕ್ಕಿತ್ತು. ಸುಮಿತ್ರೆಯೂ ಮಹಾರಾಣಿ ಕಾಲೇಜಿಗೆ ಸೇರಿದ್ದಳು. ಎಲ್ಲವೂ ಅವರೆಂದುಕೊಂಡಿದ್ದಂತೆ ನಡೆದಿತ್ತು. ಸರಿಯಾದ ಒಂದು

ನೌಕರಿ ಸಿಕ್ಕಿ ಬಿಟ್ಟರೆ ಅವರು ಗೆದ್ದರು !

ಕಿಟ್ಟಣ್ಣನಂತಹ ನಿಸ್ಪೃಹನಿಗೆ ಕೆಲಸ ಸಿಗಲು ಬಂತೆ? ಮಂಜಯ್ಯನ ವರ ಪತ್ರ ತನ್ನಿಂದಾಗುವ ಉಪಕಾರ ಮಾಡಿತು. ಶಿವರಾಮ ಪೇಟೆಯಲ್ಲಿ ಅನೇಕ ವರ್ಷಗಳಿಂದಲೂ ಇದ್ದ ಶ್ರೀ ಅನ್ನಪೂರ್ಣೇಶ್ವರೀ ಫಲಹಾರ ಮಂದಿರದ ವರು ತಮ್ಮ ಹೋಟಲು ಕಟ್ಟಡವನ್ನು ವಿಸ್ತರಿಸಿ 'ಬೋರ್ಡಿಂಗ್' ಹಾಗೂ 'ಲಾಡ್ಜಿಂಗ್' ನ್ನು ಹೊಸದಾಗಿ ಆರಂಭಿಸಿದರು. ಅದನ್ನೆಲ್ಲಾ ನೋಡಿಕೊಳ್ಳಲು ಒಬ್ಬ ವಿದ್ಯಾವಂತನ ಆಗತ್ಯವಿತ್ತು. ಫಲಹಾರ ಮಂದಿರದ ಮಾಲೀಕ ಮಂಜ ಯ್ಯನವರಿಗೆ ಆಪ್ತಮಿತ್ರರಾಗಿದ್ದುದರಿಂದ ಆತ ಕಿಟ್ಟಣ್ಣನನ್ನು ಆ ಕೆಲಸಕ್ಕೆ ತೆಗೆ ದುಕೊಳ್ಳಲು ನಿಶ್ಚಯಿಸಿದರು. ಕಿಟ್ಟಣ್ಣನೊಡನೆ ಮಾತನಾಡಿ ಅವನಿಗೆ ಅತಿಥಿ ಗಳ ಊಟ ವಸತಿಗಳ 'ಮ್ಯಾನೇಜ್‌ಮೆಂಟ್' ಪಟ್ಟ ಕಟ್ಟಿದರು.

ಶಾರದೆ ಆ ವಠಾರಕ್ಕೆ ಬಂದ ತಿಂಗಳೊಪ್ಪತ್ತಿಗೆ ಅಲ್ಲಿನ ನಿವಾಸಿಗಳೆಲ್ಲರ ಪರಿಚಯ, ಪ್ರೀತಿ, ವಿಶ್ವಾಸಗಳನ್ನು ಗಳಿಸಿಕೊಂಡಳು. ಆ ಮನೆಯೊಂದು ಪುರಾತನ ಛತ್ರ. ಈಗ ಅದನ್ನು ಒಡೆದು ಎಂಟು ಹತ್ತು ಸಂಸಾರಗಳಿಗೆ ಅನು ಕೂಲಿಸುವಂತೆ ವಿಂಗಡಿಸಿದ್ದರು. ಆ ವಠಾರದ ಕೆಲವು ಹೆಣ್ಣುಮಕ್ಕಳು ಶಿವ ರಾಮ ಪೇಟೆಯಲ್ಲಿದ್ದ ಭಗಿನೀ ಸಮಾಜಕ್ಕೆ ಮೆಂಬರುಗಳಾಗಿದ್ದರು. ಅವರೊಂ ದಿಗೆ ಶಾರದೆಯೂ ಒಂದೆರಡು ಬಾರಿ ಭಗಿನೀ ಸಮಾಜಕ್ಕೆ ಹೋಗಿ ಬಂದಳು. ಇಂತಹ ಸಂಸ್ಥೆಯೊಂದಿಗೆ ಸಂಪರ್ಕವಿದ್ದರೆ ಒಳ್ಳೆಯದೆಂದು ಅವಳೂ ಅದರ ಸದಸ್ಯಳಾದಳು.

ಆ ಸಮಾಜಕ್ಕೆ ಬರುತ್ತಿದ್ದ ಹೆಂಗಸರಲ್ಲಿ ಮುಕ್ಕಾಲು ಪಾಲು ನಿವೃತ್ತ ಅಧಿಕಾರಿಗಳ ಮನೆಯ ಹೆಂಗಸರು, ಹೈಸ್ಕೂಲು, ಕಾಲೇಜಿನ ವಿದ್ಯಾರ್ಥಿನಿ ಯರೇ ಆಗಿದ್ದರು. ಆ ಸಂಸ್ಥೆಯ ಮುಖ್ಯ ಉದ್ದಿಶ್ಯ ಮನರಂಜನೆ. ಸಂಸಾರದ ಕರೆಕರೆಯನ್ನು ಕ್ಷಣಕಾಲವಾದರೂ ಮರೆಯಲು ಬಯಸುವ ಹೆಂಗಸರಿಗೆ ಅದೊಂದು ವಿಹಾರ ಕೇಂದ್ರ. ಅಲ್ಲಿ ಬ್ಯಾಡ್‌ಮಿಂಟನ್, ಪಿಂಗ್‌ಪಾಂಗ್, ಕೇರಂ ಮೊದಲಾದ ಆಟಪಾಟಗಳಲ್ಲದೆ ಒಂದು ಸಣ್ಣ ವಾಚನಾಲಯ ಹಾಗೂ ಒಂದು ಪುಸ್ತಕ ಭಂಡಾರವೂ ಇತ್ತು. ಈಚೆಗೆ ಹೊಲಿಗೆ, ಹಣಿಗೆ, ಸಂಗೀತದ ತರಗತಿಗಳ ಜೊತೆಗೆ ಹಿಂದಿ ತರಗತಿಗಳನ್ನು ನಡೆಯಿಸುತ್ತಿದ್ದರು. ಸಮಾಜಕ್ಕೆ ಬೇಕಾಗುತ್ತಿದ್ದ ಹಣವನ್ನು ಸಮಾಜದ ಸದಸ್ಯರೇ ವರ್ಷಕ್ಕೊಮ್ಮೆ ವಿವಿಧ

ವಿನೋದಾವಳಿ ಮೊದಲಾದ ಮನರಂಜನೆಗಳಿಂದ ಕೂಡಿಸುತ್ತಿದ್ದರು. ಅಲ್ಲದೆ ಸರಕಾರದವರೂ ಕೊಂಚ 'ಗ್ರಾಂಟ್' ಕೊಡುತ್ತಿದ್ದರು.

ಶಾರದೆ ಭಗಿನೀ ಸಮಾಜದ ಸದಸ್ಯೆಯಾದ ಕೆಲವು ದಿನಗಳಲ್ಲಿಯೇ ಅದರ ಅಧಿಕಾರೀ ವರ್ಗದ ಚುನಾವಣೆ ನಡೆಯಿತು. ಈ ಬಾರಿ ಕಾರ್ಯದರ್ಶಿ ಸ್ಥಾನಕ್ಕೆ ತುಂಬಾ ಪೈಪೋಟಿಯಿತ್ತು. ಮಹಾರಾಜ ಕಾಲೇಜಿನ ವಿದ್ಯಾರ್ಥಿನಿಯಾದ ಮಿಸ್ ಲೀಲಾವತಿಗೂ, ಮ್ಯಾಜಿಸ್ಟ್ರೇಟರ ಹೆಂಡತಿ ಯಶೋದಾಬಾಯಿಗೂ ಕಾರ್ಯದರ್ಶಿ ಸ್ಥಾನದ ಮೇಲೆ ಕಣ್ಣು! ಮೊದಲಿನಿಂದಲೂ ಅವರಿಬ್ಬರಿಗೂ ವೈಮನಸ್ಸಿತ್ತು. ಕಳೆದ ಬಾರಿ ಇಬ್ಬರೂ ಚುನಾವಣೆಗೆ ಸ್ಪರ್ಧಿಸಿ, ತನ್ನ ಗಂಡನ ಅಧಿಕಾರ ಗೌರವಗಳಿಂದ ಯಶೋದಾಬಾಯಿಯೇ ಕಾರ್ಯದರ್ಶಿಯಾಗಿ ಚುನಾಯಿತಳಾಗಿದ್ದಳು. ಅವಳು ತನ್ನ ಅಧಿಕಾರ ಅವಧಿಯಲ್ಲಿ ಕೇವಲ ಆಫೀಸರ್ ಹೆಂಡತಿಯರಿಗೆ ಸತ್ಕಾರ ಕೂಟಗಳನ್ನು ಏರ್ಪಡಿಸಿ, ಸಮಾಜದ ಹಣವನ್ನು ಪೋಲು ಮಾಡಿದಳೆಂದು ಮಿಸ್ ಲೀಲಾವತಿಯ ಆಕ್ಷೇಪಣೆ. ಭಗಿನೀ ಸಮಾಜ ಖಾಸಗಿ ಹೆಣ್ಣುಮಕ್ಕಳ ಸಮಾಜವಾದುದರಿಂದ ಅವರ ಹಿತರಕ್ಷಣೆಗೆ, ಅನುಕೂಲಕ್ಕೆ ಹಣವನ್ನು ಬಳಿಸಬೇಕಲ್ಲದೆ, ಸತ್ಕಾರಕೂಟಗಳಿಗಲ್ಲವೆಂದು ಅವಳ ವಾದ. ಲೀಲಾವತಿ ಕಮ್ಯೂನಿಸ್ಟಳೆಂದೂ, ಅವಳು ಅಧಿಕಾರಕ್ಕೆ ಬಂದರೆ ಸಮಾಜವನ್ನು ತನ್ನ ಪಾರ್ಟಿಯ ಬಾಲಂಗೋಚಿ ಮಾಡಿಕೊಳ್ಳುತ್ತಾಳೆಂದೂ, ಸರಕಾರಕೊಡುವ ಗ್ರಾಂಟಿಗೆ ಮಣ್ಣುಬೀಳಿಸುತ್ತಾಳೆಂದೂ, ಆದಕ್ಕಾಗಿ ಅವಳನ್ನು ಯಾವ ಅಧಿಕಾರ ಸ್ಥಾನಕ್ಕೆ ಬರಗೊಳಿಸಬಾರದೆಂದೂ, ಯಶೋದಾಬಾಯಿಯ ದೂರು. ಹೀಗಾಗಿ ಈ ಬಾರಿ ಚುನಾವಣೆ ಬಲು ಬಿರುಸಾಯಿತು.

ಇಬ್ಬರೂ ಈಗಿನಿಂದಲೇ ಓಟಿಗಾಗಿ ಪ್ರಚಾರ ಮಾಡಲು ಆರಂಭಿಸಿದರು. ಇವರಿಬ್ಬರ ಸ್ಪರ್ಧೆಯನ್ನು ಕಂಡು ಶಾರದೆಗೆ ನಗುವೂ ಬಂತು. ಮನಸ್ಸಿಗೆ ಖೇದವೂ ಆಯ್ತು. ಸೇವಾಕಾಂಕ್ಷೆಯೇ ತಮ್ಮ ಗುರಿಯಾಗಿದ್ದರೆ ಅಧಿಕಾರಗಳಿಗೇಕೆ ಇವರು ಬಡಿದಾಡಬೇಕು? ಎಂಬುದು ಅವಳಿಗೆ ಅರ್ಥವಾಗಲಿಲ್ಲ. ಇವರಿಬ್ಬರ ಕಚ್ಚಾಟದಲ್ಲಿ ಸಮಾಜದ ಕೆಲಸ ಮಾತ್ರ ಸೊನ್ನೆ! ಇದು ಖಂಡಿತ ಎಂದುಕೊಂಡಳು ಶಾರದೆ. ಅವಳಿಗೆ ಈ ಎಲ್ಲ ರಾಜಕೀಯದಿಂದ ಹೊರಗೆ ಇರಲು ಇಷ್ಟವಾಗಿತ್ತು. ಆದರೆ ಶಾರದೆಯ ಬಾಯಿಯಲ್ಲಿ ಹೆಣ್ಣಿನ ಮಂಟಪದ ಇತಿಹಾಸ ಕೇಳಿದ್ದ ಸದಸ್ಯೆಯರು ಶಾರದೆಯನ್ನೇ ಕಾರ್ಯದರ್ಶಿ ಸ್ಥಾನಕ್ಕೆ ನಿಲ್ಲು

ವಂತೆ ಪ್ರೇರೇಪಿಸಿದರು. ಒಮ್ಮೆ ಕಾರ್ಯದರ್ಶಿಯಾಗಿ ಕೈಸುಟ್ಟುಕೊಂಡಿದ್ದ ಅವಳಿಗೆ, ಅವುಗಳೊಂದೂ ಹಿಡಿಸದೆ, ತಾನು ಸಾಮಾನ್ಯ ಸದಸ್ಯೆಯಾಗಿದ್ದುಕೊಂಡೇ, ಸಮಾಜಕ್ಕೆ ತನ್ನಿಂದಾಗುವ ಸೇವೆ ಸಲ್ಲಿಸುವುದಾಗಿ ತಿಳಿಸಿದಳು. ಶಾರದೆಯ ಮಾತನ್ನು ಕೇಳಿ ಅವರಿಗೆಲ್ಲ ಅವಳ ಬಗ್ಗೆ ಆಶ್ಚರ್ಯವೂ ಅಭಿಮಾನವೂ ಉಂಟಾದವು.

ಚುನಾವಣೆಯ ದಿನ ಬಂತು. ಓಟುಗಿಟ್ಟಿಸುವ ನೆವದಲ್ಲಿ ಇಬ್ಬರು ಉಮೇದುವಾರರು ಒಬ್ಬರನ್ನೊಬ್ಬರು ಬಾಯಿಗೆ ಬಂದಂತೆ ದೂಷಿಸಿದರು. ತಾನು ಕೊಟ್ಟ ತನ್ನ ಹೆಸರಿನ ಪ್ರಚಾರ ಪತ್ರವನ್ನು ಲೀಲಾವತಿಯ ಕಡೆಯವಳು ಮುಖಕ್ಕೆ ಎಸೆದು ಅಪಮಾನ ಮಾಡಿದಳೆಂದು ಯಶೋದಾಬಾಯಿ ಲೀಲಾವತಿಯ ಮೇಲೆ ಜಗಳಕ್ಕೆ ಬಂದಳು. ಇದು ದೊಡ್ಡ ರಗಳೆಗೆ ಇಟ್ಟುಕೊಂಡಿತು. ಇಬ್ಬರು ಪ್ರತಿಸ್ಪರ್ಧಿಗಳಿಗೆ ಕೈ ಕೈ ಮಿಲಾಯಿಸುವ ಹೊತ್ತು ಬಂತು. ಉಳಿದ ಸದಸ್ಯೆಯರಿಗೆ ಇದೊಂದು ವಿನೋದ ನಾಟಕ. ಅವರು ಇಬ್ಬರನ್ನೂ ಉದ್ರೇಕಗೊಳಿಸುತ್ತಿದ್ದರೇ ಹೊರತು ಜಗಳ ಬಿಡಿಸಲು ಹೋಗಲಿಲ್ಲ. ಇದನ್ನು ಕಂಡು ಶಾರದೆ ತಾನಾಗಿಯೇ ಮುಂದೆ ಬಂದು, ಸಮಾಜದ ಹಿರಿಯ ವ್ಯಕ್ತಿಗಳೇ ಹೀಗೆ ಸಣ್ಣ ಹುಡುಗಿಯರಂತೆ ಜಗಳಕ್ಕೆ ನಿಂತರೆ, ನೋಡಿದವರು ನಗುವರೆಂದೂ, ಅದು ಅವರ ಘನತೆಗೆ ಕುಂದೆಂದೂ, ಇಬ್ಬರಿಗೂ ಸಮಯೋಚಿತ ಬುದ್ಧಿವಾದ ಹೇಳಿ, ಅಂದಿನ ಚುನಾವಣೆ ಗದ್ದಲವಿಲ್ಲದೆ ಶಾಂತವಾಗಿ ನಡೆಯುವಂತೆ ಮಾಡಿದಳು.

ಶಾರದೆ ತನ್ನ ದೊಡ್ಡತನದಿಂದಾಗಿ, ಇಬ್ಬರು ಉಮೇದುವಾರರ ಪ್ರೀತಿ, ವಿಶ್ವಾಸಗಳಿಗೆ ಪಾತ್ರವಾದ ಮೇಲೆ, ಓಟುಗಳನ್ನು ಎಣಿಸುವ ಜವಾಬ್ದಾರಿಗೂ, ಅವಳೇ ಹೆಗಲು ಕೊಡಬೇಕಾಯಿತು. ಓಟುಗಳು ಎಣಿಕೆಯಾದಾಗ ಇಬ್ಬರಿಗೂ ಸರಿಸಮಾನವಾದ ಓಟುಗಳು ಬಂದಿದ್ದವು. ಈಗ ಮತ್ತೆ ಇಕ್ಕಟ್ಟಿಗೆ ಬಂತು. ಇದನ್ನು ಶಾರದೆಯೇ ಬಗೆ ಹರಿಸಬೇಕಾಯಿತು. ಅದೃಷ್ಟ ಪರೀಕ್ಷೆ (ಲಾಟ್ಸ್) ಯ ಮೇಲೆ ಕಾರ್ಯದರ್ಶಿಯನ್ನು ಗೊತ್ತು ಮಾಡಬೇಕೆಂದು ಶಾರದೆ ಹೇಳಿದ ಮಾತಿಗೆ, ಇಬ್ಬರೂ ಒಪ್ಪಿಕೊಂಡರು.

ಇಬ್ಬರ ಹೆಸರುಗಳನ್ನು ಸಣ್ಣ ಚೀಟಿಗಳಲ್ಲಿ ಬರೆದು ಸುರುಳಿ ಸುತ್ತಿ ಒಂದು ಮಗುವಿನ ಕೈಲಿ ಎತ್ತಿಸಿದಾಗ, ಯಶೋದಾಬಾಯಿಗೇ ಮತ್ತೆ ಕಾರ್ಯದರ್ಶಿನಿಯ

ಪಟ್ಟಿ ಸಿಕ್ಕಿತು. ಅವಳಿಗೆ ಬಂದಷ್ಟೇ ತನಗೂ ಓಟುಗಳು ಬಂದಿರುವುದರಿಂದ ಸೋಲನ್ನು ಒಪ್ಪಿಕೊಳ್ಳಲು ಮನಸ್ಸು ಬಾರದೆ, ಲೀಲಾವತಿ ಅಸಮಾಧಾನ ಮಾಡಿಕೊಂಡಳು. ಈ ಬಗೆಯ ಆಯ್ಕೆ ತನ್ನ ಮನಸ್ಸಿಗೆ ಬರಲಿಲ್ಲವೆಂದು ತೋರಿಸಲು ಮುಖವನ್ನು ಗಂಟಿಕ್ಕಿ ಕುಳಿತಳು. ಅದನ್ನು ಅರಿತುಕೊಂಡ ಶಾರದೆ, "ಪ್ರಧಾನ ಕಾರ್ಯದರ್ಶಿನಿ ಯಶೋದಾಬಾಯಿಯೇ ಆಗಲಿ, ನೀವು ಸಹಕಾರ್ಯದರ್ಶಿಯಾಗಬಹುದಲ್ಲ!" ಎಂದು ಸೂಚಿಸಿದಳು. ಯಶೋದಾ ಬಾಯಿಗೆ ಲೀಲಾವತಿಯನ್ನು ಹತ್ತಿರ ಸೇರಿಸಲು ಇಚ್ಛೆಯಿರದಿದ್ದರೂ, ಸಮಾಜ ದಲ್ಲಿ ಅವಳ ಗುಂಪೂ ಸಾಕಷ್ಟು ದೊಡ್ಡದಾಗಿಯೇ ಇದ್ದುದರಿಂದಲೂ, ಶಾರದೆ ಹೇಳುವಳೆನ್ನುವ ಕಾರಣದಿಂದಲೂ, ಮನಸ್ಸಿಲ್ಲದ ಮನಸ್ಸಿನಿಂದ ಈ ಸೂಚನೆಗೆ ಒಪ್ಪಿಕೊಂಡಳು.

ಲೀಲಾವತಿಗೆ ತಾನು ಯಶೋದಾಬಾಯಿಯ ಕೈಕೆಳಗೆ ಕಾರ್ಯದರ್ಶಿನಿ ಯಾಗುವುದಕ್ಕಿಂತ ಸಾಮಾನ್ಯ ಸದಸ್ಯೆಯಾಗಿರುವುದೇ ಲೇಸೆಂದು ತೋರಿ ಈ ಸೂಚನೆಯನ್ನು ಒಪ್ಪಿಕೊಳ್ಳಲಿಲ್ಲ. ಆದರೆ ಶಾರದೆ ಬಿಡಬೇಕಲ್ಲ! ತನ್ನ ಬುದ್ಧಿ ಚಮತ್ಕಾರಗಳನ್ನು ಖರ್ಚುಮಾಡಿ, ಲೀಲಾವತಿಯನ್ನು ಒಪ್ಪಿಸಿದಳು. ಶಾರ ದೆಯ ಪ್ರಯತ್ನದಿಂದ, ಅನೇಕ ವರ್ಷಗಳಿಂದ ದ್ವೇಷಾಸೂಯೆಗಳ ಹುತ್ತವಾ ಗಿದ್ದ ಎರಡು ಬಣಗಳು ಒಂದಾದವು. ಸಮಾಜದ ಕೆಲಸ ಸುಸೂತ್ರವಾಗಿ ನಡೆಯುವಂತಾಯಿತು. ಈ ಎಲ್ಲ ಕಾರಣಗಳಿಂದ ಶಾರದೆ ಒಂದೆರಡು ತಿಂಗ ಳಲ್ಲೇ ಭಗಿನೀ ಸಮಾಜದಲ್ಲಿ ತುಂಬಾ ಪ್ರಭಾವಶಾಲಿಯಾದ ವ್ಯಕ್ತಿಯಾಗಿ ಬಿಟ್ಟಳು. ಅವಳು ಸಮಾಜದಲ್ಲಿ ಸಾಮಾನ್ಯ ಸದಸ್ಯೆಯಾಗಿದ್ದರೂ, ಅವಳನ್ನು ಕೇಳದೆ, ಅವಳ ಗಮನಕ್ಕೆ ತರದೆ, ಸಮಾಜದ ಯಾವ ಚಟುವಟಿಕೆಗಳು ನಡೆ ಯುದಾದವು. ಶಾರದೆ ಎಂದರೆ ಎಲ್ಲರಿಗೂ ಅಚ್ಚುಮೆಚ್ಚು. ಅವಳ ಮಾತೆಂದರೆ ಎಲ್ಲರಿಗೂ ಗೌರವ. ಕೆಲವರಿಗೆ ಶಾರದೆ ಆತ್ಮೀಯ ಗೆಳತಿಯಾದರೆ, ಕೆಲವರಿಗೆ ಶಾರದೆ ತಾಯಿಯಾಗಿದ್ದಳು. ಎಲ್ಲರೂ ಅವಳೊಂದಿಗೆ ತಮ್ಮ ಗೃಹಕೃತ್ಯ ಹೇಳಿ ಕೊಳ್ಳುವರು. ಅತ್ತೆ ಸೊಸೆಯರ ಜಗಳದಿಂದ ತೊಡಗಿ, ತಮ್ಮ ದಾಂಪತ್ಯಜೀವ ನದ ಆಗು ಹೋಗುಗಳ ತನಕ ಎಲ್ಲವನ್ನೂ ನಿಸ್ಸಂಕೋಚದಿಂದ ಹೇಳಿಕೊಳ್ಳು ವರು. ಶಾರದೆಗೆ ಈಗ ಹೆಣ್ಣಿನ ಬಾಳಿನ ಸುಖದುಃಖಗಳ ವಿರಾಟ್ ದರ್ಶನ ಆಗತೊಡಗಿತು.

ಒಂದು ದಿನ ಶಾರದೆ ಇದ್ದ ವಠಾರದಲ್ಲಿ, ಹಯಗ್ರೀವಾಚಾರಿಯ ಮನೆಯಲ್ಲಿ ಬೆಳಗಿನ ಜಾವದಲ್ಲೇ ಗದ್ದಲವೆದ್ದಿತು. ಹಯಗ್ರೀವಾಚಾರಿಯ ಪತ್ನಿ ಲಕ್ಷ್ಮಿಂಬಾಯಿ, ನಾದಿನಿಯ ಮೇಲೆ ಒಂದೇ ಸಮನೆ ರೇಗುತ್ತಿದ್ದರು. ಅದು ನಿತ್ಯದ ಗೋಳು! ಆದರೆ ಇಂದು ಏಕೋ ಅದು ಭೀಷಣರೂಪ ತಳೆದಿತ್ತು. ಕೂಗು ಆರ್ಭಟಗಳು ಸೂರು ಹಾರಿಸುತ್ತಿತ್ತು. ಅತ್ತಿಗೆ ನಾದಿನಿಯನ್ನು ತನಗೆ ಬರುವ ಭಾಷೆಗಳಲ್ಲಿ ಬೈಯ್ಯುತ್ತಿದ್ದಳು. ಅಶ್ಲೀಲವೆನಿಸುವ ಅವಾಚ್ಯ ಶಬ್ದಗಳು ಧಾರಾಕಾರವಾಗಿ ಹೊರಬೀಳುತ್ತಿದ್ದವು. ದೇವರ ಪೂಜೆಗೆಂದು ಕುಳಿತಿದ್ದ ಆಚಾರಿಗೆ, ಬೈಗಳ ಅಷ್ಟೋತ್ತರ ನಾಮ ಕೇಳಿ ಸೈರಣೆ ಮೀರಿ ಪೂಜೆಯನ್ನು ಬಿಟ್ಟೆದ್ದು ಬಂದು ಅಂಗಳವನ್ನು ಸಾರಿಸುತ್ತಿದ್ದ ತಂಗಿಯನ್ನು ಏನೆಂದು ವಿಚಾರಿಸದೆ ದಬದಬನೆ ಬಡಿದನು--ಇನ್ನಾದರೂ ಹೆಂಡತಿಯ ಸಿಟ್ಟು ಇಳಿದು ಬೈಗಳು ನಿಂತಾವೆಂದು. ಅಲ್ಲಿಗೂ ಹೆಂಡತಿಯ ಬೈಗಳು ನಿಲ್ಲಲಿಲ್ಲ.

“ಈ ಹಾದರಗಿತ್ತಿಗೆ ಮಾನವೊಂದು ಕೇಡು! ಏನೂ ಅರಿಯದ ಗುಮ್ಮಣ್ಣನ ಹಾಗೆ ಕುಕ್ಕುರ ಬಡೆದಿದ್ದಾಳಲ್ಲಾ! ಇಂಥ ಚಿತ್ರಾಂಗಿ ರಂಡೇನ ಮನೆ ಸೇರಿಸಿದ್ದೇ ತಪ್ಪು! ನಾನು ಹೊಡಕೊಂಡೆ ಈ ನಾಯೀನ ಸೇರಿಸಬೇಡಿ ಅಂತ. ನನ್ನ ಮಾತು ಎಲ್ಲಿ ನಡೆಯುತ್ತೆ ? ಈಗ ಬೀದಿ ಜನವೆಲ್ಲ ನಿಮ್ಮ ತಂಗಿ ಇವಳು ಎಂತ ಕೈತೋರಿಸಿ ಉಗುಳುತ್ತಾರೆ. ಉಗುಳಿಸಿಕೊಳ್ಳಿ ” ಎಂದು ನಾದಿನಿ ಹಾಗೂ ಗಂಡನನ್ನು ಸಂಬೋಧಿಸಿ ನಾಲಿಗೆಯನ್ನು ಹರಿಯಬಿಟ್ಟಳು ಲಕ್ಷ್ಮಿಂಬಾಯಿ.

ಶಾರದೆ, ಬೇಗಾಗೆದ್ದು ಏನು ಅನಾಹುತವೋ ಎಂದು ಅವರ ಮನೆಗೆ ಬಂದಳು. ಲಕ್ಷ್ಮಿಂಬಾಯಿ ನಾದಿನಿ ಕಥೆ ಹೇಳಿದಳು.

“ಆ ದಿನ ರುಕ್ಮಿಣಿ ತನ್ನ ಮಾಮೂಲು ಹೊತ್ತಿಗೆ ಕಸ ಮುಸುರೆ ಮಾಡಲು ಎದ್ದಳಂತೆ. ಅಡಿಗೆಯ ಮನೆಯ ಕಸವನ್ನು ಎತ್ತಿ ಬೀದಿಯ ಬಳಿಯಲ್ಲಿದ್ದ ಕಸದ ಡಬ್ಬಿಗೆ ಹಾಕುವಾಗ ಅಲ್ಲಿ ಯಾರೋ ಅವಳ ಪರಿಚಿತ ವ್ಯಕ್ತಿಯೊಬ್ಬ ಅವಳಿಗಾಗಿ ಕಾದಿದ್ದನಂತೆ. ಅವನನ್ನು ಕಂಡು ರುಕ್ಮಿಣಿ ತಾನು ಬಂದ ಕೆಲಸವನ್ನು ಮರೆತು ಅವನೊಂದಿಗೆ ಚಕ್ಕಂದ ಹೊಡೆಯುತ್ತಾ ನಿಂತಳಂತೆ. ಬಹುಶಃ ಅದು ಅವಳ ನಿತ್ಯದ ಪರಿಪಾಠವೋ ಏನೋ ಯಾರಿಗೆ ಗೊತ್ತು ? ಆ ದಿನ ಅಕಸ್ಮಾತ್ತಾಗಿ ಲಕ್ಷ್ಮಿಂಬಾಯಿ ಹೊರಗೆ ಬಂದಳಂತೆ. ನೋಡುತ್ತಾಳೆ!

ರುಕ್ಮಿಣಿ ತನ್ನ ಕೃಷ್ಣನ ತೋಳ್ತೆಕ್ಕೆಯಲ್ಲಿ ಮೈಮರೆತು ನಿಂತಿದ್ದಾಳೆ! ಲಕ್ಷ್ಮಿಂ ಬಾಯಿಯನ್ನು ಕಂಡೊಡನೆ ಆ ಕಳ್ಳ ಕೃಷ್ಣ ಮೆಲ್ಲನೆ ಜಾರಿಕೊಂಡನಂತೆ! ರುಕ್ಮಿ ಣಿಯ ಕಳ್ಳತನ ಸಿಕ್ಕಿ ಹೋಯಿತಂತೆ! ಸರಿ "ಕಳ್ಳ ರಂಡೆ ನಿನ್ನ ಆಟವೆಲ್ಲಾ ಕಂಡುಕೊಂಡೆ. ಒಳಗೆ ಬಾ. ಇಂದು ನಿನ್ನ ಹುಟ್ಟಿದ ಹಬ್ಬ ಮಾಡ್ತೀನೆ" ಎಂದು ರುಕ್ಮಿಣಿಯ ಜಡೆಯನ್ನು ಎಳೆದುಕೊಂಡು ಒಳಗೆ ಬಂದರು. ಒಳಗೆ ಬಂದೊಡ ನೆಯೇ ಸಹಸ್ರನಾಮ ಪೂಜೆಗೆ ಆರಂಭವಾಯಿತು. ಈ ಕಥೆಯಲ್ಲಿ ಎಷ್ಟು ನಿಜ, ಎಷ್ಟು ಸುಳ್ಳು ಎಂಬುವನ್ನು ರುಕ್ಮಿಣಿಯೇ ಹೇಳಬೇಕು!"

ಶಾರದೆ ಲಕ್ಷ್ಮಿಂಬಾಯಿಯಿಂದ ವಿಷಯವೆಲ್ಲವನ್ನು ತಿಳಿದು ರುಕ್ಮಿಣಿಯ ಮೇಲೆ ಹುಸಿಕೋಪ ತಾಳಿ, ಅವಳ ಗತಿ ಕಾಣಿಸಲು ಕುಳಿತಿದ್ದ ಆ ದಂಪತಿ ಗಳನ್ನು ಸಮಾಧಾನ ಪಡಿಸಿದಳು.

"ಏನೋ ಪ್ರಾಯದ ಹುಡುಗಿ. ತಿಳಿಯದೆ ತಪ್ಪು ಮಾಡಿದಳು. ತಾಯಿ ಸಮಾನರಾದ ನೀವು ಅದನ್ನು ಮನ್ನಿಸಬೇಕು" ಎಂದು ರುಕ್ಮಿಣಿಯಪರ ಪ್ರಾರ್ಥಿಸಿಕೊಂಡದ್ದೂ ಆಯಿತು. ಈ ಮಾತುಗಳನ್ನು ಕಿಂಚಿತ್ತೂ ಕಿವಿಗೆ ತಾರವೆ ಲಕ್ಷ್ಮಿಂಬಾಯಿ ಒದರುತ್ತಲೇ ಇದ್ದಳು.

"ಈ ಬಾರಿ ಇವಳಿಗೆ ಸರಿಯಾದ ಪಾಠ ಕಲಿಸಲೇ ಬೇಕು. ನಾವು ಇದು ವರೆವಿಗೂ ಅಯ್ಯೋ ಪಾಪ, ಸಣ್ಣ ಪ್ರಾಯದ ಹುಡುಗಿ. ಗಂಡನ್ನ ಕಳೆದುಕೊಂಡಿ ದ್ದಾಳೆ. ಇವಳ ಮೇಲೆ ಕೈ ಮಾಡಬಾರ್ದು. ಇವಳ ತಲೆ ಬೋಳಿಸಿ, ಕೆಂಪು ಸೀರೆ ಉಡಿಸಬಾರ್ದು ಅಂತ ಇದ್ದರೆ, ಇವಳು ಇಷ್ಟು ಸೊಕ್ಕಿಕೊಂಡಳೇ? ಇಂದು ಇವಳ ಸೊಕ್ಕು ಇಳಿಸ್ದೆ ಹೋದ್ರೆ ನಾನು ಲಕ್ಷ್ಮಿಂಬಾಯಿನೇ........"

ಎಂದು ಕೂಗಾಡಿ ಕೊಂಚ ಹೊತ್ತು ಸುಮ್ಮನಿದ್ದು ಮತ್ತೆ ಆರಂಭಿಸಿದಳು.

"ಇವಳ ನಡತೆಯ ವಿಷಯದಲ್ಲಿ ನನಗೆ ಮೊದಲಿಂದ ಸಂಶಯಾನೇ. ಅದೇನು ಇವಳ ಒನಪು! ವಯ್ಯಾರ! ಸೂಳೆಯನ್ನು ನಾಚಿಸುವ ಸಿಂಗಾರ! ತಾನು ಗಂಡ ಸತ್ತ ಮುಂಡೆ ಅಂತ ಇವಳ ತಲೆಗೆ ಬಂದ್ರೆ ತಾನೇ? ಇವಳ ಚರ್ಯೆ ನೋಡೇ ಇವಳ ಅತ್ತೆ ಮನೆಯೋರು ಮಗನನ್ನು ಕಿತ್ತುಕೊಂಡು ಮನೆ ಯಿಂದ ಅಟ್ಟಿರೋದು!

ಶಾರದೆಗೆ ಲಕ್ಷ್ಮಿಂಬಾಯಿಯ ಮಾತುಗಳು ಹೇವರಿಗೆ ತಂದುವು. ಒಂದೇ ಸಮನೆ ನಡೆವ ಭೀಭತ್ಸನೆ ಕೇಳಿ ಸುಮ್ಮನಿರಲಾಗಲಿಲ್ಲ.

"ಲಕ್ಷ್ಮಂಬಾಯಿ ! ನಿಮ್ಮ ದಮ್ಮಯ್ಯ ಸುಮ್ಮನಿರಿ. ಬೆಳಗಾಗೆದ್ದು ನೀವು ಹೀಗೆ ಕೂಗಾಡಿದ್ರೆ ಬೀದೀಲಿ ಹೋಗೋ ಜನವೆಲ್ಲಾ ಗುಂಪು ಕಟ್ಟಿಕೊಂಡು ಬಂದಾರು ! ನಿಮ್ಮ ರುಕ್ಮಿಣಿಗೆ ಮಾನ ಹೋದ್ರೆ........ನಿಮ್ಮ ಮಾನ ಹೋ–ದ್ಹಾಗೇ ಅಲ್ಲವೇ ?" ಎಂದು ಹೇಳಿದಳು.

ಲಕ್ಷ್ಮಂಬಾಯಿಗೆ ಶ್ರಮ ಸುಸ್ತಾಯಿತೋ ! ಅಥವಾ ಶಾರದೆಯ ಮಾತು ಮನಸ್ಸಿಗೆ ನಾಟಿತೋ ! ಅಂತೂ ಆಕೆಯ ವಾಗ್ಬಾಣಗಳು ನಿಂತವು.

ಆ ಸಂಜೆ ನಿಜಾಂಶವೇನೆಂದು ತಿಳಿಯಲು ಶಾರದೆ ರುಕ್ಮಿಣಿಯನ್ನು ಬೇರೆ ಯಾಗಿ ಕರೆದು ಕೇಳಿದಳು. ರುಕ್ಮಿಣಿ ತಾನು ಯಾವನೋ ಪರಪುರುಷನೊಂ ದಿಗೆ ಮಾತನಾಡುತ್ತಾ ನಿಂತಿದ್ದು ನಿಜವೆಂದು ಒಪ್ಪಿಕೊಂಡಳು. ಆದರೆ ಅವನ ಅಪ್ಪುಗೆಯಲ್ಲಿ ತಾನಿದ್ದ ಸಂಗತಿ ಮಾತ್ರ ಸುಳ್ಳು ! ಎಲ್ಲವೂ ಲಕ್ಷ್ಮಂಬಾಯಿಯ ಸ್ವಕಪೋಲ ಕಲ್ಪನೆ !

ರುಕ್ಮಿಣಿಯ ಕಥೆ ಕೇಳಿ ಶಾರದೆಗೆ ತುಂಬಾ ಸಹಾನುಭೂತಿ ಉಂಟಾ ಯಿತು. ರುಕ್ಮಿಣಿ ಕೇವಲ ಆರು ತಿಂಗಳ ಹಿಂದೆ ಗಂಡನನ್ನು ಕಳೆದುಕೊಂಡ ಬಾಲವಿಧವೆ. ವಯಸ್ಸು ಇನ್ನೂ ಇಪ್ಪತ್ತು ಕೂಡಾ ಇಲ್ಲ. ಅತ್ತೆಯ ಮನೆಯ ವರು ಜಮೀನ್ದಾರರು. ರುಕ್ಮಿಣಿ ಸಕೇಶಿಯಾಗಿ ಇರಲು ಹಠ ಮಾಡಿದುದೇ ಅವಳ ಅತ್ತೆಯ ಮನೆಯವರಿಗೆ ಅವಳ ನಡತೆಯ ಬಗ್ಗೆ ಸಂದೇಹ ಉಂಟು ಮಾಡಿತು. ಅವರು ಹೆಚ್ಚು ವಿಚಾರಿಸುವ ಗೋಜಿಗೆ ಹೋಗದೆ, ಅವಳ ಇಬ್ಬರು ಮಕ್ಕಳನ್ನು ಕಿತ್ತುಕೊಂಡು ಮನೆಯಿಂದ ಹೊರದಬ್ಬಿದರು.

ತಾನು ಅತ್ತೆಯ ಮನೆಯಲ್ಲಿದ್ದರೆ, ತನ್ನ ಮೇಲೆ ಮಿಥ್ಯಾರೋಪ ಬರುವು ದರ ಜೊತೆಗೆ ತನ್ನ ಕೂದಲಿಗೂ ಸಂಚಕಾರ ಬರುವುದೆಂದು ಹೆದರಿ, ಮಕ್ಕ ಳನ್ನು ಅಲ್ಲೇ ಬಿಟ್ಟು ಅಣ್ಣನ ಮನೆಗೆ ಬಂದಿದ್ದಳು. ಇಲ್ಲಿಗೆ ಬಂದ ಕೆಲವು ತಿಂಗಳು ರುಕ್ಮಿಣಿ ಅನ್ಯರ ಮನೆ ಹೊಸಲು ತುಳಿದಿರಲಿಲ್ಲ. ಪರಪುರುಷರ ಕಡೆಗೆ ಕಣ್ಣೆತ್ತಿ ನೋಡಿರಲಿಲ್ಲ. ಆದರೂ ಅತ್ತಿಗೆಗೆ ಅವಳ ಮೇಲೆ ಸಂದೇಹ ! ಅದಕ್ಕೆ ತಕ್ಕಂತೆ ಅವಳ ಜೀವನದಲ್ಲಿ ಹಠಾತ್ತಾಗಿ ಯಾವುದೋ ಒಂದು ಹೊಂಗನಸಿನ ಬೀಜ ಬಿತ್ತಲ್ಪಟ್ಟಿತ್ತು. ಬಂಬೂ ಬಜಾರಿನಲ್ಲಿ ರೂಂ ಮಾಡಿಕೊಂಡಿದ್ದ ಕಾಲೇಜ್ ವಿದ್ಯಾರ್ಥಿಯೊಬ್ಬನ ಪರಿಚಯ ರುಕ್ಮಿಣಿಗೆ ಹೇಗೋ ಆಗಿ, ಗೆಳೆತನ ಉಂಟಾಯಿತು. ಅವರು ಆಗಾಗ್ಗೆ ಒಟ್ಟಿಗೆ ಸೇರಿ ಚಕ್ಕಂದ ಹೊಡೆಯುತ್ತಿದ್ದರು.

ಅದಕ್ಕೂ ಮೀರಿದ ಸಾಹಸ ಕೃತ್ಯಕ್ಕೆ ಅವರು ಈತನಕ ಹೋಗಿರಲಿಲ್ಲ. ಆದರೆ ಲಕ್ಷ್ಮಂಬಾಯಿ ಮಾತ್ರ ಅವಳ ಬಗ್ಗೆ ಏನೇನೋ ಕಂಡುಕೊಂಡಳು. ಏನೇನೋ ದಂತಕಥೆ ಕಟ್ಟಿ ಬಿಟ್ಟಳು.

"ರುಕ್ಮಿಣಿ, ನೀನು ಮಾಡುತ್ತಿರುವ ಕೆಲಸ ಸರಿಯೆಂದು ನಿನಗನಿಸುವುದೆ?" ಎಂದಳು ಶಾರದೆ.

ಈ ಪ್ರಶ್ನೆಗೆ ರುಕ್ಮಿಣಿ ನಿರುತ್ತರಳಾದಳು. ಅವಳ ಮನಸ್ಸಿನ ತಳಮಳ ಕಂಡು ಶಾರದೆ ಉತ್ತರವನ್ನು ಊಹಿಸಿಕೊಂಡಳು.

"ನಿನಗೆ ವಿಧವೆಯ ಸಂಯಮವಿಲ್ಲದಿದ್ದರೆ ನೀನು ಯಾಕೆ ಮತ್ತೊಮ್ಮೆ ಮದುವೆಯಾಗಬಾರದು?........ವಿಧವೆಯ ಸೋಗಿನಲ್ಲಿದ್ದುಕೊಂಡು ಏಕೆ ಈ ಬಗೆಯ ಆತ್ಮವಂಚನೆ ಮಾಡಿಕೊಳ್ಳಬೇಕು?"

"ಬೇರೆ ಮದುವೆ?........ಈ ಮಾತು ಅಣ್ಣ ಅತ್ತಿಗೆ ಕೇಳಿದರೆ ನನ್ನನ್ನು ಜೀವಸಹಿತ ಸುಟ್ಟುಬಿಟ್ಟಾರು. ಅವರು ಅಂತಹ ಆಚಾರಶೀಲ ಜನ!"

"ಹಾಗೆ ತಿಳಿದಿದ್ದೂ ನೀನೇಕೆ ಇಲ್ಲಿರುವೆ?"

"ಹೋಗುವುದಾದರೂ ಎಲ್ಲಿಗೆ? ನನಗೆ ಈ ಅಣ್ಣನ ವಿನಹ ಬೇರೆ ಬಂಧುಗಳಿಲ್ಲ!" ಎಂದು ಕಣ್ಣೀರು ಹಾಕಿದಳು, ರುಕ್ಮಿಣಿ.

"ನಿನಗೊಬ್ಬ ಸರಿಯಾದ ಗಂಡ ಸಿಗುವತನಕ ನೀನು ಯಾವುದಾದರೂ ಅಬಲಾಶ್ರಮಕ್ಕೆ ಏಕೆ ಸೇರಿಕೊಳ್ಳಬಾರದು? ನೀವು ಹೋಗುವುದಿದ್ದರೆ ಹಿಂಗಣೆಯಲ್ಲಿ ಪಾರ್ವತಿಬಾಯಿ ಆಠವಲೆ ಸ್ಥಾಪಿಸಿರುವ ವಿಧವಾಶ್ರಮಕ್ಕೆ ಬರೆದು ವಸತಿ ಕಲ್ಪಿಸುತ್ತೇನೆ. ನಿನಗೆ ಹೆಚ್ಚಿನ ಓದು-ಬರಹಗಳಲ್ಲಿ ಆಸಕ್ತಿಯಿದ್ದರೆ ಅಲ್ಲಿನ ಮಹಿಳಾ ವಿದ್ಯಾಪೀಠಕ್ಕೆ ಸೇರಿಕೊಳ್ಳಬಹುದು!"

"ಆಗಲಿ, ವಿಚಾರ ಮಾಡಿ ತಿಳಿಸುತ್ತೇನೆ."

ರುಕ್ಮಿಣಿ ಯಾವನೋ ಪರಪುರುಷನೊಡನೆ ಮಾತನಾಡುತ್ತಾ ನಿಂತುದನ್ನು ಕಂಡಲಾಗಾಯಿತು ಲಕ್ಷ್ಮಂಬಾಯಿಗೆ ರುಕ್ಮಿಣಿಯ ಕೂದಲಿನ ಮೇಲೆ ಕಣ್ಣು! ಮಾರನೆಯ ದಿನ ಗಂಡನಿಗೆ ಹೇಳುವ ರೀತಿಯಲ್ಲಿ ಹೇಳಿ, ಮನವನ್ನು ಒಲಿಸಿಕೊಂಡು ಒಬ್ಬ ನಾಯಿಂದನನ್ನು ಮನೆಗೆ ಬರಮಾಡಿಕೊಂಡಳು. ಅವನನ್ನು ಕಂಡೇ ರುಕ್ಮಿಣಿ ತತ್ತರಿಸಿದಳು. ತನ್ನ ಸಕಲ ಸೌಭಾಗ್ಯವೆನಿಸಿದ್ದ ತುರುಬಿಗೆ ಸಂಚಕಾರ ಬರುವುದನ್ನು ಕಂಡು ಅವಳ ಎದೆ ಪುಟಹಾರಿತು.

ಏನು ಮಾಡಲೂ ತೋಚದೆ ಚೆಪ್ಪಾಗಿ ಕುಳಿತುಬಿಟ್ಟಳು. ಹೊರಗೆ ನಾಯಿಂದ ತನ್ನ ಕ್ಷೌರದ ಕತ್ತಿಯನ್ನು ಮಸೆದು ಸರಿಮಾಡಿ, ರುಕ್ಮಿಣಿಗಾಗಿ ಕಾದು ಕುಳಿತ. ರುಕ್ಮಿಣಿಗೆ ತಪ್ಪಿಸಿಕೊಳ್ಳಲು ಬೇರೆ ಉಪಾಯ ಕಾಣದೆ ಹಜಾರದಲ್ಲಿ ಇದ್ದ ಕಂಬವನ್ನು ಅಪ್ಪಿಕೊಂಡು ಕುಳಿತಳು. ಜಪ್ಪಯ್ಯ ಎಂದರೂ ಅಲ್ಲಿಂದ ಕದಲಲಿಲ್ಲ. ಅವಳನ್ನು ನಾಪಿತನಿಗೆ ಒಪ್ಪಿಸಿ ವಿರೂಪಗೊಳಿಸಲು ಮಾಡಿದ ಅಣ್ಣ-ಅತ್ತಿಗೆಯ ಪ್ರಯತ್ನವೆಲ್ಲ ನಿಷ್ಫಲವಾಯಿತು. ಹಯಗ್ರೀವಾಚಾರಿಗೆ ತಂಗಿಯ ಮೊಂಡುತನ ಕಂಡು, ಸಿಟ್ಟು ಬಂದು, ಕಂಬ ಹಿಡಿದಿದ್ದ ಕೈಗೆ ನಾಲ್ಕು ಬಾರಿಸಿ, ಅವಳನ್ನು ಅನಾಮತ್ತು ಎತ್ತಿಕೊಂಡು ಹೋಗಿ, ನಾಯಿಂದನ ಮುಂದೆ ಕುಕ್ಕಿದ. ಬಿದ್ದ ಪೆಟ್ಟಿಗೆ ರುಕ್ಮಿಣಿ ಕಿಟಾರನೆ ಚೀರಿದಳು. ಆ ವಠಾರದ ಜನವೆಲ್ಲ ಹೊರಗೆ ಬಂದರು. ಶಾರದೆ ಕಿಟ್ಟಣ್ಣ ವಿಷಯವನ್ನು ಗ್ರಹಿಸಿ, ಹಯಗ್ರೀವಾಚಾರಿಯನ್ನು ಅಂದು ಆಡಿ, ನಾಯಿಂದ ಕೈಯಿಂದನ ರುಕ್ಮಿಣಿಯನ್ನು ಬಿಡಿಸಿದರು. “ ನಮ್ಮ ಮನೆಯಲ್ಲಿ ನಾವು ಬೇಕಾದ್ದು ಮಾಡಿಕೊಳ್ಳುತ್ತೇವೆ. ನಿಮಗೆ ಅವೆಲ್ಲಾ ಏಕೆ?” ಎಂದು ಲಕ್ಷ್ಮಂಬಾಯಿ ಕೇಳಿದ್ದಕ್ಕೆ ಶಾರದೆ, “ ಹಾಗೆಂದು ಹೇಳಿಕೊಂಡು ಅವಳ ಕತ್ತನ್ನು ಕತ್ತರಿಸಿ ಬಿಡಿ!” ಎಂದು ರಣಗರ್ಜನೆ ಹಾಕಿದಳು. ರುಂಡ ಮುಂಡನಕ್ಕಾಗಿ ಬಂದಿದ್ದ ನಾಯಿಂದ ಈ ಗದ್ದಲವನ್ನು ಕಂಡು, ಹೆದರಿ, ಅವರ ತಂಟೆಯೂ ಬೇಡ, ಅವರ ಸಂಭಾವನೆಯೂ ಬೇಡವೆಂದು ಮಾತಿಲ್ಲದೆ ಅಲ್ಲಿಂದ ಕಾಲ್ತೆಗೆದ.

ಆದಿನವೆಲ್ಲ ರುಕ್ಮಿಣಿ ಅಣ್ಣನ ಮನೆಗೆ ಹೋಗಲಿಲ್ಲ. ಅಣ್ಣ ಮನೆಗೆ ಬರಸಿದರೆ ತಾನೇ? ಆದಿನ ಶಾರದೆಯ ಮನೆಯಲ್ಲಿ ಅವಳು ಆಸರೆ ಹೊಂದಿದಳು.

ಕೆಲವು ದಿನ ಕಳೆದವು. ಎಲ್ಲರ ಮನಸ್ಸಿನ ಗಾಯ ಮಾಗಿ ರುಕ್ಮಿಣಿ ಅಣ್ಣನ ಇಚ್ಛೆಯ ವಿರುದ್ಧ ಮನೆಗೆ ಬಂದು ಮೊದಲಿನಂತೆ ಇರತೊಡಗಿದಳು. ಲಕ್ಷ್ಮಂಬಾಯಿಯಾಗಲೀ, ಹಯಗ್ರೀವಾಚಾರಿಯಾಗಲೀ, ರುಕ್ಮಿಣಿಯ ಬಗ್ಗೆ ಏನೆಂದು ವಿಚಾರಿಸಲಿಲ್ಲ. ಎಲ್ಲರೂ ಅವಳ ಬಗ್ಗೆ ಮೌನ ತಾಳಿದ್ದರು. ಅವರ ಮೌನ ರುಕ್ಮಿಣಿಗೆ ಮಾತಿಗಿಂತ ಭಯಂಕರವಾಯಿತು. ಅವರ ಮನಸ್ಸಿನ ಕಾರಾಗಾರ ಏನೋ ಯಾರಿಗೆ ಗೊತ್ತು?

ಒಂದು ದಿನ ರಾತ್ರೆ— ರುಕ್ಮಿಣಿಗೆ ಕೆಲಸದಿಂದ ದಣಿದು ನಿಪ್ರೆಯ ಅಮಲಿ

ನಲ್ಲಿ ಮೈಮರೆತು ಎಚ್ಚರವಿಲ್ಲದೆ ಬಿದ್ದಿದ್ದಳು. ಲಕ್ಷ್ಮೀಬಾಯಿ ಸಣ್ಣಗಿದ್ದ ದೀಪವನ್ನು ದೊಡ್ಡದು ಮಾಡಿ, ಗಂಡನನ್ನು ಎಚ್ಚರಿಸಿದಳು. ಗಂಡ ಆಕಳಿಸುತ್ತಾ ಎದ್ದು ಕುಳಿತ. ಲಕ್ಷ್ಮೀಬಾಯಿ ಎದ್ದು ಕಪಾಟಿನಿಂದ ಏನನ್ನೋ ತಂದು, ಗಂಡನ ಕೈಗಿತ್ತು, ರುಕ್ಮಿಣಿ ಮಲಗಿದ್ದ ಕಡೆಗೆ ಗಂಡನನ್ನು ಕರೆದುಕೊಂಡು ಹೋದಳು. ಗಂಡ ಕೆಲವು ಕಾಲ ಹಿಂದುಮುಂದು ತುಳಿದ. ಹೆಂಡತಿಯ ನಿಷ್ಠುರವಾದ ಮುಖ ಅವನನ್ನು ಹೆದರಿಸಿತು. 'ಹೂಂ........ಕೆಲಸ ಸಾಗಲಿ!' ಕ್ಷಣಕಾಲವಲ್ಲಿ, ನಡೆಯಬೇಕಾಗಿದ್ದ 'ಕೆಲಸ' ನಡೆದು ಹೋಯಿತು. 'ಸದ್ಯ ಗೆದ್ದೆ' ಎಂದು ನಿಟ್ಟುಸಿರು ಬಿಡುತ್ತಾ ಗಂಡ ಹೆಂಡತಿಯ ಕೈಗೆ, ಯಾವುದೋ ಕಪ್ಪು ಪದಾರ್ಥವನ್ನು ಹಾಕಿ, ಹಾಸಿಗೆಯಲ್ಲಿ ಮುಸುಕಿಟ್ಟು ಮಲಗಿದ. ಹೆಂಡತಿಯೂ ಮುಸುಕಿಟ್ಟು ಮಲಗಿದಳು. ಗಂಡನ ಹಾಸಿಗೆಯಿಂದ ಪಶ್ಚಾತ್ತಾಪದ ಉದ್ಗಾರ ಬರುತ್ತಿದ್ದರೆ, ಹೆಂಡತಿಯ ಹಾಸಿಗೆಯಿಂದ ಸಂತೋಷದ ಉದ್ಗಾರ!

ಬೆಳಗಾಯಿತು. ಕೆದರಿದ್ದ ಕೂದಲನ್ನು ಸರಿಪಡಿಸಿಕೊಳ್ಳಲು ರುಕ್ಮಿಣಿ ಮುಡಿಗೆ ಕೈ ಹಾಕಿದಳು. ಮುಡಿ! ಇನ್ನೆಲ್ಲಿಯ ಮುಡಿ! ರಾತ್ರಿ ತಾನೇ ಅವಳ ಸೌಂದರ್ಯ ಸಂಪತ್ತಿನ ಸೂರೆ ನಡೆದಿತ್ತು!

"ಅಯ್ಯೋ" ಎಂದು ಅಬ್ಬರಿಸುತ್ತಾ, ಹಾಸಿಗೆಯ ಮೇಲೆ ಎಳೆಯ ಮಗುವಿನಂತೆ, ಅಳುತ್ತಾ ಹೊರಳಿದಳು. ಅವಳಿಗೆ ಕೂದಲು ಹೋದ ದುಃಖಕ್ಕಿಂತಲೂ, ತನ್ನನ್ನು ಮೋಸ ಪಡಿಸಿ ಕೂದಲನ್ನು ಕತ್ತರಿಸಿದರಲ್ಲಾ ಎಂದು ದುಃಖ.

ರುಕ್ಮಿಣಿ ಅತ್ತಳು. ಎದೆ ಬಿರಿಯುವಂತೆ ಅತ್ತಳು. ಅಣ್ಣ ಅತ್ತಿಗೆ ಏನೆಂದು ವಿಚಾರಿಸಲಿಲ್ಲ.

ಇನ್ನು ಇಲ್ಲಿದ್ದರೆ ತನ್ನ ಪ್ರಾಣಕ್ಕೂ ಸುರಕ್ಷಿತವಿಲ್ಲವೆಂದುಕೊಂಡು ತನ್ನ ದೆಸ್ಸುವ ಒಂದೆರಡು ಸೀರೆಯ ತುಂಡುಗಳನ್ನು ತೆಗೆದುಕೊಂಡು, ನೇರ ಶಾರದೆಯ ಮನೆಗೆ ಬಂದು ನಡೆದ ಕಥೆಯನ್ನು ಹೇಳಿದಳು. ಶಾರದೆ ರುಕ್ಮಿಣಿಯನ್ನು ಹಲವು ರೀತಿಯಲ್ಲಿ ಸಂತೈಸಿದಳು.

"ನಾನಿಲ್ಲಿ ಕ್ಷಣಕಾಲ ನಿಲ್ಲಲಾರೆ ಶಾರದಮ್ಮ. ಆ ವಿಧವಾಶ್ರಮಕ್ಕೆ ಹೋಗಿಬಿಡುತ್ತೇನೆ. ಮೊದಲು ಅಲ್ಲಿಗೆ ಕಾಗದ ಹಾಕಿ" ಎಂದು ಗೋಗರೆದಳು ರುಕ್ಮಿಣಿ.

ಶಾರದೆ ಅಂತೆಯೇ ಮಾಡಿದಳು.

ರುಕ್ಮಿಣಿ ವಿಧವಾಶ್ರಮಕ್ಕೆ ಹೊರಟ ದಿನ ಅವಳಿಗೆ ಸರಿಯಾದ ಜೊತೆಯೇ ಸಿಕ್ಕಿತು. ಅದೇ ಬಡಾವಣೆಯಲ್ಲಿದ್ದ ಇನ್ನೊಬ್ಬ ನತದೃಷ್ಟೆಯೂ ಶಾರದೆಯ ನೆರವಿನಿಂದ ವಿಧವಾಶ್ರಮದಲ್ಲಿ ಆಶ್ರಯ ಪಡೆಯಲು ಹೊರಟಿದ್ದಳು.

ಆಕೆ ಪದ್ಮಿನಿ-ನಾರಾಣಿ ಮುತ್ತೈದೆ! ವಯಸ್ಸು ಇಪ್ಪತ್ತೊಂದು ಇಪ್ಪತ್ತೆರಡು ವರ್ಷ. ನೋಡಲು ಸುಂದರಿಯಾಗಿದ್ದಳು. ಅವಳು ಒಬ್ಬ ಕಾರಕೂನನ ಧರ್ಮಪತ್ನಿ! ಇಬ್ಬರಿಗೂ ವರಸಾಮ್ಯ ಚೆನ್ನಾಗಿತ್ತು. ಹಾಗೆಂದೇ ನೋಡಿದವ ರೆಲ್ಲರ ಭಾವನೆ. ಆದರೆ ದಾಂಪತ್ಯ ಸುಖವನ್ನು ಅವಳು ಕೇಳಿಕೊಂಡು ಬಂದಿರ ಲಿಲ್ಲ. ಎಲ್ಲರ ಕಣ್ಣಿಗೆ ಸ್ಫುರದ್ರೂಪಿಯೂ, ಒಳ್ಳೆಯವನೂ ಆಗಿ ತೋರುತ್ತಿದ್ದ ಅವನು, ಅವಳ ಪಾಲಿಗೆ, ಒಬ್ಬ ರಾಕ್ಷಸ. ಪಶುವಿಗಿಂತಲೂ ಹೀನವಾದ ಕ್ಷುದ್ರ ಜಂತು! ಅವನು ಬಾಲ್ಯದಲ್ಲಿ ದುಶ್ಚಟಗಳಿಗೆ ಬಲಿಯಾಗಿದ್ದರೂ, ಯೌವ್ವನ ದಲ್ಲಿ ನಂಬಿಕೆ ಇರಿಸಿ, ಹಿರಿಯರ ಮಾತಿಗೆ ತಲೆಬಾಗಿ, ಆಕೆಯನ್ನು ಮದುವೆ ಯಾಗಿ ಮನೆಗೆ ಕರೆತಂದಿದ್ದ. ಈಗ ಅವನ ನಂಬಿಕೆ ಎಲ್ಲ ಬುಡಮೇಲಾಗಿತ್ತು. ಅವನು ಹೆಂಡತಿಗೆ ಒಂದು ದಿನವಾದರೂ ದಾಂಪತ್ಯ ಸುಖ ಕೊಡಲು ಸಮರ್ಥ ನಾಗಲಿಲ್ಲ. ಮದುವೆಯಾದ ಹೊಸದರಲ್ಲಿ, ಅವನು ತನ್ನ ಹುಳುಕನ್ನು ಮುಚ್ಚಿಡಲು ಹೆಂಡತಿ ಹೇಳಿದಂತೆ ಕುಣಿದ. ಹೆಂಡತಿಗೆ ಗಂಡನ ಯೋಗ್ಯತೆ ಅರಿತುಕೊಳ್ಳಲು ಹೆಚ್ಚು ಕಾಲವೇನೂ ಬೇಕಾಗಲಿಲ್ಲ. ಅವಳಿಗೆ ಗಂಡನ ವಿಷಯದಲ್ಲಿ ಜಿಗುಪ್ಸೆ ಉಂಟಾಯಿತು. ಇದನ್ನರಿತ ಅವನು ಪರಿಪರಿಯಾಗಿ ಒಂಸಿಸಲು ತೊಡಗಿದ. ಅವಳು ಗಂಡನ ವರ್ತನೆಯನ್ನು ಎದುರಿಸಲು ಹೋಗಿ ಅವನಿಂದ ಹೊಡೆಸಿಕೊಳ್ಳುವುದು ಅವಳ ನಿತ್ಯದ ಗೋಳಾಯಿತು. ಈ ಕೆಲವು ವರ್ಷಗಳಿಂದ ಅವರ ಸಂಸಾರದಲ್ಲಿ ಒಂದು ಸುಧಾರಣೆ ತಲೆ ಹಾಕಿತ್ತು.

ಗಂಡ, ದಾಂಪತ್ಯ ಸುಖದಿಂದ ಹೆಂಡತಿಯು ಏಕೆ ವಂಚಿತಳಾಗಬೇಕೆಂದು ಅದಕ್ಕೂ ಅನುಕೂಲಪಡಿಸಿಕೊಟ್ಟನು. ಅವನು ಸ್ನೇಹಿತರನ್ನು ಮನೆಗೆ ಕರೆ ತಂದು ಅವರ ಸ್ನೇಹವನ್ನು ಹೆಂಡತಿಗೆ ಮಾಡಿಕೊಟ್ಟು, ಆಫೀಸಿನಲ್ಲಿ ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ಹೆಂಡತಿಯನ್ನು ಒಂದು ಸಾಧನ ಮಾಡಿ ಕೊಂಡ. ಹೆಂಡತಿಯು ಗಂಡನ ಈ ಬಗೆಯ ವಿಪರೀತ ನಡವಳಿಕೆಯನ್ನು

ಮೊದಲು ಎದುರಿಸಿದಳು. ಆದರೆ ಕೈಹಿಡಿದ ಗಂಡನೇ ನಿರ್ಲಜ್ಜೆಯಿಂದ ಪರಪುರುಷರಿಗೆ ತನ್ನನ್ನು ಅರ್ಪಿಸುವಾಗ, ನಿರ್ವಾಹವಿಲ್ಲದೆ ಅವಳು ತನ್ನ ಶೀಲವನ್ನು ಗಾಳಿಗೆ ತೂರಿದಳು.

ಅವಳು ಆ ಬಗೆಯ ಜೀವನದಿಂದ ಒಂದು ಮಗುವಿನ ತಾಯಿಯೂ ಆದಳು. ಇನ್ನೊಂದು ಮಗುವಿನ ತಾಯಿಯೂ ಆಗಲಿದ್ದಳು. ಆಗ............ ಗಂಡನ ಗೆಳೆಯರು ಮೇಲಿಂದ ಮೇಲೆ ನಡೆಸುತ್ತಿದ್ದ ಧಾಳಿಯಿಂದ ಅವಳಿಗೆ ಗರ್ಭಪಾತವಾಗಿ, ಅವಳ ಬದುಕು ಅವಳಿಗೇ ಅಸಹ್ಯವಾಯಿತು. ಇಂತಹ ಹೇಯ ಬಾಳ್ವೆ ಯಾವ ಪುರುಷಾರ್ಥಕ್ಕೆ ಎಂದುಕೊಂಡು ಆತ್ಮಹತ್ಯೆ ಮಾಡಿಕೊಳ್ಳಲು ಕುಕ್ಕರಹಳ್ಳಿಯ ಕೆರೆಗೆ ಬೀಳಲೆಂದು ಬಂದಿದ್ದಾಗ, ಅಕಸ್ಮಾತ್ ಆಕಡೆ ಸಂಚಾರ ಹೋಗಿದ್ದ ಶಾರದೆಯ ಕಣ್ಣಿಗೆ ಬಿದ್ದು ಆಕೆ ಉಳಿದುಕೊಂಡಳು.

ಆಕೆ ಶಾರದೆಯಿಂದ—ರುಕ್ಮಿಣಿಯು ಹಿಂಗಣೆಯ ವಿಧವಾಶ್ರಮಕ್ಕೆ ಹೋಗಲಿರುವ ಸುದ್ದಿಯನ್ನು ಕೇಳಿ, ಅವಳೊಂದಿಗೆ ತಾನೂ ಹೊರಡಲು ನಿಶ್ಚಯಿಸಿ, ಆನಂತರ ಹೊರಟುಬಿಟ್ಟಳು.

ಶಾರದೆ ಸ್ಟೇಶನ್‌ತನಕ ಹೋಗಿ ಆ ಭಗಿನಿಯರಿಬ್ಬರನ್ನೂ ಬೀಳ್ಕೊಟ್ಟು ಬಂದಳು. ಮೈಸೂರಿನಲ್ಲಿ ಆ ಬಗೆಯ ಆಶ್ರಮವಿದ್ದಿದ್ದರೆ, ಅವರು ಪೂಣೆಯ ತನಕ ಹೋಗುವ ಕಾರಣವಿರಲಿಲ್ಲ. ನಾಡಿನ ಮೂಲೆ ಮೂಲೆಗಳಲ್ಲಿ ಪ್ರೊ. ಕರ್ವೆಯಂತಹ ತಪಸ್ವಿಗಳು ಹುಟ್ಟಿಕೊಂಡು ಹಿಂದೂ ಸಮಾಜದ ಕೊಳೆಯನ್ನು ತೆಗೆದರೆ, ಆಗ ಭಾರತದ ಹೆಣ್ಣಿನ ಉದ್ಧಾರ ಮಾತ್ರವಲ್ಲ, ಸ್ತ್ರೀಜಗತ್ತಿನ ಉದ್ಧಾರವೂ ಆಗುವುದು ಎಂದುಕೊಂಡಳು ಶಾರದೆ.

ಶಾರದೆ ಭಗಿನಿ ಸಮಾಜದಲ್ಲಿ ಕಾಲಿಟ್ಟಲಾಗಾಯಿತು ಸಮಾಜದ ಧೋರಣೆಯಲ್ಲಿ ಅನೇಕ ಬದಲಾವಣೆಗಳಾದವು. ಮೈಸೂರಿನ ಹೆಣ್ಣುಮಕ್ಕಳು ಮಡಿಕೇರಿಯ ಹೆಣ್ಣುಮಕ್ಕಳಿಗಿಂತ ಹೆಚ್ಚು ಎಚ್ಚೆತ್ತಿದ್ದರು. ಅವರಲ್ಲಿ ಸಾಕಷ್ಟು ವಿದ್ಯಾಭ್ಯಾಸವೂ ಆಗಿತ್ತು. ಅವರು ಶಾರದೆಯನ್ನು ಬೇಗ ಅರಿತುಕೊಂಡು ಅವಳ ಕನಸುಗಳನ್ನು ನನಸು ಮಾಡಲು ಹೆಗಲು ಕೊಟ್ಟರು. ಈಚೆಗೆ ಸಮಾಜದ ಸತ್ಕಾರಕೂಟಗಳೂ, ಮನರಂಜನೆಗಳೂ ಕಡಿಮೆಯಾಗಿ ಅವುಗಳಿಗೆ ವಿನಿಯೋಗವಾಗುತ್ತಿದ್ದ ಹಣ, ಬಡಮಕ್ಕಳ ಬಟ್ಟೆಬರೆ, ಕಾಯಿಲೆಯಿಂದ ನರಳುವ ದೀನ ದರಿದ್ರರ ಔಷಧೋಪಚಾರಕ್ಕಾಗಿ ವಿನಿಯೋಗವಾಗತೊಡಗಿತ್ತು.

ಸಮಾಜದ ಒಂದು ಕೋಣೆಯನ್ನು ಔಷಧಾಲಯವಾಗಿ ಮಾರ್ಪಡಿಸಿ, ಆಯುರ್ವೇದ ಹಾಗೂ ಇಂಗ್ಲೀಷ್ ವೈದ್ಯಗಳಲ್ಲಿ ಪರಿಶ್ರಮ ಹೊಂದಿದ್ದ ಹೆಂಗಸರ ಮೇಲ್ವಿಚಾರಣೆಯಲ್ಲಿ, ಒಂದು ಸಣ್ಣ ಆಸ್ಪತ್ರೆ ನಡೆಸಲಾರಂಭಿಸಿದ್ದರು.

ಶಾಲಾ ಕಾಲೇಜಿನ ಹುಡುಗಿಯರು, ಊರಿನ ಕೂಲಿಕಾರ ಹೆಣ್ಣುಮಕ್ಕಳೊಡನೆ ಸಂಪರ್ಕವಿಟ್ಟುಕೊಂಡು ಅವರ ಕಷ್ಟ ಸುಖಗಳನ್ನು ವಿಚಾರಿಸುತ್ತಿದ್ದರು. ರಜಾ ಕಾಲದಲ್ಲಿ ಸೇವಾಕಾಂಕ್ಷೆಯುಳ್ಳ ಹೆಣ್ಣುಮಕ್ಕಳು ಸೇವಾಪಥಕಗಳನ್ನು ಕಟ್ಟಿಕೊಂಡು ಹಳ್ಳಿಹಳ್ಳಿಗೆ ಹೋಗಿ, ಅಲ್ಲಿಯ ಜನರ ಅಜ್ಞಾನ, ಆಲಸ್ಯ ದ್ವೇಷಾಸೂಯೆಗಳ ಕೀಳ್ಮೆಯ ಬಲೆಯಿಂದ, ಅಂಧಶ್ರದ್ಧೆಯ ಕೊಳೆಯಿಂದ ಉದ್ಧರಿಸಿ, ಅವರಲ್ಲಿ ಸ್ವಾಭಿಮಾನವನ್ನೂ, ಶುದ್ಧ ಜೀವನದ ವಿಷಯದಲ್ಲಿ ಆಸ್ಥೆಯನ್ನೂ ಹುಟ್ಟಿಸಲು ಆರಂಭಿಸಿದ್ದರು. ಅಲ್ಲಿನ ಹಳ್ಳಿಗರ ಸಂಸ್ಕೃತಿಯನ್ನು ರಕ್ಷಿಸಿ, ಅವರಿಗೆ ರಾಜಕೀಯ, ಸಾಮಾಜಿಕ ಹಕ್ಕುಬಾಧ್ಯತೆಗಳನ್ನು ತಿಳಿಸಿಕೊಟ್ಟು ಅವರ ಜೀವನದ ನೂರು ಕೋಟಲೆಗಳನ್ನು ಕಳೆಯಲು ಪ್ರಯತ್ನಿಸುತ್ತಿದ್ದರು.

ಒಂದು ದಿನ ಶಾರದೆ ಸಮಾಜದ ಆಶ್ರಯದಲ್ಲಿ ನಡೆದ ಭಾಷಣವೊಂದನ್ನು ಕೇಳಲು ಹೋಗಿದ್ದವಳು—ಅದನ್ನು ಮುಗಿಸಿಕೊಂಡು ಮನೆಗೆ ಬರುವ ಹೊತ್ತಿಗೆ, ರಾತ್ರಿ ಒಂಬತ್ತರ ವೇಳೆಯಾಗಿತ್ತು. ಅವಳು ಆ ದಿನ ಕೇಳಿದ್ದ ವಿಚಾರಗಳನ್ನು ಮೆಲುಕುಹಾಕುತ್ತಾ, ಬರುತ್ತಿರುವಾಗ್ಗೆ ದಾರಿಯಲ್ಲಿ ಒಂದು ಭಯಾನಕ ದೃಶ್ಯ ಕಂಡಳು.

ಅದೊಂದು ಗಲ್ಲಿ. ಅದರ ಒಂದು ಮೂಲೆಯಲ್ಲಿ, ಬೂದಿ, ಎಂಜಲು ಎಲೆ ಕಾಗದದ ಚೂರು, ಕಸಕಡ್ಡಿಗಳಿಂದ ಕೊಳೆತು ನಾರುತ್ತಿದ್ದ ಒಂದು ಮುನಿಸಿಪಾಲಿಟಿ ಕಸದ ಡಬ್ಬಿ. ಆ ಡಬ್ಬದ ಒಂದು ಪಾರ್ಶ್ವವೆಲ್ಲಾ ತುಕ್ಕು ಹಿಡಿದು ಕಿತ್ತು ಹೋಗಿತ್ತು. ಬೀದಿಯ ನಾಯಿಯೊಂದು ಕಿತ್ತುಹೋಗಿದ್ದ ಭಾಗದಲ್ಲಿ ಮೋತಿಯಿಟ್ಟು, ಮೂಸಿ ನೋಡಿ, ಏನನ್ನೋ ಕಾಲಿನಿಂದ ಕೆರೆಯುತ್ತಿತ್ತು. ಶಾರದೆ ಆ ಕಡೆ ನೋಡಿದಳು. ಎಳೆ ಮಗುವೊಂದು ಅಳುವ ಶಬ್ದ ಕೇಳಿಸಿತು. ಅವಳಿಗೆ ಕುತೂಹಲವಾಗಿ ನಾಯಿಯನ್ನು ಓಡಿಸಿ, ಡಬ್ಬದ ಬಳಿ ಬಂದು ನೋಡುತ್ತಾಳೆ ಅದೊಂದು ಆಗ ತಾನೇ ಹುಟ್ಟಿದ ಮಗುವಿನ ದೇಹ!

ಯಾರೋ ದುರಾತ್ಮರು ತಮ್ಮ ಪಾಪವನ್ನು ಸಮಾಜದ ಕಣ್ಣಿನಿಂದ ಮುಚ್ಚಿಡಲು ಮಾಡಿದ ಹೇಯವಾದ ಕೆಲಸ! ಮಗುವನ್ನು ಕೈಯಾರೆ ಕೊಲ್ಲ

ಲಾರದೆ ಟವಲಿನಲ್ಲಿ ಸುತ್ತಿಟ್ಟು ಹೋಗಿದ್ದರು. ಅವಳಿಗೆ ಏನು ಮಾಡಲು ತೋಚದೆ ದಿಗ್ಭ್ರಮೆಗೊಂಡು ನೋಡಿದಳು. ಟವಲು ಅಲ್ಲಲ್ಲಿ ರಕ್ತದಿಂದ ಕರೆಗಟ್ಟಿತ್ತು. ಆಗ ತಾನೇ ಹುಟ್ಟಿದ್ದ ಮಗು ಅದು. ಕೆಂಪುಮಿಶ್ರಿತ ಬಿಳುಪು ಮೈಬಣ್ಣ. ಕೂದಲು ತುಂಬಾ ಕಪ್ಪು! ಮಾಟವಾದ ಮುಖ, ತಿದ್ದಿಮಾಡಿದ್ದ ಪುಟ್ಟಮೂಗು ಬಾಯಿ, ಹಾಲು ತುಂಬಿದ ಗಲ್ಲ-ಕೆನ್ನೆ........

ಶಾರದೆ ನೋಡಿದಳು. ಎಚ್ಚರತಪ್ಪಿ ತೋಡಿದಳು. ಮಗು ಚಳಿಗೆ ಅಳುತ್ತಾ ಮಲಗಿತ್ತು. ಅದರ ಹೊಕ್ಕಳು ಬಳ್ಳಿ ದೇಹಕ್ಕೆ ಇನ್ನೂ ಅಂಟಿಕೊಂಡೇ ಇತ್ತು. ಮಗುವಿನ ದೇಹದಲ್ಲಿ ನಾಲ್ಕೈದು ಕಡೆ ನಾಯಿ ಕಚ್ಚಿದ ಗುರುತು ಇತ್ತು. ಶಾರದೆ ಆ ಕಡೆ ಬಾರದಿದ್ದರೆ, ಈ ವೇಳೆಗೆ ಮಗು ನಾಯಿಯ ಬಾಯಿಗೆ ಸಿಕ್ಕ ಮಾಂಸದ ಮುದ್ದೆಯಾಗುತ್ತಿತ್ತೋ ಏನೋ.

ಇನ್ನು ಹೆಚ್ಚು ಹೊತ್ತು ನೋಡಲು ಶಾರದೆಯಿಂದ ಆಗದೇ ಹೋಯಿತು. ಅವಳು ಓಡಿ ಹೋಗಿ ಮಗುವನ್ನು ಎತ್ತಿ ಎದೆಗೆ ಒತ್ತಿಕೊಂಡಳು—ತಾನು ಮಾಡುವ ಕೆಲಸವನ್ನು ಇನ್ನೊಬ್ಬರು ನೋಡಿ ಏನೆಂದು ತಿಳಿಯುವರೆಂದು ಆಲೋಚಿಸಲಿಲ್ಲ. ಮಗುವನ್ನು ಮನೆಗೆ ತೆಗೆದುಕೊಂಡು ಹೋಗಿ ಮೈತೊಳೆಸಿ ಬೆಚ್ಚಗೆ ಬಟ್ಟೆ ಹೊದಿಸಿ ಮಲಗಿಸಿದಳು. ಆ ದಿನವೆಲ್ಲ ಅವಳಿಗೆ ಮಗುವಿನ ತಂದೆ ತಾಯಿಗಳ ಚಿಂತೆಯೇ ಆಯಿತು.

"ಶಾರದೆ ಆ ಬಗ್ಗೆ ನೀನೇಕೆ ಸುಮ್ಮನೆ ಕೊರಗಬೇಕು? ಇಂತಹ ಹೀನ ಕೃತ್ಯಗಳು ದಿನವೂ ಎಷ್ಟೋ ನಡೆಯುತ್ತವೆ. ಆದರೆ ಅವು ಕಣ್ಣಿಗೆ ಬೀಳುವುದಿಲ್ಲ" ಎಂದು ಶಾರದೆಯನ್ನು ಸಮಾಧಾನಪಡಿಸುತ್ತಲೆಂದ ಕಿಟ್ಟಣ್ಣ.

"ಹೂಂ, ಹೌದು. ಇಂಥವು ಎಷ್ಟೋ ನಡೆಯುತ್ತವೆ. ಆದರೆ ನಡೆಯಬೇಕೇಕೆ?

"ಏಕೆಂದರೆ ಕೊಳೆತು ನಾರುವ ಅಂತರಂಗದ ಹೊಲಸನ್ನು ಮುಚ್ಚಿಟ್ಟು ಬಹಿರಂಗ ಜೀವನದಲ್ಲಿ ಸಭ್ಯಗೃಹಸ್ಥರೆಂದು ಕಾಣಲು! ಮಾಡಬಾರದ ಕೆಲಸ ಮಾಡಿಯೂ ಮಾನವಂತರಾಗಿ ಬಾಳಲು! ಪ್ರತಿಷ್ಠಿತ ಮಂದಿಯಂತೆ. ಮೆರೆದಾಡಲು! ಇಂತಹ ಶಿಶುಹತ್ಯೆ ಮಾತ್ರವಲ್ಲ, ಇದಕ್ಕೂ ಹೇಯವಾದ ಕೆಲಸಗಳು ನಡೆಯುತ್ತವೆ." ಎಂದ ಕಿಟ್ಟಣ್ಣ ವಿಷಣ್ಣನಾಗಿ.

" ಈ ಬಗೆಯ ಕೃತ್ಯಗಳನ್ನು ನಮ್ಮ ಸಮಾಜ ಸಹಿಸಬಲ್ಲದು. ಆದರೆ

ವಿಧವೆಯೊಬ್ಬಳು ಮತ್ತೆ ಮದುವೆಯಾದರೆ ಅದು ಸಹಿಸುವುದಿಲ್ಲ!"

"ಆದುದರಿಂದಲೇ ಸಮಾಜದ ಕಣ್ಣಿಗೆ ಮಣ್ಣೆರಚಿ ಈ ಕಣ್ಣುಮುಚ್ಚಾಲೆ ಯಾಟ, ತೆರೆಮರೆಯ ಬೇಟ–ಕೂಟ ನಡೆದಿರುವುದು. ತಾವುಂಡ ಅತಿ ಭೋಗದ ಫಲವನ್ನು ಲೋಕದ ಕಣ್ಣಿನಿಂದ ಮುಚ್ಚಿಡಲು ಕೆಲವರು ಹೊಟ್ಟೆಯ ಲ್ಲಿಯೇ ಪಿಂಡದ ಕಥೆಯನ್ನು ಪೂರೈಸುತ್ತಾರೆ. ಮತ್ತೆ ಕೆಲವರು ಹುಟ್ಟಿದೊಡ ನೆಯೇ ಮಗುವಿನ ಕತ್ತು ಮುರಿದು ನಾಯಿನರಿಗಳ ಪಾಲು ಮಾಡುತ್ತಾರೆ."

"ಇದು ವಿನಹ ಬೇರೆ ಮಾರ್ಗವೇ ಇಲ್ಲವೇ? ಹೆತ್ತ ಹೊಟ್ಟೆಗೆ ಅಷ್ಟೊಂದು ಮಮತೆ, ದಯೆ ದಾಕ್ಷಿಣ್ಯವಿಲ್ಲವೇ?"

"ಮಾನ ಹೋಗುವ ಹೊತ್ತಿನಲ್ಲಿ ದಯೆ ದಾಕ್ಷಿಣ್ಯ ಯಾರು ನೋಡು ತ್ತಾರೆ. ಆದರೂ ಕೆಲವರು ಹಡೆದ ಕೂಸನ್ನು ಕೈಯ್ಯಾರ ಕೊಲ್ಲಲಾರದೆ ಅದನ್ನು ಅನಾಥಾಲಯದಲ್ಲಿ ಬಿಟ್ಟುಬರುತ್ತಾರೆ! ಇಂಥವರು ವಿರಳ. ನಮ್ಮ ಸಮಾಜದಲ್ಲಿ ಪಾಪಜೀವನದ ಫಲವಾಗಿ ಹುಟ್ಟಿದ ನೂರು ಮಕ್ಕಳ ಪೈಕಿ ತೊಂಬತ್ತೊಂಭತ್ತು ಮಕ್ಕಳಾದರೂ ನಾಯಿನರಿಗಳ ಪಾಲೋ ಅಥವಾ ಗೊಬ್ಬ ರದ ಪಾಲೋ ಆಗುತ್ತಾರೆ." ಎಂದ ಕಿಟ್ಟಣ್ಣ.

ಶಾರದೆ ಈ ಕಥೆಯನ್ನು ಕೇಳಿ 'ಅಯ್ಯೋ' ಎಂದಳು.

ಈ ಘಟನೆ ಶಾರದೆಯ ಜೀವನದಲ್ಲಿ ಒಂದು ಮೈಲುಗಲ್ಲು. ಶಾರದೆ ಭಗಿನೀ ಸಮಾಜದ ಕಾರ್ಯಾಂಗವನ್ನು ವಿಸ್ತರಿಸಿ, ಅದರ ಆಶ್ರಯದಲ್ಲಿ ಒಂದು ಅನಾಥಾಲಯವನ್ನು ನಡೆಸುವ ಆಲೋಚನೆಯನ್ನು ಸಮಾಜದ ಕಾರ್ಯಕಾರೀ ಸದಸ್ಯರ ಮುಂದೆ ಮಂಡಿಸಿದಳು. ಹೊಟ್ಟೆತುಂಬಿದ ಹೆಣ್ಣುಮಕ್ಕಳು ಈ ಸೂಚನೆಗೆ ಬೆಂಬಲ ಕೊಡಲಿಲ್ಲ. ಸರಕಾರ ಹಾಗೂ ಸಾರ್ವಜನಿಕರ ಉದಾರ ಸಹಾಯದಿಂದಲ್ಲದೆ ಭಗಿನೀ ಸಮಾಜದಂತಹ ಸಣ್ಣ ಸಂಸ್ಥೆಗಳಿಂದ ಅವುಗಳನ್ನು ನಡೆಸುವುದು ಅಸಾಧ್ಯವೆಂದು ಅವರು ವಾದಿಸಿದರು. ವಾಸ್ತವವಾಗಿ, ಅವರಿಗೆ ತಮ್ಮ ಸಮಾಜ ಇಲ್ಲದ ಕಾಷ್ಠ ವ್ಯಸನಗಳನ್ನು ಹಚ್ಚಿಕೊಂಡು ಇರುವ ಹಣ ವನ್ನು ಹಾಳು ಮಾಡುವುದು ಸರಿಬರಲಿಲ್ಲ! ಅವರಲ್ಲನೇಕರಿಗೆ ಶಾರದೆಯ ಮೇಲೆ ಅನೇಕ ಕಾರಣಗಳಿಂದಾಗಿ ಅಸಮಾಧಾನವಿತ್ತು. ಅವರಿಗೆ ಶಾರದೆ ಸಮಾಜದ ಕಾರ್ಯದರ್ಶಿನಿಯರನ್ನು ತನ್ನ ಕೈಗೊಂಬೆಗಳನ್ನಾಗಿ ಮಾಡಿಕೊಂಡು ತಾನು ಹೆಸರು ಗಳಿಸಲು ಸಮಾಜದ ಹಣ, ಶಕ್ತಿ, ವರ್ಚಸ್ಸುಗಳನ್ನು ವ್ಯಯಿ

ಸುತ್ತಿರುವಳೆಂದು ಒಂದು ಬಗೆಯ ಆಕ್ರೋಶ. ಅದನ್ನು ಆಡಿ ತೋರಿಸಲು ಈತನಕ ಸರಿಯಾದ ಅವಕಾಶ ಬಂದಿರಲಿಲ್ಲ. ಶಾರದೆ ಅನಾಥಾಲಯದ ಮಾತು ಎತ್ತಿದಾಗ ಅವರುಗಳೆಲ್ಲ ಒಂದಾಗಿ 'ಸಾಧ್ಯವಿಲ್ಲ' ಎಂದು ಗುಡುಗಿದರು. ಸ್ವಯಂ ಯಶೋದಾಬಾಯಿಗೂ ಸಮಾಜದ ಅಂಗವಾಗಿ ಅನಾಥಾಲಯ ಆರಂಭಿಸುವುದರಲ್ಲಿ ಸ್ವಲ್ಪವೂ ಇಷ್ಟವಿರಲಿಲ್ಲ. ಇದನ್ನು ಶಾರದೆಗೆ ಅಂದು ತೋರಿಸಲು ಮನಸ್ಸಾಗದೆ ಕಾರ್ಯಕಾರೀ ಮಂಡಳದ ಮುಂದೆ ಈ ವಿಷಯವನ್ನು ತಂದಿದ್ದಳು. ಈ ವಿಷಯದಲ್ಲಿ ಬಹುಮತ ಅಭಿಪ್ರಾಯ ಶಾರದೆಗೆ ವಿರೋಧವಾಗಿರುವುದನ್ನು ಕಂಡು ಮನದಲ್ಲಿ ಸಂತೋಷವಾದರೂ ಹೊರಗೆ ಶಾರದೆಯನ್ನು ಸಮಾಧಾನ ಪಡಿಸಲೆಂಬಂತೆ ಹೇಳಿದಳು. "ಶಾರದಮ್ಮ, ಈಗ ನಮಗಿರೋ 'ಫಂಡ್ಸು' ನಮ್ಮ ಚಟುವಟಿಕೆಗಳಿಗೇ ಸಾಕೂ ಸಾಲದು. ಹೀಗಿರುವಲ್ಲಿ ಅನಾಥಾಲಯ ಅಂದ್ರೆ ಸುಮ್ಮನಾಯಿತೇ? ಹುಡುಗರಿಗೆ ಊಟ, ಬಟ್ಟೆ, ವಸತಿ, ವಿದ್ಯಾಭ್ಯಾಸ, ಮೇಲ್ವಿಚಾರಣೆ ನೋಡಿಕೊಳ್ಳಲು ಜನ, ಇಂಥವೇ ನೂರೆಂಟು ವಿಷಯಗಳಿಗೆ, ಧನ ಹಾಗೂ ಜನ ಸಹಾಯ ಬೇಕು. ಹೇಗೂ ಈ ಊರಿನಲ್ಲಿ ಅಂಥದೊಂದು ಅನಾಥಾಶ್ರಮವಿದೆಯಲ್ಲ. ಹೊಸದಾಗಿ ನಾವೇಕೆ ಆರಂಭಿಸಬೇಕು?" ಈ ಮಾತು ಕೇಳಿ ಶಾರದೆಗೆ ಉತ್ಸಾಹ ಭಂಗವಾದರೂ ಒಂದು ಸಮಾಧಾನ ವಾಯಿತು. ಮೈಸೂರಿನಲ್ಲೇ ಒಂದು ಅನಾಥಾಶ್ರಮವಿದೆಯಲ್ಲ. ಅದರೊಂದಿಗೆ ಸಂಪರ್ಕವಿಟ್ಟುಕೊಂಡು ಇಲ್ಲಿ ಮಾಡುವ ಸೇವೆ ಅಲ್ಲಿ ಮಾಡಿದರಾಯಿತು. ಇದು ವರೆವಿಗೂ, ಮೈಸೂರಿನಲ್ಲಿ ಅನಾಥಾಶ್ರಮವಿರುವ ವಿಷಯ ಅವಳಿಗೇ ತಿಳಿದಿರ ಲಿಲ್ಲ. ಇದೆ ಎಂದು ಯಾರಿಗೆ ತಾನೇ ತಿಳಿದಿದೆ? ಅನಾಥ ಮಕ್ಕಳಂತೆಯೇ ಆ ಆಶ್ರಮವೂ ಸಾರ್ವಜನಿಕರ ಕಣ್ಣಿಗೆ ಬೀಳದೆ ಅನಾಥವಾಗಿಯೇ ಉಳಿದಿ ದೆಯೋ ಏನೋ........ ಒಂದು ದಿನ ಶಾರದೆ ಯಶೋದಾಬಾಯಿಯನ್ನು ಜೊತೆ ಮಾಡಿಕೊಂಡು ಅನಾಥಾಶ್ರಮಕ್ಕೆ ಭೇಟಿಕೊಟ್ಟಳು.

ಆ ಅನಾಥಾಶ್ರಮ ಸರಸ್ವತಿಪುರಂ ಬಡಾವಣೆಯ ಒಂದು ಮೂಲೆಯಲ್ಲಿ ಇತ್ತು. ಅದನ್ನು ಸ್ಥಾಪಿಸಿದವರು ಬೊಂಬಾಯಿಯ ಒಬ್ಬ ಪಾರ್ಸೀ ಗೃಹಸ್ಥ. ಆತನು ಮೈಸೂರಿನ ಚೆಲುವಿನ ತಾಣಗಳನ್ನು ನೋಡಲು ಇಲ್ಲಿಗೆ ಪತ್ನಿ-ಪುತ್ರರ ಸಮೇತನಾಗಿ ಬಂದಿದ್ದನಂತೆ. ಒಮ್ಮೆ ಬೃಂದಾವನದ ದೀಪೋತ್ಸವವನ್ನು ನೋಡಿಕೊಂಡು ಹಿಂದಿರುಗಿ ಬರುತ್ತಿದ್ದಾಗ, ಅವನಿದ್ದ ಕಾರು ಯಾವುದೋ

ತಿರುವಿನಲ್ಲಿ ಮುಗುಚಿಕೊಂಡು ಇದ್ದ ಒಬ್ಬನೇ ಒಬ್ಬ ಮಗ ತೀರಿಕೊಂಡನಂತೆ. ಮಗನ ಮೃತ್ಯುರಣದಿಂದ ಆತನಿಗೆ ಜೀವನದಲ್ಲಿ ವೈರಾಗ್ಯಭಾವ ಬಂದು ಲಕ್ಷಾಂತರ ರೂಪಾಯಿ ಬೆಲೆ ಬಾಳುವ ತನ್ನ ಆಸ್ತಿಯನ್ನು ಭರತಖಂಡದ ಅನೇಕ ಸಂಘ, ಸಂಸ್ಥೆಗಳಿಗೆ ಹಂಚಿಬಿಟ್ಟನಂತೆ. ಅಗಲಿದ ಮಗನ ನೆನಪಿಗಾಗಿ ಆತ ಮೈಸೂರಿನಲ್ಲಿ ಕಟ್ಟಿದ ಆಶ್ರಮವೇ ಈ ಅನಾಥಾಶ್ರಮ. ಇವಕ್ಕೆ ಮೈಸೂರು ಸರಕಾರದವರು ಉಚಿತವಾಗಿ ಜಮೀನು ಕೊಟ್ಟಿದ್ದರು. ಅದರಲ್ಲಿ ಸುಮಾರು ನೂರು ಜನ ಅನಾಥ ಹುಡುಗ-ಹುಡುಗಿಯರಿಗೆ ಅನುಕೂಲವಾಗುವಂತಹ ಬಿಡದಿ ಮನೆಗಳನ್ನು ಕಟ್ಟಿಸಿಕೊಟ್ಟು ನಂಜನಗೂಡಿನ ನಾಲೆಯ ಬಳಿ ಹತ್ತೆಂಟು ಎಕರೆ ಫಲವತ್ತಾದ ಜಮೀನನ್ನು ಆಶ್ರಮಕ್ಕಾಗಿ ಕೊಂಡು ಅದರ ನಿವ್ವಳ ಆದಾಯದಲ್ಲಿ ಆಶ್ರಮವನ್ನು ನಡೆಸಲು ವಿಶ್ವಸ್ಥರನ್ನು ನೇಮಿಸಿ ಆ ಪಾರ್ಸಿ ಗೃಹಸ್ಥ ಊರಿಗೆ ಹಿಂದಿರುಗಿದ್ದರು. ಆಶ್ರಮ ಆರಂಭವಾದಾಗ ಅದು ಚೆನ್ನಾಗಿ ಕೆಲಸ ಮಾಡಿತು. ಕಾಲಕ್ರಮದಲ್ಲಿ ಅದು ಕೆಲಸಕ್ಕೆ ಬಾರದ ಆಡಳಿತಗಾರರ ಕೈಗೆ ಸಿಕ್ಕಿ ಅವನತಿ ಹೊಂದಿ ಈಗ ಸುತ್ತೆ ತಲೆ ಎತ್ತಲು ನೋಡುತ್ತಿತ್ತು.

ಯಶೋದಾಬಾಯಿ ಶಾರದೆಯನ್ನು ಅಲ್ಲಿನ ಧರ್ಮದರ್ಶಿನಿಗೆ ಪರಿಚಯ ಮಾಡಿಕೊಟ್ಟಳು. ಆಕೆ ಒಬ್ಬ ನಿವೃತ್ತ ಹೈಸ್ಕೂಲು ಅಧ್ಯಾಪಕಿ. ಆಕೆ ಕೆಲಸದಿಂದ ನಿವೃತ್ತಳಾದ ಮೇಲೆ ತನ್ನ ವಿರಾಮವನ್ನು ವ್ಯರ್ಥವಾಗಿ ಕಳೆಯಲು ಮನಸ್ಸಾಗದೆ, ಆಶ್ರಮದ ಧರ್ಮದರ್ಶಿನಿಯಾಗಿ ಕೆಲಸ ಮಾಡಲು ತಾನಾಗಿ ಮುಂದೆ ಬಂದಿದ್ದಳು. ಆಕೆ ಶಾರದೆ ಯಶೋದಾಬಾಯಿಯರನ್ನು ಹಿಂಬಾಲಿಸಿಕೊಂಡು ಆಶ್ರಮದ ವಿವಿಧ ಭಾಗಗಳನ್ನು ತೋರಿಸಿಕೊಂಡು ಬಂದಳು. ಸದ್ಯಕ್ಕೆ ಆಶ್ರಮದಲ್ಲಿ ಸುಮಾರು ಐವತ್ತು ಮಂದಿ ಸಣ್ಣ ಹುಡುಗ-ಹುಡುಗಿಯರಿದ್ದರು. ಅವರ ಪಾಠ-ಪ್ರವಚನ ಹಾಗೂ, ಅನ್ನ-ಬಟ್ಟೆಗಳನ್ನು ನೋಡಿಕೊಳ್ಳಲು ನಾಲ್ಕೆಂಟು ಮಂದಿ ಬಾಲವಿಧವೆಯರು ಕೆಲಸ ಮಾಡುತ್ತಿದ್ದರು. ಹುಡುಗ-ಹುಡುಗಿಯರಿಗೆ ವಿದ್ಯಾಭ್ಯಾಸದ ಜೊತೆಗೆ, ಔದ್ಯೋಗಿಕ ಶಿಕ್ಷಣ ಕೊಡಲ್ಪಡುತ್ತಿತ್ತು. ಅವುಗಳಲ್ಲಿ ಪ್ರಮುಖವಾದುವು. ನೂಲುವುದು, ನೇಯುವುದು, ಹೊಲಿಗೆ, ಬಣ್ಣದ ಹಾಗೂ ಚಿತ್ರದ ಸಾಮಾನು ಮಾಡುವುದು, ಸ್ವೆಟರ್ ಕಾಲುಚೀಲಗಳನ್ನು ಹೆಣೆಯುವುದು, ಟಂಕಾಪಿನ ಕೆಲಸಗಳು, ಟೇಪು ಹಾಗು ಜರಿಯ ಕೆಲಸಗಳು, ಕಾಗದದ ತಯಾರಿಕೆ, ಫಲ-ಪುಷ್ಪ-ತರಕಾರಿಗಳನ್ನು ಬೆಳೆಯುವುದು ಇಂಥವೇ

ಆದಾಯ ತರುವ ಹತ್ತೆಂಟು ಉಪಜೀವನ ಮಾರ್ಗ ಹಾಗೂ ಗೃಹ ಕೈಗಾರಿಕೆ ಗಳು ಹುಡುಗರಿಗೆ ಕಲಿಸಲ್ಪಡುತ್ತಿದ್ದುವು.

"ನೀವು ಎಷ್ಟು ವರ್ಷಗಳ ತನಕ ಹುಡುಗರನ್ನು ಆಶ್ರಮದಲ್ಲಿ ಇಟ್ಟು ಕೊಳ್ಳುವಿರಿ ?" ಎಂದಳು ಶಾರದೆ ಎಲ್ಲವನ್ನೂ ನೋಡಿ ಮುಗಿಸಿದ ಮೇಲೆ.

"ಹುಡುಗರಾದರೆ ಹದಿನಾರು ಹದಿನೇಳು ವರ್ಷ, ಹುಡುಗಿಯರಾದರೆ ಅವರಿಗೆ ಮದುವೆಯ ವಯಸ್ಸಾಗುವ ತನಕ."

"ಹಾಗಾದರೆ ಈ ವಯಸ್ಸಿನ ಹುಡುಗ-ಹುಡುಗಿಯರು ಏಕೆ ಇಲ್ಲಿ ಕಾಣುವುದಿಲ್ಲ ?" ಎಂದು ಆಶ್ಚರ್ಯ ವ್ಯಕ್ತಪಡಿಸುತ್ತಾ ಕೇಳಿದಳು ಶಾರದೆ.

ಧರ್ಮದರ್ಶಿನಿ ಈ ಮಾತನ್ನು ಕೇಳಿ ತುಂಬಾ ಸಂತೋಷಪಟ್ಟುಕೊಳ್ಳುತ್ತಾ ಹೇಳಿದಳು. "ನೋಡಿ, ಹುಡುಗ-ಹುಡುಗಿಯರಿಗೆ ಕೊಂಚ ರೆಕ್ಕೆ ಪುಕ್ಕ ಬರುವತನಕ ಅನಾಥಾಲಯ ಬೇಕು. ಒಂದು ನಾಲ್ಕು ಅಕ್ಷರ ಕಲಿತು, ಒಂದು ನಾಲ್ಕು ಕಾಸು ಸಂಪಾದಿಸುವ ಯೋಗ್ಯತೆ ಬಂದೊಡನೆಯೇ ಅವರು ಯಾರಿಗೂ ಹೇಳದೇ, ಕೇಳದೇ ಇಲ್ಲಿಂದ ಓಡಿಹೋಗಿ ಬಿಡುತ್ತಾರೆ."

ಈ ಮಾತು ಶಾರದೆಗೆ ಅಚ್ಚರಿಗೊಳಿಸಿತು.

"ಅಂಥವರನ್ನು ಮತ್ತೆ ಪತ್ತೆ ಹಚ್ಚಿ ತಂದು ದಂಡಿಸುವುದಿಲ್ಲವೇ ?"

"ಒಂದು ಬಾರಿಯಾದರೆ ಸರಿ! ಹತ್ತು ವರ್ಷ ದಾಟಿದ ಹೆಣ್ಣು, ಗಂಡು, ನಾವು ಮಾತನಾಡಿಸುವ ಹಾಗೆಯೇ ಇಲ್ಲ. ಅಲ್ಲದೆ ನಾವು, ಇಲ್ಲಿ ಇರಲು, ಮನಸ್ಸಿಲ್ಲದ ಹುಡುಗರನ್ನು ತಂದು ಇಟ್ಟುಕೊಂಡರೂ ಅವರು ಇಲ್ಲಿಲ್ಲಿ ನಿಲ್ಲು ತ್ತಾರೆ? ಸದಾ ಇಲ್ಲಿಂದ ಕಾಲು ಕೀಳಲು ನೋಡುತ್ತಿರುತ್ತಾರೆ. ಅವರು ಇಲ್ಲಿಂದ ಕಂಬಿ ಕಿತ್ತರೆ ನಮಗೂ ಒಳ್ಳೆಯದೇ. ಅವರ ಬದಲು ಹೊಸ ಅನಾಥ ಮಕ್ಕಳನ್ನು ಸೇರಿಸಿಕೊಳ್ಳಬಹುದು."

"ಹುಡುಗರ ಕಥೆ ಹಾಗೆ. ಇನ್ನು ವಯಸ್ಸಿಗೆ ಬಂದ ಹುಡುಗಿಯರ ಕಥೆ."

"ಹುಡುಗಿಯರಿಗೆ ಮದುವೆಯ ಸ್ವಾತಂತ್ರ್ಯ ಕೊಟ್ಟಿದ್ದೇವೆ. ಅವರು ತಮಗೆ ಸರಿಯಾದ ಗಂಡನನ್ನು ಆರಿಸಿಕೊಂಡು ಬಂದರೆ ಆಶ್ರಮದ ಖರ್ಚಿನಲ್ಲೇ ಅವರ ಮದುವೆ ಮಾಡಿ ಕೊಡುತ್ತೇವೆ. ವಿವಾಹವಾಗುವುದು ಬೇಡವಾದರೆ

ಅವಳಿಗೆ ಉಪಾಧ್ಯಾಯಿನಿ, ನರ್ಸ್, ಟೈಪಿಸ್ಟ್ ಮೊದಲಾದ ಕೆಲಸಗಳನ್ನು ಹಚ್ಚಿ ಕೊಡುತ್ತೇವೆ. ''

ಈಗ ಶಾರದೆಗೆ ಒಂದೇ ಒಂದು ಸಂಶಯ ಉಳಿದಿತ್ತು. "ನೀವು ಇಂತಿಂಥ ವರು ಅನಾಥರೆಂದು ಹೇಗೆ ನಿರ್ಧರಿಸುವಿರಿ ? "

ಇದು ಕೊಂಚ ತೊಡಕಿನ ಪ್ರಶ್ನೆಯೇ ಸರಿ.

" ಎಷ್ಟೋ ವೇಳೆ ತಂದೆ-ತಾಯಿಗಳಿದ್ದರೂ ಹೊಟ್ಟೆ-ಬಟ್ಟೆಗಿಲ್ಲದೆ ಕಂಗೆಡುವ ಮಕ್ಕಳು ಬಂದರೆ ನಾವು ಸೇರಿಸಿಕೊಳ್ಳುತ್ತೇವೆ. ಆದರೆ ಇಂಥವರನ್ನು ಸೇರಿಸಿಕೊಳ್ಳಬೇಕಾದರೆ ಅದು ಮೂರನೆಯ ವ್ಯಕ್ತಿಯ ಸ್ವಂತ ಜವಾಬ್ದಾರಿಯ ಮೇಲೆ. ಇನ್ನು ಆಸ್ಪತ್ರೆಯಲ್ಲಿ ದಿಕ್ಕಿಲ್ಲದೆ ಹುಟ್ಟಿದ ಮಕ್ಕಳನ್ನು ಅವರು ನಮ್ಮ ಪಾಲು ಮಾಡುತ್ತಾರೆ. ಅಲ್ಲದೆ, ಬೀದಿಯ ಪಾಲಾದ ಮಕ್ಕಳು ಅಂದರೆ........ ಅನೇಕರು ಹಲವಾರು ಕಾರಣಗಳಿಂದ ಮಕ್ಕಳನ್ನು ಹೆತ್ತು ಅವರನ್ನು ಸಾಕಿ ಸಲಹಲು ಸಮಾಜಕ್ಕೆ ಅಂಜಿ ಬೀದಿಯ ಪಾಲು ಮಾಡುತ್ತಾರೆ. ಅವುಗಳ ತಾಯಿ-ತಂದೆ ಇಂತಹವರೇ ಎಂದು ಹೇಳಲು ಬರುವಂತಿಲ್ಲ. ಇಂಥ ಮಕ್ಕಳಿಗೆ ನಮ್ಮ ಆಶ್ರಮದಲ್ಲಿ ಸದಾ ಸುಸ್ವಾಗತ ! " ಎಂದು ಧರ್ಮದರ್ಶಿನಿ ನಕ್ಕಳು.

ಶಾರದೆ ಆಶ್ರಮದ ಕೆಲಸ ಕಾರ್ಯದ ಬಗ್ಗೆ ತನ್ನ ಮೆಚ್ಚಿಗೆಯನ್ನು ಸೂಚಿಸಿ ಅವರಿಂದ ಬೀಳ್ಕೊಂಡಳು. ಹೋಗುತ್ತಾ ದಾರಿಯಲ್ಲಿ ಆಡುತ್ತಿದ್ದ ಒಂದೆರಡು ಮಕ್ಕಳನ್ನು ಮಾತನಾಡಿಸಿದಳು. ಅವರು ಸೂಟಿಯಾಗಿ ಉತ್ತರ ಕೊಟ್ಟರು. ಅವರು ನೋಡಲು ದೃಢಕಾಯರಾಗಿಯೂ ಶುಚಿಯಾಗಿಯೂ ಇದ್ದರು.

ದಾರಿಯಲ್ಲಿ ಶಾರದೆ ಯಶೋದಾಬಾಯಿಗೆ ಎಂದಳು. " ಧರ್ಮದರ್ಶಿನಿ ತುಂಬಾ ಯೋಗ್ಯಳಾಗಿ ಕಾಣುತ್ತಾಳೆ. ಕೆಲಸ ಮಾಡಲು ತುಂಬಾ ಉತ್ಸಾಹ ಪ್ರದರ್ಶಿಸುತ್ತಾಳೆ. ''

" ಈಕೆ ಕಳೆದ ವರ್ಷವಷ್ಟೇ ಇಲ್ಲಿಗೆ ಬಂದಳು. ಈಕೆಗಿಂತ ಹಿಂದಿದ್ದ ಧರ್ಮದರ್ಶಿಗಳ ಕಥೆ ಅದೇನು ಕೇಳ್ತೀರಿ ?........ಅವರು ಆಶ್ರಮವನ್ನು ಕುಲಗೆಡಿಸಿಬಿಟ್ಟಿದ್ದರು. ಪ್ರಾಯದ ಹುಡುಗಿಯರನ್ನು ಬಲವಂತವಾಗಿ ಸೂಳೆಯರಿಗೆ, ಮುದುಕರಿಗೆ ಮಾರಿ, ದುಡ್ಡು ಮಾಡಿಕೊಳ್ಳಲೂ ಹೇಸುತ್ತಿರಲಿಲ್ಲ ಅವರು. ಹುಡು

ಗರ ಮೇಲ್ವಿಚಾರಣೆಗೆಂದು ಇದ್ದ ವಿಧವೆಯರು, ರಾತ್ರಿಯಾದೊಡನೆ ಊರಿನ ರಸಿಕರ ಮೈ, ಮನಸ್ಸನ್ನು ತಣಿಸುತ್ತಿದ್ದರು. ಅವರ ಸಂಪಾದನೆಯಲ್ಲಿ ಧರ್ಮ ದರ್ಶಿನಿಗೂ ಒಂದು ಪಾಲು ಸಲ್ಲುತ್ತಿತ್ತು. ಕಡೆಗೆ ಈ ವಿಷಯ ಬಯಲಾಗಿ, ತುಂಬಾ ಗಲಾಟೆಯಾಗಿ, ಇಲ್ಲಿದ್ದ ಕೆಲಸಗಾರರನ್ನೆಲ್ಲಾ ಬದಲಾಯಿಸಿ ಬಿಟ್ಟ ಮೇಲೆ ಈಗ ಮರ್ಯಾದೆಯುಳ್ಳ ಜನ ಈಕಡೆಗೆ ಬರುವಂತಾಗಿದೆ! ಮೊದಲು ಈಕಡೆ ಬರಬೇಕೆಂದರೆ ಹೆಂಗಸರಿಗೆ ಹೆದರಿಕೆಯಾಗುತ್ತಿತ್ತು. ಈಗ ಎಲ್ಲ ಸುಧಾರಿಸಿದೆ. ತಾನು ಅಧಿಕಾರಕ್ಕೆ ಬಂದು ಒಂದೆರಡು ವರುಷಗಳಲ್ಲಿಯೇ ಈಕೆ ತುಂಬಾ ಕೆಲಸ ಮಾಡಿದ್ದಾಳೆ" ಎಂದು ಯಶೋದಾಬಾಯಿ ಮೆಚ್ಚಿಗೆ ಯನ್ನು ಸೂಚಿಸಿದಳು. ದಾರಿಯಲ್ಲಿ ಬರುತ್ತಾ ಯಶೋದಾಬಾಯಿ ಶಾರದೆಗೆ ಬೀದಿಯಲ್ಲಿ ಸಿಕ್ಕಿದ ಮಗುವನ್ನು ಆಶ್ರಮದ ಪಾಲು ಮಾಡಲು ಸಲಹೆ ಕೊಟ್ಟಳು. ತಂದೆ-ತಾಯಿ, ಕುಲಗೋತ್ರವಿಲ್ಲದ ಮಗುವನ್ನು ಸಂಸಾರಸ್ಥರು ಸಾಕುವುದು ಮಾನಕ್ಕೆ ಕುಂದೆಂದು ಆಕೆಯ ಅಭಿಮತ. ಆದರೆ ಶಾರದೆಯ ಮನಸ್ಸಿಗೆ ಆ ಮಾತು ಮುಟ್ಟಲಿಲ್ಲ. ಆ ಮಗುವಿನ ಬಗ್ಗೆ ಅದೇನು ವ್ಯಾಮೋಹ ಹುಟ್ಟಿತ್ತೋ— ಅದನ್ನು ಅವಳು ದೇವರಿತ್ತ ಪ್ರಸಾದವೆಂದು ಭಾವಿಸಿದಳು. ಅವನಿಗೆ ಸುದರ್ಶನ ಎಂದು ಹೆಸರಿಟ್ಟು ತನ್ನ ಸ್ವಂತ ಮಗುವೆನ್ನುವಂತೆ ನೋಡಿ ಕೊಳ್ಳಲು ನಿರ್ಧರಿಸಿದಳು.

## ೮

ಸುಮಿತ್ರೆ ಇಂದು ತುಂಬಾ ಹುರುಪಿನಲ್ಲಿದ್ದಾಳೆ. ಅವಳಿಗೆ ಮೆಡಿಕಲ್ ಕಾಲೇಜಿಗೆ ಸೇರುವ ಹಿಗ್ಗು. ಇಂಟರ್‌ಮೀಡಿಯೇಟ್ ಪರೀಕ್ಷೆಯಲ್ಲಿ ಅವಳು ಊಹಿಸಿದ್ದಂತೆ ಮೊದಲನೆಯ ತರಗತಿಯಲ್ಲಿ ತೇರ್ಗಡೆಯಾದದ್ದು ಮಾತ್ರವೇ ಅಲ್ಲ, ಇಡೀ ಸಂಸ್ಥಾನಕ್ಕೆ ಮೂರನೆಯ ರ್‍ಯಾಂಕ್ ಬೇರೆ ಬಂದಿದೆ. ಇದರಿಂದ ಮೆಡಿಕಲ್ ಕಾಲೇಜಿಗೆ ಸೇರಲು ಎಷ್ಟೋ ಅನುಕೂಲ. ಇಲ್ಲಿಯ ತನಕ ಸುಮಿತ್ರೆ ಓದಿಗಾಗಿ ಕೆಲವು ಪಠ್ಯಪುಸ್ತಕಗಳ ವಿನಹ ಉಳಿದದ್ದಕ್ಕೆ ಒಂದು ಚಿಕ್ಕ

ಕಾಸನ್ನೂ ಖರ್ಚು ಮಾಡಿರಲಿಲ್ಲ. ಮೊದಲಿನಿಂದಲೂ ಅವಳು ಮೊದಲನೆಯ ತರಗತಿಯಲ್ಲಿ ಉತ್ತೀರ್ಣಳಾಗುತ್ತಿದ್ದುದರಿಂದ ಅವಳಿಗೆ ಕಾಲೇಜು ಫೀ ವಜಾ ಆಗಿದ್ದುದಲ್ಲದೆ ಬಡವಳೆಂದು ಸ್ಕಾಲರ್‌ಷಿಪ್ ಬೇರೆ ಬರುತ್ತಿತ್ತು. ಇದು ಮುಂದೆಯೂ ಮುಂದುವರೆಯಬಹುದು. ಹಾಗೂ ಹೀಗೂ ಮೆಡಿಕಲ್ ಕಾಲೇಜಿನಲ್ಲಿ ಐದು ವರ್ಷ ಕಾಲ ಹಾಕಿ ಬಿಟ್ಟರೆ, ಅನಂತರ ಸುಮಿತ್ರೆಯೂ ಒಬ್ಬ ಲೇಡಿ ಡಾಕ್ಟರ್. ಅನಂತರ........? ಏನೇನೋ ಕನಸು ಕಾಣುತ್ತಿದ್ದಾಳೆ ಹುಚ್ಚು ಹುಡುಗಿ !

ಸುಮಿತ್ರೆ ಮೆಡಿಕಲ್ ಕಾಲೇಜಿಗೆ ಸೇರಿದುದು ಶಾರದೆಗೆ ತಾನೇ ಕಾಲೇಜಿಗೆ ಸೇರಿದಂತೆ ಆಗಿತ್ತು ಅಷ್ಟೇ ಆನಂದ. ಅಷ್ಟೇ ಹಿಗ್ಗು. ಶಾರದೆ ಸುಮಿತ್ರೆ ಕಾಲೇಜಿಗೆ ಸೇರಿದುದನ್ನೇ ನೆಪಮಾಡಿಕೊಂಡು ಸುಮಿತ್ರೆಯ ಹಾಗೂ ತನ್ನ ಗೆಳತಿಯರಿಗೆ ಒಂದು ಔತಣವನ್ನೇರ್ಪಡಿಸಿದಳು. ಕಿಟ್ಟಣ್ಣ ಅಡಿಗೆಗೆ ಬೇಕಾದ ಸಾಮಾನು ಒದುವಿಸಿಕೊಟ್ಟು ಯಾವುದೋ ಕೆಲಸಕ್ಕಾಗಿ ಪೇಟೆಗೆ ಹೋದ. ಪೇಟೆಯಲ್ಲಿ ಬರುತ್ತಿದ್ದಾಗ ಸೈಕಲ್ಲನ್ನು ನೂಕಿಕೊಂಡು ಬರುತ್ತಿದ್ದ ಪಿ. ಡಬ್ಲ್ಯೂ. ಡಿ. ಉಡುಪಿನಲ್ಲಿದ್ದ ಒಬ್ಬ ವ್ಯಕ್ತಿಯ ಕಡೆಗೆ ಕಿಟ್ಟಣ್ಣನ ಗಮನ ಹರಿಯಿತು. ಆತನ ಮುಖ ಕಿಟ್ಟಣ್ಣನಿಗೆ ಪರಿಚಯವಿತ್ತು. ಎಲ್ಲಿ ಎಂದು ಎಷ್ಟು ತಲೆ ಕೆರೆದುಕೊಂಡರೂ 'ಇಂಥ ಕಡೆ' ಎಂದು ನೆನಪಿಗೆ ಬರಲಿಲ್ಲ. ಆತನ ಮುಖದಲ್ಲಿ ಮಂಜಯ್ಯನವರ ಹೋಲಿಕೆ ಇದ್ದುದರಿಂದ ಆತ ಮಂಜಯ್ಯನವರ ಕಡೆಯ ಮಗನಿರಬಹುದೇ ಎಂದು ಅನುಮಾನವಾಯಿತು. ವಿಚಾರಿಸಿಯೇ ಬಿಡಬೇಕೆಂದು ಆ ವ್ಯಕ್ತಿಯ ಬಳಿಗೆ ಹೋಗಿ, "ನೀವು ಮಂಜಯ್ಯನವರ ಮಕ್ಕಳಲ್ಲವೇ ?" ಎಂದ. ಆ ಮಾತು ಕೇಳಿ ಆ ವ್ಯಕ್ತಿ ಬೆರಗಾಗಿ ನಿಂತ. 'ಮೈಸೂರಿನಲ್ಲಿ ತನ್ನ ತಂದೆಯ ಹೆಸರು ಎತ್ತುವ ಈತನಾರೆಂದು ?'

"ಹೂಂ. ನಾನು ಮಂಜಯ್ಯನವರ ಕಡೆಯ ಮಗ—ಸದಾಶಿವ ಅಂತ."

"ನನ್ನ ಪರಿಚಯ ನಿಮಗೆ ಮರೆತಿರಬಹದು. ನಾನು ಕಿಟ್ಟಣ್ಣ........" ಎಂದ ಕಿಟ್ಟಣ್ಣ.

"ಓಹೋ........ನೀವಾ !" ಎಂದ ಸದಾಶಿವ. ಅವನಿಗೆ ತಟಕ್ಕನೆ ಶಾರದೆಯ ನೆನಪಾಯಿತು. ಅವರೊಂದಿಗೆ ಕಿಟ್ಟಣ್ಣನ ಗುರುತೂ ಹತ್ತಿತು.

"ಮನೆಯಲ್ಲಿ ಎಲ್ಲರೂ ಆರೋಗ್ಯವೇ ?"

" ಹೂಂ. "

" ನೀವು ಅದೇನು ಇಲ್ಲಿ ಬಂದಿದ್ದೀರಿ ? "

" ನನಗಿಲ್ಲೇ ಕೆಲಸ. "

" ಹಾಗೇನೂ " ಎಂದು ಹೇಳಿ ತಾನು ಮಡಿಕೇರಿಯನ್ನು ಬಿಟ್ಟು ಬಂದ ಲಾಗಾಯಿತು ಈತನಕದ ವರೆಗಿನ ಎಲ್ಲ ವಿಷಯವನ್ನು ತಿಳಿಸಿದ. ಅನಂತರಂತೆಯೇ ಸದಾಶಿವನು ತನ್ನ ಬಿ. ಇ. ಮುಗಿದ ಮೇಲೆ ಕೆಲವು ದಿನ ಊರಿನಲ್ಲಿಯೇ ಇದ್ದು ದಾಗಿಯೂ, ಸುಮ್ಮನೆ ಮೋಜಿಗೆಂದು ಹಾಕಿದ್ದ ಅಪ್ಲಿಕೇಷನ್‌ಗೆ ಬೆಲೆ ಕೊಟ್ಟು, ಮೈಸೂರು ಸರಕಾರದವರು ಕೂಡಲೆ ಕೆಲಸಕ್ಕೆ ಸೇರಿಕೊಳ್ಳಲು ಆರ್ಡರು ಕೊಟ್ಟ ರೆಂದೂ, ತಾನು ಸದ್ಯದ ಮಟ್ಟಿಗೆ ಮೈಸೂರಿಗೆ ಕೆಲಸದ ಮೇಲೆ ಬಂದಿರುವು ದಾಗಿ ತಿಳಿಸಿದನು.

ಕಿಟ್ಟಣ್ಣನು ಅಪರೂಪವಾಗಿ ಸಿಕ್ಕ ಮಿತ್ರನನ್ನು ಹಾಗೇ ಬಿಟ್ಟಾನೆಯೇ ಬಲವಂತದಿಂದ ಮನೆಗೆ ಕರೆದುಕೊಂಡು ಬಂದ. ಸದಾಶಿವನಿಗೂ ಶಾರದೆ ಯನ್ನು ನೋಡುವ ಆಶೆಯಿತ್ತು. ಜೊತೆಗೆ ಹೋಟಲೂಟ ಮಾಡಿ ಬೇಜಾ ರಾಗಿತ್ತು. ಒಂದು ದಿನವಾದರೂ ಹೆಂಗಸರ ಕೈಯೂಟ ಸಿಕ್ಕರೆ ಬಿಡು ತ್ತಾನೆಯೇ ?

ಮನೆಯಲ್ಲಿ ಶಾರದೆ ಅಡಿಗೆಯನ್ನು ಮುಗಿಸಿ, ಕಿಟ್ಟಣ್ಣನಿಗಾಗಿ ಎದುರು ನೋಡುತ್ತಾ ಕುಳಿತಿದ್ದಳು. ಬರಬೇಕಾಗಿದ್ದ ಸುಮಿತ್ರೆಯ ಗೆಳತಿಯರು ಬಂದಿದ್ದರು. ಎಲ್ಲರೂ ಮನೆ ಯಜಮಾನನ ದಾರಿ ಕಾಯುತ್ತಾ ಕುಳಿ ತಿದ್ದರು.

ಕಿಟ್ಟಣ್ಣ ಯಾರೋ ಹೊಸಬರೊಂದಿಗೆ ಬರುವುದನ್ನು ಕಂಡುಕೊಂಡ ಸುಮಿತ್ರೆ ಶಾರದೆಗೆ ಸುದ್ದಿ ಕೊಟ್ಟಳು. ಶಾರದೆ ಯಾರೆಂದು ನೋಡಲು ಬರುವುದಕ್ಕೂ ಅವರು ಮನೆಯನ್ನು ಪ್ರವೇಶಿಸುವುದಕ್ಕೂ ಸರಿಹೋಯಿತು.

" ಶಾರದ, ನಮ್ಮ ಮಂಜಯ್ಯನವರ ಮಗ ಸದಾಶಿವ ಬಂದಿದ್ದಾರೆ ! " ಎಂದ ಕಿಟ್ಟಣ್ಣ ಉತ್ಸಾಹದಿಂದ ಧ್ವನಿ ಏರಿಸಿ.

ಈ ಮಾತು ಕೇಳಿ ಅವರಿದ್ದೆಡೆಗೆ ಬರುತ್ತಾ ಶಾರದೆ ಪ್ರಶ್ನಿಸಿದಳು.

" ನಿಮಗೆ ಇವರೆಲ್ಲಿ ಸಿಕ್ಕಿದರು ? "

" ನೀವು ಹೇಗೆ ಗುರುತು ಹಿಡಿದಿರಿ ? "

" ಬಡವರ ನೆನಪಿದೆಯಲ್ಲ."

" ಇಲ್ಲಿಗೆ ಎಂದು ಬಂದಿರಿ ? "

" ಎಲ್ಲಿ ಇಳಿದಿದ್ದೀರಿ ? "

" ನಮಗೆ ವರ್ತಮಾನ ಕೊಡಬಾರದಿತ್ತೇ ? "

" ಮಡಿಕೇರಿಯ ಸಮಾಚಾರವೇನು ? "

" ಪಾರ್ವತಮ್ಮ, ಮಂಗಳೆ, ಹುಡುಗರು, ಮಕ್ಕಳು ಆರೋಗ್ಯವೇ ? "

ಪುಂಖಾನುಪುಂಖವಾಗಿ ಬರುತ್ತಿದ್ದ ಶಾರದೆಯ ಪ್ರಶ್ನೆಗಳನ್ನು ಕೇಳಿ ಕಿಟ್ಟಣ್ಣನು—

" ಶಾರದೆ ಇವರು ಉಸಿರಾಡಲು ಅವಕಾಶ ಕೊಡುತ್ತೀಯೋ ಇಲ್ಲವೋ? ಪಾಪ ಇವರು ಹಸಿದು ಮನೆಗೆ ಬಂದಿದ್ದಾರೆ. ನೀನು ಖಾಲಿ ಹೊಟ್ಟೆಯನ್ನು ಮಾತುಗಳಿಂದ ತುಂಬಿಸಲು ನೋಡುತ್ತೀಯಲ್ಲ .... ಇವರು ಎಲ್ಲೂ ಹೋಗೊಲ್ಲ. ಇವತ್ತು ಇಲ್ಲೇ ಇರ್ತಾರೆ. ಮೊದಲು ಎಲೆ ಹಾಕು " ಎಂದು ಮೂದಲಿಸಿದ. ಸದಾಶಿವ ಹೌದೆಂಬಂತೆ ನಕ್ಕ.

ಅಡಿಗೆಯ ಮನೆಯ ಪಕ್ಕದ ಕೋಣೆಯಿಂದ ಬಳೆಗಳ ಶಬ್ದವಾಗುವುದನ್ನು ಕೇಳಿ ಕಿಟ್ಟಣ್ಣ ಕೇಳಿದ. " ಸುಮಿತ್ರೆಯ ಗೆಳತಿಯರೆಲ್ಲ ಬಂದಿದ್ದಾರೆ ತಾನೆ ? "

" ಅವರೆಂದೋ ಬಂದರು. ನಿಮ್ಮದೇ ಲೇಟು ! " ಸದಾಶಿವನ ಕಡೆ ನೋಡಿ " ಏಳಿ, ಕೈಕಾಲು ತೊಳೆದುಕೊಳ್ಳಿ ಏಳಿ......... ಅಮ್ಮಾ ಸುಮಿತ್ರ ಆ ಪೆಟ್ಟಿಗೆಯಲಿರೋ ಪಂಜೆ, ಟವಲು ತಗೊಂಡು ಬಾಮ್ಮ" ಎಂದು ಸುಮಿತ್ರೆಗೆ ಆಜ್ಞೆ ಮಾಡಿದಳು. ಸುಮಿತ್ರ ಹೆಂಗಸರಿದ್ದ ಕೊಟಡಿಯಿಂದ ಮಡಿಯಾದ ಪಂಜೆ, ಟವಲನ್ನು ತಂದು, ಅಲ್ಲೇ ಇದ್ದ ಕುರ್ಚಿಯ ಮೇಲೆ ಹಾಕಿ, ಒಮ್ಮೆ ಸದಾಶಿವನ ಕಡೆ ನೋಡಿ, ಅಲ್ಲಿಂದ ಮಾಯವಾದಳು. ಸದಾಶಿವ ಸುಮಿತ್ರೆಯನ್ನು ನೋಡಿ ಬೆರಗಾಗಿ ನಿಂತುಬಿಟ್ಟ. ಆದಿನ ಸುಮಿತ್ರೆ ಅಡಿಯಿಂದ ಮುಡಿಯವರೆಗೆ ಸಿಂಗಾರ ಮಾಡಿಕೊಂಡಿದ್ದಳು. ಅವಳು ಉಟ್ಟಿದ್ದ ತಿಳಿನೀಲಿ ಪತ್ತಲ, ತೊಟ್ಟಿದ್ದ ಮುಗಿಲು ಬಣ್ಣದ ಮೆರುಗಿನ ಕುಪ್ಪಸ, ಅವಳ ಹೊಂಬಣ್ಣದ ಮೈಗೆ ಮನೋಹರವಾಗಿ ಒಪ್ಪುತ್ತಿತ್ತು. ಸೀರೆಯ ಅಂಚು ಅವಳು ನಡೆದಾಗ ನೆಲವನ್ನು ಬಾರಿಬಾರಿಗೆ ಮುತ್ತಿಡುತ್ತಿತ್ತು. ಸುಮಿತ್ರೆ ಮುಖಕ್ಕೆ ತೆಳುವಾಗಿ

ಪೌಡರ್ ಹಚ್ಚಿ, ಹಣೆಯಲ್ಲಿ ಕೇಸರಿ ಬಣ್ಣದ ಕುಂಕುಮದ ಬಟ್ಟನ್ನು ಇಟ್ಟು ಕೊಂಡಿದ್ದಳು. ತಲೆಗೂದಲನ್ನು ಚೆನ್ನಾಗಿ ಬಾಚಿ, ಬಿಡು ಮುಡಿಯನ್ನು ಹಣೆದುಕೊಂಡಿದ್ದರೂ, ಮುಂಗುರುಳು ಜಡೆಯ ಹಿಡಿತಕ್ಕೆ ಸೇರಿಕೊಳ್ಳದೆ ಅವಳ ಹಣೆಯನ್ನು ಬಳಸಿ ಮೆಲುಗಾಳಿಗೆ ಕೊಂಕುಕೊಂಕಾಗಿ ಕುಣಿಯುತ್ತಿತ್ತು. ಜಡೆ ಯಲ್ಲಿ ಸಿಕ್ಕಿದ್ದ ಮೈಸೂರು ಮಲ್ಲಿಗೆ ಹೂ ಮನೆಯಲ್ಲೆಲ್ಲಾ ತನ್ನ ಕಂಪನ್ನು ಬೀರಿತ್ತು. ಸದಾಶಿವ ಸುಮಿತ್ರೆಯನ್ನು ಎವೆಯಿಕ್ಕದೆ ನೋಡಿ ಮನದಲ್ಲಿಯೇ ಯಾರು ಈ ಸ್ವರ್ಗಲೋಕದ ಸುಂದರಿ ? ಎಂದುಕೊಂಡನು.

"ಇವಳು ನಮ್ಮ ಸುಮಿತ್ರೆ........ಸುಮಿತ್ರೆ ಯಾರು ಗೊತ್ತೇ ? ಮಡಿಕೇ ರೀಲಿ ವೆಂಕಪ್ಪಯ್ಯ ಅಂತ ಇದ್ದರಲ್ಲ, ಅವರ ಮಗಳೇ ಸುಮಿತ್ರೆ." ಎಂದ ಕಿಟ್ಟಣ್ಣ ಸದಾಶಿವನ ಮನಸ್ಸನ್ನು ಕಂಡವನಂತೆ.

"ಇವಳು ಸುಮಿತ್ರೆಯೇ?" ಎಂದ ಸದಾಶಿವ ಆಶ್ಚರ್ಯದಿಂದ.

"ಹೌದು ಸುಮಿತ್ರೆ. ಈಗ ತುಂಬಾ ಬದಲಾಯಿಸಿದ್ದಾಳೆ. ಸಣ್ಣ ಪುಟ್ಟ ಹುಡುಗಿಯಾಗಿದ್ದ ಅವಳು ಈಗ ಬೆಳೆದಿದ್ದಾಳೆ. ಹೆಣ್ಣು ಮಕ್ಕಳೇ ಹಾಗೆ. ಇಂದು ಕಂಡಂತೆ ನಾಳೆ ಕಾಣರು." ಎಂದು ವ್ಯಾಖ್ಯಾನ ಮಾಡಿದ ಕಿಟ್ಟಣ್ಣ.

ಸದಾಶಿವ ಕಾಲು ತೊಳೆದು ಬಂದು ಎಲೆಯ ಮೇಲೆ ಕುಳಿತುಕೊಳ್ಳುತ್ತ, "ಇಂದು ಯಾವ ಹಬ್ಬ ?" ಎಂದ.

"ಹಬ್ಬವೂ ಇಲ್ಲ, ಹರಿದಿನವೂ ಇಲ್ಲ. ನಮ್ಮ ಸುಮಿತ್ರೆ ಎಂ. ಬಿ. ಬಿ. ಎಸ್‌ಗೆ ಸೇರಿದಳು ಅಂತ ಹಬ್ಬ ! "

"ಏನು ? ಸುಮಿತ್ರೆ ಎಂ. ಬಿ. ಬಿ. ಎಸ್. ಗೆ ಸೇರಿದಳೇ ?"

"ಹೂಂ. ಇದು ಮೊದಲನೆಯ ವರ್ಷ. ಮೊನ್ನೆ ತಾನೇ ಇಂಟರ್ ಆಯ್ತು. ಸುಮಿತ್ರೆ, ಸ್ಟೇಟಿಗೇ ಮೂರನೆಯ ರ‍್ಯಾಂಕು." ಎಂದ ಕಿಟ್ಟಣ್ಣ.

ಸದಾಶಿವ ಎತ್ತಿದ ತುತ್ತನ್ನು ಹಾಗೇ ಕೆಳಗಿಳಿಸಿ ಕುಳಿತ. ಅವನಿಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ಅವನ ಕಣ್ಣೆದುರಿನಲ್ಲಿ ಲಂಗ ಹಾಕಿಕೊಂಡು ತಿರುಗುತ್ತಿದ್ದ ಹುಡುಗಿ ಸುಮಿತ್ರೆ ಇಂದು ಎಂ. ಬಿ. ಬಿ. ಎಸ್.! ಶುದ್ಧವೈದಿಕರೂ ನಿರ್ಗತಿಕರೂ ಆದ ವೆಂಕಪ್ಪಯ್ಯನ ಮಗಳು ಸಂಸ್ಥಾನಕ್ಕೆಲ್ಲಾ ಮೂರನೆಯವಳು! ಅದೂ ಇಷ್ಟು ಸಣ್ಣ ವಯಸ್ಸಿನಲ್ಲಿಯೇ?........ ಸುಮಿತ್ರೆಗೆ ಹೆಚ್ಚೆಂದರೆ ಹದಿ ನೇಳೋ ಹದಿನೆಂಟೋ........

ಮಾತಿಲ್ಲದೆ ಊಟ ಮಾಡುತ್ತಾ ಕುಳಿತ ಸದಾಶಿವನನ್ನು ನೋಡಿ ಶಾರದೆ "ನೀವು ಸಂಕೋಚಪಟ್ಕೊಳ್ಳೋ ಹಾಗೆ ಕಾಣುತ್ತೆ. ಇದು ನಿಮ್ಮ ಮನೆಯೇ ಅಂತ ತಿಳಿದುಕೊಳ್ಳಬೇಕು. ಬಡವರ ಮನೆಯ ಆತಿಥ್ಯ" ಎಂದಳು.

ಆಗಲೇ ಸದಾಶಿವ ಮಾತಿಗೆ ತೊಡಗಿದ್ದು.

ಊಟವಾದ ಮೇಲೆ ಸುಮಿತ್ರೆ ಒಂದು ಬೆತ್ತದ ತಟ್ಟೆಯಲ್ಲಿ ಸೊಗಸಾದ ಮೈಸೂರು ಚಿಗುರೆಲೆ, ಬಣ್ಣಕಟ್ಟಿದ ಅಡಿಕೆ ಪುಡಿ, ಸುಣ್ಣಗಳನ್ನು ನಗುನಗುತ್ತ ತಂದಿತ್ತಳು. ಸದಾಶಿವನನ್ನು ಕಂಡು ಸುಮಿತ್ರೆಯ ಮುಖ ನಾಚಿಕೆಯಿಂದ ಕೆಂಪಾದುದನ್ನು ಕಂಡು, ಕಿಟ್ಟಣ್ಣನೆಂದ "ಇವರು ಯಾರು ಗೊತ್ತೇ ಸುಮಿತ್ರೆ. ನಮ್ಮ ಮಂಜಯ್ಯನವರ ಮಗ ಸದಾಶಿವರಾಯರು. ಇವರಿಗೆ ಈಗ ಇಲ್ಲೇ ಕೆಲಸವಾಗಿದೆ."

"ಓ! ಹಾಗೋ........" ಎಂದಳು ಸುಮಿತ್ರೆ ಪಿಸುದನಿಯಲ್ಲಿ.

"ಹಾಗಾದರೆ ನಿಮಗೆ ನನ್ನ ಗುರುತು ಮರೆತಿಲ್ಲ ತಾನೇ" ಎಂದ ಸದಾಶಿವ.

ಮರೆತಿಲ್ಲವೆಂದು ಸುಮಿತ್ರೆ ತಲೆಯಲ್ಲಾಡಿಸಿದಳು.

"ನಿಮಗೆ ನೆನಪಿದೆಯೇ........ ಅಂದು ನಿಮ್ಮ ಫಾದರ್ ನಿಮ್ಮ ಸರ್ಟಿಫಿಕೇಟನ್ನು ಬೋರ್ಡು ಹೈಸ್ಕೂಲಿನಿಂದ ತಂದುಬಿಟ್ಟಾಗ, ನಾನು ಹೋಗಿ ನಿಮ್ಮನ್ನು ರಿ-ಅಡ್ಮಿಟ್ ಮಾಡಿದೆನಲ್ಲ!"

"ನನಗೆ ಚೆನ್ನಾಗಿ ಜ್ಞಾಪಕವಿದೆ" ಎಂದಳು ಕತ್ತು ಕೊಂಕಿಸುತ್ತಾ ಸುಮಿತ್ರೆ.

"ಅಂದೇ ನಾನು ನಿಮ್ಮ ಓದುವ ಅಭಿಲಾಷೆ ಎಷ್ಟೆಂಬುದನ್ನು ಅರಿತುಕೊಂಡೆ. ನೀವು ಓದು ಮುಂದುವರಿಸಿದರೆ ನಿಮಗೆ ಉಜ್ವಲ ಭವಿಷ್ಯವಿದೆ ಅಂತ ಅಂದೇ ತಿಳಿದೆ. ನಾನೆಂದುಕೊಂಡಂತೆಯೇ ನೀವು ಸ್ಟೇಟಿಗೆ ರ್‍ಯಾಂಕ್ ಬಂದಿದ್ದೀರಿ. ಅಂತೂ ನಮ್ಮ ಮಡಿಕೇರಿಗೇ ಕೀರ್ತಿ ತಂದಿರಿ!" ಎಂದ ಸದಾಶಿವ.

"ಅದೆಲ್ಲಾ ನಿಮ್ಮಂತಹವರಿಗೆ ಹೇಳೋ ಮಾತು. ನನ್ನದೇನು ಮಹಾ ಒಂದು ಇಂಟರು........"

"ಇಂದು ಇಂಟರ್ ಆಯಿತು. ನಾಳೆ ಎಂ. ಬಿ. ಬಿ. ಎಸ್. ಮುಂದೊಂದು

ದಿನ ಇಡೀ ದೇಶವೇ ಹೆಮ್ಮೆ ಪಡುವಂತಹ ಲೇಡೀ ಡಾಕ್ಟರೂ ಯಾಕಾಗಬಾರದು? ಬೆಳೆಯುವ ಪೈರು ಮೊಳಕೆಯಲ್ಲೇ ಗೊತ್ತಾಗುತ್ತೆ."

ಈ ಮಾತು ಕೇಳಿ ಸುಮಿತ್ರೆ ಲಜ್ಜೆಯಿಂದ ತಲೆ ತಗ್ಗಿಸಿದಳು. ಅವಳಿಗೆ ಹೊಗಳಿಕೆಯ ಮಾತು ಕೇಳಿ ರೂಢಿ ಇಲ್ಲ. ಅದರಲ್ಲಿಯೂ ಸ್ವಯಂವಿದ್ಯಾವಂತನಾದ ಸದಾಶಿವ, ಕಿಟ್ಟಣ್ಣನೆದುರಿನಲ್ಲಿ ಹೊಗಳುವುದೆಂದರೆ............ ಸುಮಿತ್ರೆ ಯಾವುದೋ ನೆಪ ಹೂಡಿ ಅಲ್ಲಿಂದ ಜಾರಿಕೊಂಡಳು. ಸದಾಶಿವ ಇದುವರೆಗೆ ಸುಮಿತ್ರೆಯ ರೂಪ ನೋಡಿ ಮೆಚ್ಚಿಕೊಂಡಿದ್ದ. ಈಗ ಅವಳ ಸರಳ ನಡೆನುಡಿಗಳನ್ನು ಕಂಡು, ಕೇಳಿ ಇನ್ನಷ್ಟು ಮೆಚ್ಚಿಕೊಂಡನು.

ಸದಾಶಿವನಿಗೆ ಕಿಟ್ಟಣ್ಣನ ಮನೆಯನ್ನು ಬಿಟ್ಟು ಹೋಗಲು ಕಾಲೇ ಬರಲಿಲ್ಲ. ಅವನ ಮನಸ್ಸು ಸುಮಿತ್ರೆಯ ಮುಖಾರವಿಂದದ ಸುತ್ತಲು ಸುಳಿಯುವ ದುಂಬಿಯ ಮರಿಯಾಯಿತು. ಎಂದೂ ಯಾವ ಹೆಣ್ಣಿನ ಬಾಹ್ಯಾಡಂಬರಗಳಿಗೆ ಮನಸೋಲದಿದ್ದ ಸದಾಶಿವ ಸುಮಿತ್ರೆಗೆ ಮನಸೋತ! ಅವನಿಗೆ ಶಾರದೆ ಕಿಟ್ಟಣ್ಣನನ್ನು ಕಂಡದ್ದು ತನ್ನ ಸ್ವಂತ ಜನರನ್ನು ಕಂಡಷ್ಟು ಹರ್ಷವಾಯಿತು. ಅವರ ಕೃತ್ರಿಮರಹಿತ ಆದರ ಆತಿಥ್ಯಗಳು ಅವನ ಮನಸ್ಸಿಗೆ ತುಂಬಾ ಹಿಡಿಸಿತು. ಸದಾಶಿವ ಅದೇ ದಿನ ಮಡಿಕೇರಿಗೆ ಕಾಗದ ಬರೆದು, ಕಿಟ್ಟಣ್ಣ ತನ್ನನ್ನು ಪತ್ತೆಹಚ್ಚಿ ಮನೆಗೆ ಕರೆದೊಯ್ದ ವಿಷಯದಿಂದ ತೊಡಗಿ ಮನೆಯಲ್ಲಿ ತನ್ನನ್ನು ಕಂಡ ರೀತಿ, ತಮ್ಮಬಗ್ಗೆ ಕಿಟ್ಟಣ್ಣ ಶಾರದೆಯರಿಗಿರುವ ಗೌರವ, ಪ್ರೀತಿ, ಸುಮಿತ್ರೆಯ ವಿದ್ಯಾಪ್ರಗತಿ, ಎಲ್ಲವನ್ನೂ ತಿಳಿಸಿದ. ಆ ಕಾಗದ ಕೈಸೇರಿದೊಡನೆ ಪಾರ್ವತಮ್ಮನಿಗೆ ಶಾರದೆಯನ್ನು ನೋಡುವ ಆಸೆಯಾಗಿ, ಹಾಗೆಂದೇ ಶಾರದೆಗೆ ಕಾಗದ ಬರೆದರು.

"ಶಾರದೆ, ವರ್ಷಕ್ಕೊಮ್ಮೆಯಾದರೂ ನಮ್ಮೂರಿಗೆ ಬರುವೆನೆಂದು ಹೇಳಿದ್ದ ನೀನು ಎರಡು ವರ್ಷಗಳಾದರೂ, ಈ ಕಡೆ ಬರದೆ ನಮ್ಮನ್ನು ಮರೆತುಬಿಟ್ಟಿರುವುದು ನ್ಯಾಯವೇ ?............" ಎಂದು ಆಕ್ಷೇಪಿಸಿ " ಶೈಲಜೆ ಸಿಕ್ಕಿದಾಗಲೆಲ್ಲಾ ನಿನ್ನ ಬಗ್ಗೆ ಕೇಳುತ್ತಿರುತ್ತಾಳೆ. ಅವಳು ಈಗ ನಾಲ್ಕು ತಿಂಗಳ ಬಸುರಿ. ನಿನ್ನನ್ನು ನೋಡಬೇಕೆನ್ನುವ ಬಯಕೆ ಅವಳಿಗೆ, ಹಾಗೆಯೇ ನಮಗೂ. ನೀನು ಒಮ್ಮೆ ಇಲ್ಲಿಗೆ ಬಂದು ಹೋಗಬಾರದೇ ?" ಎಂದು ಕಳಕಳಿಯಿಂದ ಬರೆದರು. ಈ ಪತ್ರವನ್ನು ಓದಿಕೊಂಡು, ಶಾರದೆ ಕಿಟ್ಟಣ್ಣನಿಗೆ ಕಣ್ಣಲ್ಲಿ ಬಳಬಳನೆ ನೀರೂರಿ

ದವು. ಎಂಥ ಜನ ! ಎಂಥ ಮಾತು !!

ಪಾರ್ವತಮ್ಮ ಶಾರದೆಗೆ ಕಾಗದ ಬರೆದ ದಿನ, ಸದಾಶಿವನಿಗೂ ಕಾಗದ ಬರೆದು, 'ಹೇಗಾದರೂ ಮಾಡಿ ಈ ಬಾರಿ ನೀನು ಬರುವಾಗ, ಶಾರದೆ, ಸುಮಿತ್ರೆ ಸುದರ್ಶನರನ್ನು ಕರೆತರಬೇಕೆಂದು ತಿಳಿಸಿದ್ದರು.

ಶಾರದೆಗೂ ಒಮ್ಮೆ ಮಡಿಕೇರಿಗೆ ಹೋಗಿ ಬರುವ ಆಶೆಯಿತ್ತು. ಆದರೆ ಹೋಗುವುದೆಂದರೆ ಸುಮ್ಮನಾಯಿತೇ ? ಇಂದು ನಾಳೆ ಎಂದುಕೊಂಡು ಎರಡೂ ವರೆ ವರ್ಷ ಸಂದಿಸಿದವು. ಈ ಬಾರಿ ಹೋಗಿಯೇ ಬಿಡಬೇಕೆಂದು ಶಾರದೆ ಗಂಡನಮುಂದೆ ಪಾರ್ವತಮ್ಮನವರ ಪತ್ರವಿಟ್ಟು ತನ್ನ ಆಶಯ ವ್ಯಕ್ತಪಡಿಸಿದಳು.

"ಆಗಲಿ, ಹುಡುಗರನ್ನು ಕರೆದುಕೊಂಡು ನೀನು ಹೋಗಿ ಬಾ. ನನಗೆ ರಜ ಸಿಕ್ಕರೆ ನಾನೂ ಬರುತ್ತೇನೆ " ಎಂದ ಕಿಟ್ಟಣ್ಣ.

ನವರಾತ್ರಿಯನ್ನು ನೋಡಲು ಹೊರಗಿನಿಂದ ಬರುವವರ ಸಂಖ್ಯೆ ಹೆಚ್ಚಾಗಿದ್ದುದರಿಂದ ಕಿಟ್ಟಣ್ಣನಿಗೆ ರಜ ಸಿಗಲಿಲ್ಲ. ಶಾರದೆ, ಸುಮಿತ್ರೆಯರು ಸದಾಶಿವನ ಜೊತೆಯಲ್ಲಿ ಮಡಿಕೇರಿಗೆ ಹೋಗಬೇಕಾಯಿತು. ಆ ಪ್ರಯಾಣ ಸದಾಶಿವನ ಬಾಳಿನಲ್ಲಿ ಚಿರಸ್ಮರಣೀಯವಾದುದು.

ಶಾರದೆ ಮಡಿಕೇರಿಯಲ್ಲಿ ಎಂಟು ದಿನಗಳ ಕಾಲ ಇದ್ದಳು. ಆ ಎಂಟು ದಿನಗಳೂ ಎಂಟು ಕ್ಷಣಗಳಂತೆ ಕಳೆದುಹೋದವು. ಶಾರದೆಯು ಮಡಿಕೇರಿಗೆ ಬಂದಿರುವ ಸುದ್ದಿಯನ್ನು ಕೇಳಿದ ಶಾರದೆಯ ಹಳೆಯ ಗೆಳತಿಯರು ಬಂದು ಶಾರದೆಯನ್ನು ಮುತ್ತಿಬಿಟ್ಟರು.

"ನಮ್ಮ ಮನೆಗೆ ಬನ್ನಿ, ನಮ್ಮ ಮನೆಗೆ ಬನ್ನಿ! " ಶಾರದೆ ಯಾರ ಮನೆಗೆ ಹೋಗಬೇಕು ! ಯಾರ ಮನೆಗೆ ಬಿಡಬೇಕು !

ಶೈಲಜೆಯಂತೂ " ನಮ್ಮ ಮನೆಗೆ ಒಂದು ಬಾರಿಯಾದರೂ ಬರದೇ ಹೋದರೆ ಜಯಶ್ರೀ ಆಣೆಯಿದೆ !" ಎಂದಳು.

ಶಾರದೆ ಆ ಮಾತು ಕೇಳಿ, "ಥೂ! ತುಂಟ ಹುಡುಗಿ. ನಮ್ಮ ಜಯಶ್ರೀ ಬಿಟ್ಟಿಗೆ ಬಂದಿದ್ದಾಳೆಯೇ ಹಾಗೆಲ್ಲದಕ್ಕೂ ಆಣೆಯಿಡಲು !" ಎಂದು ಶೈಲಜೆಯ ಕೆನ್ನೆ ಹಿಂಡಿದಳು.

ಶೈಲಜೆಗೆ ಶಾರದೆಯೊಂದಿಗೆ ಎಷ್ಟು ಮಾತನಾಡಿದರೂ ತೃಪ್ತಿಯಿಲ್ಲ. ಎಷ್ಟು ಆಡಿದರೂ ಮುಗಿಯದ ಮಾತು! ಅವರ ಹರಟೆಯನ್ನು ಕೇಳಿ ಬೇಸರಗೊಂಡ

ಮಂಗಳೆ "ಶಾರದೆಯನ್ನು ನಾವು ನಿಮ್ಮ ಮನೆಗೆ ಏಕೆ ಕಳುಹಿಸುವುದಿಲ್ಲ ಗೊತ್ತೆ ? " ಎಂದಳು.

"ಏಕೆ?" ಎಂದಳು ಶೈಲಜೆ.

"ನೀನು ಶಾರದೆಯ ಕಿವಿಗಳನ್ನು ನಿನ್ನ ಮಾತುಗಳಿಂದ ತೂತು ಮಾಡಿ ಬಿಡುವೆ ಎಂದು ಹೆದರಿಕೆ ನಮಗೆ !"

ಈ ಮಾತು ಕೇಳಿ ಶೈಲಜೆ ಶಾರದೆಯರಿಗೆ ನಗು ಬಾರದಿರಲಿಲ್ಲ.

"ಇಲ್ಲಮ್ಮಾ ಮಂಗಳ. ಅಲ್ಲಿ ಶಾರದೆಗೆ ಕಂಪ್ಲೀಟ್ ರೆಸ್ಟು ! ಅದಕ್ಕಾಗಿಯೇ ಅಲ್ಲಿನ ಮಾತುಗಳನ್ನೆಲ್ಲಾ ಇಲ್ಲೇ ಆಡಿ ಮುಗಿಸುವುದು !" ಎಂದಳು ಮಾತು ಕಲಿತ ಶೈಲಜೆ.

ನವರಾತ್ರಿ ಮುಗಿಯುತ್ತಾ ಬಂದಿತು. ಶಾರದೆ ಮೈಸೂರಿಗೆ ಹೊರಡುವ ಸಿದ್ಧತೆ ಮಾಡಿಕೊಂಡಳು. ಶೈಲಜೆಯ ಮನೆಗೆ ಒಮ್ಮೆಯಾದರೂ ಹೋಗದಿದ್ದರೆ ಅವಳು ಸಿಟ್ಟುಮಾಡುವಳೆಂದು ಒಂದು ದಿನ ಶೈಲಜೆಯ ಮನೆಗೆ ಹೋದಳು.

ಶೈಲಜೆಯ ಮನೆಯವರೆಲ್ಲ ಶಾರದೆಯನ್ನು ಬಹಳವಾಗಿ ಉಪಚರಿಸಿದರು. ಶೈಲಜೆಯ ಹಾಗೂ ಅವಳ ತಾಯಿಯ ಭಾಗಕ್ಕೆ ಶಾರದೆ ಒಬ್ಬ ದೇವತೆ. ಅವರು ದೇವತೆಯನ್ನು ಸತ್ಕರಿಸುವಂತೆಯೇ ಸತ್ಕರಿಸಿದರು. ಅವರಿಗೆ ಸರ್ವಮಂಗಳೆಯೇ ತಮ್ಮ ಮನೆಗೆ ಬಂದಿರುವಳೆನ್ನುವ ಭ್ರಮೆ. ಶಾರದೆ ಆ ಜನಗಳ ಪ್ರೀತಿಯನ್ನು ಕಂಡು ಮೂಕಿಯೇ ಆದಳು. ಇಂತಹ ಸರಳ ಹೃದಯರು ಜಗತ್ತಿನಲ್ಲಿ ಉಂಟೇ ಎಂದು ಅವಳು ಅಚ್ಚರಿಪಟ್ಟಳು.

"ಇನ್ನೆರಡು ದಿನ ಇದ್ದು ಹೋಗಬಾರದೇ ಚಿಕ್ಕಮ್ಮ. " ಎಂದಳು ಶೈಲಜೆ ಶಾರದೆ ಮನೆಯಿಂದ ಹೊರಡುವಾಗ.

"ನೀನು ಯಾವಾಗಲೂ ಹೀಗೇನೇ ಮಾಡ್ತಿ. ಇಲ್ಲಿ ಒಂದೆರಡು ದಿನ ಇರು ಅಂತ ಅಂದ್ರೆ ಮುಳ್ಳಿನ ಮೇಲೆ ಇರೋ ಹಾಗೆ ಆಡ್ತೀ. ನನ್ನ ಕಂಡರೆ ನಿನಗೆ ಮೊದಲಿನ ಪ್ರೀತಿ........ "

"ಆ ಮಾತು ಬೇಡ ಶೈಲಜ........ ಇನ್ನೊಮ್ಮೆ ಇಲ್ಲಿಗೆ ಬಂದಾಗ ನೀನು ಹೋಗು ಅನ್ನುವ ತನಕ ಇಲ್ಲೇ ಇರುತ್ತೇನೆ."

"ನೀನು ಇನ್ನೊಮ್ಮೆ ಇಲ್ಲಿಗೆ ಬರುವುದು ಯಾವ ಕಾಲಕ್ಕೋ ಏನೋ. ನಾವು ಎರಡು ವರ್ಷಗಳು ತಪಸ್ಸು ಮಾಡಿದ್ದಕ್ಕೆ ಇಂದು ಪ್ರತ್ಯಕ್ಷಳಾದಿ !"

"ಇಲ್ಲಮ್ಮ. ಮುಂದಿನ ಬೇಸಿಗೆಯನ್ನೆಲ್ಲ ನಿಮ್ಮೂರಲ್ಲಿಯೇ ಕಳೀತೀನಿ. " ಎಂದು ಸಮಾಧಾನಪಡಿಸಿ, ಶೈಲಜೆಯಿಂದ ಬೀಳ್ಕೊಂಡು ಹೊರಟಳು.

ಮಕ್ಕಳೆಂದರೆ ಹೊಟ್ಟೆಯ ಮಕ್ಕಳು ಮಾತ್ರವೇ?........ಸುಮಿತ್ರೆ........ ಶೈಲಜೆ ಇವರುಗಳು ತನ್ನ ಮಕ್ಕಳೇ ಅಲ್ಲವೇ ?...........ಎಂದೆನಿಸಿತು ಶಾರದೆಗೆ ಆ ಕ್ಷಣ.

ಶಾರದೆ ಮಡಿಕೇರಿಯಿಂದ ಹೊರಡುವ ಸುದ್ದಿಯನ್ನು ಕೇಳಿ, ಸದಾಶಿವ ಶಾರದೆ ಇನ್ನು ಕೊಂಚ ದಿನ ಇಲ್ಲಿ ಇರಬಾರದಿತ್ತೇ ಎಂದುಕೊಂಡ. ಯಾಕೆಂದರೆ ಶಾರದೆ ಎಲ್ಲಿದ್ದರೆ ಅಲ್ಲಿ ಸುಮಿತ್ರೆ! ಈ ಎಂಟು ಹತ್ತು ದಿನಗಳು ಸದಾಶಿವನ ಪಾಲಿಗೆ ಶೃಂಗಾರ ಮಾಸವಾಗಿತ್ತು. ಸುಮಿತ್ರೆಯ ಪರಿಚಯ ಈಗ ಗೆಳೆತನವಾಗಿ ಕ್ರಮಕ್ರಮವಾಗಿ ಒಲವಿನ ಒಸಗೆಯಾಗಿ ಮಾರ್ಪಡುತ್ತಿತ್ತು. ಸುಮಿತ್ರೆ ಸದಾಶಿವನ ಎದುರಿಗಿದ್ದರೆ ಅವನಿಗೆ ಎಲ್ಲೂಇಲ್ಲದ ಉತ್ಸಾಹಸಂಭ್ರಮ. ಸುಮಿತ್ರೆ ಕಾಲೇಜು ಹುಡುಗಿಯಾಗಿದ್ದುದರಿಂದ ಸದಾಶಿವನೊಡನೆ ಇರುವ ಸಲಿಗೆಯನ್ನು ಕಂಡು ಮನೆಯವರಾರೂ ಆಕ್ಷೇಪಿಸಲಿಲ್ಲ. ಅಷ್ಟಕ್ಕೂ ಅವರೇನು ಹೊಸಬರೇ. ಅಲ್ಲದೆ ಸುಮಿತ್ರೆ ಇತರ ಹುಡುಗಿಯರಂತೆ ಅಲ್ಲ. ಅವಳು ಗಂಡುಬೀರಿ ಹುಡುಗಿಯಾಗಿರದಿದ್ದರೂ, ಅಕಾರಣವಾಗಿ ನಾಚುವ, ಗಂಡಸರ ಮುಖ ಕಂಡೊಡನೆಯೇ ತಲೆ ತಗ್ಗಿಸಿ ನಿಲ್ಲುವ ಹಳ್ಳಿಗಾಡಿನ ಹೆಣ್ಣಲ್ಲ. ಅವಳು ಕಲಿಯುತ್ತಿದ್ದ ಕಾಲೇಜಿನಲ್ಲಿ–ಸುಮಿತ್ರೆ ಅಷ್ಟು ಸಂಕೋಚ ಪ್ರಕೃತಿಯವಳಾಗಿದ್ದರೆ, ಕಾಲವೂ ಬರುತ್ತಿರಲಿಲ್ಲ.

ಅವಳ ತರಗತಿಯಲ್ಲಿ ಹುಡುಗಿಯರಿಗಿಂತ ಹುಡುಗರೇ ಹೆಚ್ಚು. ಉಪಾಧ್ಯಾಯ ವರ್ಗದಲ್ಲಿಯೂ ಅಷ್ಟೇ. ಅತಿಯಾದ ಲಜ್ಜೆ ನಾಚಿಕೆಗಳು ತನ್ನ ವೃತ್ತಿಗೆ ಹಾನಿಕರವೆಂದು ಅವಳಿಗೆ ತಿಳಿದಿತ್ತು. ಹಾಗೆಂದ ಮಾತ್ರಕ್ಕೆ ಸ್ತ್ರೀ ಸಹಜ ಲಜ್ಜೆ ನಾಚಿಕೆಗಳನ್ನು ಅವಳು ನಿರ್ಲಕ್ಷಿಸುತ್ತಿದ್ದಳೆಂದಲ್ಲ. ಯಾವುದೂ ಅತಿಯಿರಬಾರದು. ಎಷ್ಟೋ ವೇಳೆ ಇತರ ಹುಡುಗರೊಡನೆ ಅವಳ ಗೆಳತಿಯರು ಬೆಳೆಸಿಕೊಂಡಿದ್ದ ವಿಪರೀತ ಸಲಿಗೆಯನ್ನು ಅವಳು ಖಂಡಿಸಿದ್ದಳು. ಸದಾಶಿವನಿಗೆ ಸುಮಿತ್ರೆ ಜೊತೆಗಿದ್ದುದರಿಂದ ಈ ಬಾರಿ ಮಡಿಕೇರಿಯ ಜೀವನ ಕಿಂಚಿತ್ತೂ ಬೇಸರವಾಗಲಿಲ್ಲ. ಇಬ್ಬರೂ ಕಾಲೇಜಿನ ಜೀವನ ಕುರಿತು ಹರಟುವರು. ಮಾತು ಸಾಕಾದರೆ ಚದುರಂಗದಾಟ, ಕೇರಂ ಆಡುವರು. ಹೆಣ್ಣಿನ

ಮುಂಟಪಕ್ಕಾಗಿ ಕೊಂಡಿದ್ದ ಕೇರಂ ಬೋರ್ಡು ಈಗ ಕೆಲಸಕ್ಕೆ ಬಂತು. ಸಂಜೆ ಶಾರದೆ ಸುಮಿತ್ರೆಯರೊಡನೆ ಸುತ್ತಾಟ. ಸದಾಶಿವ, ಸುಮಿತ್ರೆ ಸದಾ ಒಟ್ಟಾಗಿ ರುವುದನ್ನು ಕಂಡು ಶಾರದೆ ಏನೋ ಕನಸು ಕಟ್ಟಿದಳು. ಪಾರ್ವತಮ್ಮನೂ ಅಷ್ಟೆ. ಆದರ್ಶ ಅಣ್ಣಾತಂಗಿಯರಂತೆ ಇದ್ದಾರೆ. ತಮ್ಮ ಹೊಟ್ಟೆಯಲ್ಲಿ ಅಂತಹ ಮಗಳು ಒಬ್ಬಳು ಹುಟ್ಟಿದ್ದರೆ !........

ಮರುಕ್ಷಣದಲ್ಲಿ ಪಾರ್ವತಮ್ಮ ಸುಮಿತ್ರೆಯ ಬಗ್ಗೆ ಏನೋ ನೆನೆದು ನಿಟ್ಟು ಸಿರು ಬಿಡುವರು. ಸುಮಿತ್ರೆಗೆ ಎಲ್ಲ ಸೌಭಾಗ್ಯವೂ ಇದೆ. ಏನಿದ್ದರೇನು ? ಅವಳ ಮಾಂಗಲ್ಯ ಒಂದು ಗಟ್ಟಿಯಾಗಿದ್ದಿದ್ದರೆ !........... ಪಾಪ ಸುಮಿತ್ರೆ ವಿಧವೆ ! ಆದರೂ ಆ ಚಿಂತೆ ಅವಳಿಗೆ ಲವಲೇಶವೂ ಇಲ್ಲವಲ್ಲ ! ಅದೇ ಆಶ್ಚರ್ಯ. ಸುಮಿತ್ರೆ ಸುಂದರಿಯೂ ಹೌದು. ವಿದ್ಯಾವಂತಳೂ ಹೌದು. ಅವ ಳೇಕೆ ಮತ್ತೆ ಮದುವೆಯಾಗಬಾರದು ?

ಹೌದು !........ ಮದುವೆಯಾಕಾಗಬಾರದು ?

“ನಿಮ್ಮ ಸದಾಶಿವನಿಗೆ ಅವಳನ್ನು ತಂದುಕೊಳ್ಳುತ್ತೀಯಾ? ಅವನೂ ಅವಳೂ ಪರಸ್ಪರ ಪ್ರೀತಿಸುತ್ತಿದ್ದಾರೆ. ವರಸಾಮ್ಯವೂ ಚೆನ್ನಾಗಿದೆ?” ಎಂದು ಯಾರೋ ಕೇಳಿದರು.

ಪಾರ್ವತಮ್ಮ ಆರಾಮ ಕುರ್ಚಿಯಲ್ಲಿ ಮೈಮರೆತು ಕುಳಿತಿದ್ದವರು ಸುತ್ತಲೂ ನೋಡಿದರು. ಎದುರಿನ ಕೊಠಡಿಯಲ್ಲಿ ಚದುರಂಗವಾಡುತ್ತಿದ್ದ ಸದಾಶಿವ ಸುಮಿತ್ರೆಯ ವಿನಹ ಬೇರೆ ಯಾರೂ ಅಲ್ಲಿ ಇರಲಿಲ್ಲ........ಹಾಗಾದರೆ ಈ ಪ್ರಶ್ನೆ ಕೇಳಿದವರು ಯಾರು ?

ಪಾರ್ವತಮ್ಮ ಅತ್ತ ಕಣ್ಣು ಹೊರಳಿಸಿ ನೋಡಿದರು. ಸದಾಶಿವ ಸುಮಿತ್ರೆ ಆಟದಲ್ಲಿ ಮಗ್ನರಾಗಿದ್ದಾರೆ. ಅದೂ ಸತಿಪತಿಗಳಂತೆ !

“ಛೂ ಎಂಥ ವಿಚಾರ ತನ್ನದು !” ಎಂದುಕೊಂಡರು.

“ತನ್ನ ಮಗನಿಗೆ ಸುಮಿತ್ರೆ ವಧುವೇ ?” ಎಂದಿತು ಒಂದು ಮನಸ್ಸು.

“ಯಾಕಾಗಬಾರದು ?” ಎಂದಿತು ಇನ್ನೊಂದು ಮನಸ್ಸು.

“ಹೌದು. ಯಾಕಾಗಬಾರದು ?”

“ಆದರೆ ಸದಾಶಿವ ವಿಧವೆಯ ಕೈಹಿಡಿಯಬೇಕೇ ?”

“ಅವನು ಸಂತೋಷದಿಂದ ಕೈಹಿಡಿಯಲೊಪ್ಪಿದರೆ ?”

"ಅವನು ಒಪ್ಪಬಹುದು--ಆದರೆ ? "

"ಏನು..........ಆದರೆ ?"

"ಶ್ರೀಮಂತನೂ—ವಿದ್ಯಾವಂತನೂ ಆದ ಸದಾಶಿವನಿಗೆ—ದಿಕ್ಕಿಲ್ಲದ ಹುಡುಗಿ—ಅದೂ ವಿಧವೆ--ಯೋಗ್ಯ ವಧುವೆ ? "

"ಸದಾಶಿವನ ಪ್ರೀತಿಕಣ್ಣಿಗೆ ಸುಮಿತ್ರೆ ಯೋಗ್ಯ ವಧು...."

"ನೀನು ಒಪ್ಪಲಿ—ಬಿಡಲಿ. ಅವನು ಅವಳನ್ನು ಮದುವೆಯಾಗುವುದು ದಿಟ. "

"ಹಾಂ ! ಏನು ಮಾತು ?"

"ಹೂಂ. ಹೌದು. ಇಬ್ಬರ ಹೃದಯದಲ್ಲಿ ಅನುರಾಗದ ಬೀಜ ಬಿತ್ತಲ್ಪಟ್ಟಿದೆ. ಅದು ಮೊಳೆತು ಚಿಗುರುವುದು ಎಷ್ಟು ಹೊತ್ತು ?"

ಈ ಮಾತು ನೆನೆದು ಹೌಹಾರಿದರು ಪಾರ್ವತಮ್ಮ.

ಕೊಠಡಿಯಲ್ಲಿ ಸದಾಶಿವ ಹಾಗೂ ಸುಮಿತ್ರೆ ಕಿಲಕಿಲನೆ ನಗುವುದು ಕೇಳಿಸಿತು. ಪಾರ್ವತಮ್ಮನ ವಿಚಾರ ಲಹರಿಯನ್ನು ಕೇಳಿಕೊಂಡರೋ ಏನೋ.

ಅದೇ ಹೊತ್ತಿಗೆ ಅಲ್ಲಿಗೆ ಶಾರದೆ ಬಂದು, ಇವರ ನಗುವಿನಲ್ಲಿ ಪಾಲುಗೊಂಡಳು. ಪಾರ್ವತಮ್ಮನೂ ಆರಾಮ ಕುರ್ಚಿ ಬಿಟ್ಟು ಅಲ್ಲಿಗೆ ಬಂದರು. ಶಾರದೆ ಪಾರ್ವತಮ್ಮನೊಂದಿಗೆ ಯಾವುದೋ ಕಾಡು ಹರಟೆಗೆ ಕುಳಿತಳು. ಮಾತಿನ ಮಧ್ಯೆ ಸದಾಶಿವನಕಡೆ ನೋಡಿ, "ಅತ್ತೆ ನಮ್ಮ ಸದಾಶಿವನಿಗೆ ಎಂದು ಮದುವೆ" ಎಂದಳು.

ಈ ಮಾತು ಕೇಳಿ ಸದಾಶಿವ ಶಾರದೆಯ ಕಡೆ ನೋಡಿದ.

ಈ ವರ್ಷ ಮಾಡಬೇಕೆಂದಿದ್ದೆವು. ಅವನು 'ಲೈಫ್' ನಲ್ಲಿ ಸೆಟಲ್ ಆಗೋತನಕ ಮದುವೆ ಮಾಡಿಕೊಳ್ಳೋದಿಲ್ಲ ಅಂತ ಹೇಳ್ತಾ ಇದಾನಮ್ಮ. ನೀನಾದರೂ ಕೊಂಚ ಹೇಳಜಾರ್ದೆ ? " ಎಂದರು ಪಾರ್ವತಮ್ಮ.

"ಬಿ. ಇ. ಮಾಡಿರೋ ನೀವು 'ಲೈಫ್' ನಲ್ಲಿ 'ಸೆಟಲ್' ಆಗೋದು ಬಂತೆ ? ಈಗ ಹೇಗೂ ಸರಕಾರಿ ಕೆಲಸ ಇದೆಯಲ್ಲ ! ಈಗ ಯಾಕೆ ಮದುವೆಯಾಗಬಾರದು ? " ಎಂದಳು ಶಾರದೆ.

"ಆಗಲು ನನ್ನ ಅಡ್ಡಿಯಿಲ್ಲ........ ಆದರೆ........ ? " ಎಂದು ಅನುಮಾನಿಸುತ್ತಾ ಹೇಳಿದ ಸದಾಶಿವ. " ನನಗೆ ಸರಿಹೋಗುವ ಹುಡುಗಿ ಸಿಕ್ಕಿದರೆ

ಮಾತ್ರ ನಾನು ಮದುವೆಯಾಗ್ತೇನೆ!"

"ಸರಿಯಾದ ಹುಡುಗಿ ಅಂದರೆ?"

"ತುಂಬಾ ಓದಿರಬೇಕು. ನೋಡೋಕೆ ಲಕ್ಷಣವಾಗಿರಬೇಕು. ಬುದ್ಧಿವಂತಳಾಗಿರಬೇಕು."

"ಅಂತಹ ಹುಡುಗಿ ಸಿಗದೆ ಹೋದ್ರೆ?"

"ನಾನು ಮದುವೇನೇ ಆಗೋಲ್ಲ."

"ಅತ್ತೆ, ನಮ್ಮ ಸದಾಶಿವನ ಗುಟ್ಟು ನನಗೆ ಗೊತ್ತಿದೆ" ಎಂದು ಪಾರ್ವತಮ್ಮನ ಕಡೆ ನೋಡುತ್ತಾ ಶಾರದೆ ಹೇಳಿದಳು.

"ಈಗಿನ ಕಾಲದ ಹುಡುಗರೇ ಹೀಗೆ. ಅವರಿಗೆ ಕಾಲೇಜಿನಲ್ಲಿ ಅದೇನು ಕಲಿಸುತ್ತಾರೋ ಕಾಣೆ. ಕಾಲೇಜಿಗೆ ಹೋಗಿ ಬಂದೋರೆಲ್ಲಾ ಹೀಗೇನೇ ಆಡೋದು. ಮಾತೆತ್ತಿದರೆ ಮದುವೆ ಬೇಡ. ಮದುವೆ ಬೇಡ........ ಈಗಿನ ಕಾಲದ ಹುಡುಗರು ತಲೇಲಿ ಏನೇನೋ ತುಂಬಿಕೊಂಡಿರ್ತಾರೆ. ಅವರಿಗೆ ಮದುವೆಯಾದರೆ ಸ್ವರ್ಗಲೋಕದ ಸುರಸುಂದರಿಯರನ್ನೇ ಆಗಬೇಕು—ಅದು ತಪ್ಪಿದರೆ—ತಾರಾ ಪ್ರಪಂಚದ ತಾರೆಯರೇ ಬೇಕು. ಅವರು ಸಿಗೋ ಹಾಗಿಲ್ಲ. ಇವರಿಗೆ ಮದುವೆಯಾಗೋ ಹಾಗಿಲ್ಲ!" ಎಂದು ನಗೆಯಾಡಿದಳು ಶಾರದೆ.

ಈ ಮಾತು ಕೇಳಿ ಎಲ್ಲರೂ ಮುಸಿಮುಸಿ ನಕ್ಕರು.

ಸದಾಶಿವನಿಗೆ ಶಾರದೆಯ ಮಾತು ವಿನೋದವಾದರೂ ಅದರಲ್ಲಿ ಸತ್ಯ ಕಂಡಿತು. ಕಾಲೇಜಿನ ಅನೇಕ ತರುಣರು ಮದುವೆಯ ವಿಷಯದಲ್ಲಿ ಬಿಸಿಲುದುರೆಯ ಬೆನ್ನನೇರಿ, ಕಾದ ಮರಳಿನಲ್ಲಿ ಹೇಗೆ ಬೆಂದರೆನ್ನುವ ಅನೇಕ ಕಥೆಗಳನ್ನು ಸದಾಶಿವ ಕಂಡಿದ್ದನು, ಕೇಳಿದ್ದನು. ಅವನ ಒಬ್ಬ ಅಂತರಂಗ ಮಿತ್ರನು ತನ್ನೊಡನೆ ಕಲಿಯುತ್ತಿದ್ದ ಕ್ರಿಶ್ಚಿಯನ್ ಹುಡುಗಿಯನ್ನು ಪ್ರೇಮಿಸಿ ಆಕೆಗಾಗಿ ಜಾತಿ ಕೆಟ್ಟರೂ, ಆಕೆ ಬೇರೆ ಅವನವಳಾಗಲಿಲ್ಲ. ಇನ್ನೊಬ್ಬ ಶ್ರೀಮಂತ ಪುತ್ರಿಯೋರ್ವಳಿಗೆ ಕೈಹಾಕಿ. ಆಕೆ ತನಗೆ ಎಟುಕದ ಜೀವವೆಂದು ತಿಳಿದೊಡನೆಯೇ ಆತ್ಮಹತ್ಯ ಮಾಡಿಕೊಂಡಿದ್ದನು. ಇವುಗಳೆಲ್ಲ ಸದಾಶಿವನ ತಲೆಯಲ್ಲಿ ಮತ್ತೊಮ್ಮೆ ಬಂದು ಹೋದವು. "ನಿಮ್ಮ ಮಾತು ಸುಳ್ಳೇನೂ ಅಲ್ಲ. ಆದರೆ ನನ್ನನ್ನು ಮಾತ್ರ ಆ ಗುಂಪಿಗೆ ಸೇರಿಸಬೇಡಿ!" ಎಂದ ನಗುತ್ತಾ.

"ಹಾಗಾದರೆ ನಿಮ್ಮನ್ನು ಯಾವ ಗುಂಪಿಗೆ ಸೇರಿಸಬೇಕು." ಎಂದು ಕೇಣಿ ಕಿದಳು ಶಾರದೆ.

"ನನಗೆ ಮದುವೆಯ ವಿಷಯದಲ್ಲಿ ಪೂಜ್ಯ ಭಾವನೆಯಿದೆ. ಮದುವೆ ಎಂದರೆ ನನ್ನ ಅಭಿಪ್ರಾಯದಲ್ಲಿ ಎರಡು ಆತ್ಮಗಳ ಪವಿತ್ರ ಮಿಲನ. ಭೂಮಿ ಯಲ್ಲಿ ಮಾನವರಾಗಿ ಹುಟ್ಟಿದ ಮೇಲೆ ನಮ್ಮ ಜನ್ಮ ಸಾರ್ಥಕತೆಗಾಗಿ ನಾವು ಏನನ್ನಾದರೂ ಮಾಡಲೇ ಬೇಕು. ಒಬ್ಬೊಬ್ಬರು ಒಂದೊಂದು ಆದರ್ಶವನ್ನು ಕಣ್ಣಮುಂದೆ ಇಟ್ಟುಕೊಂಡು ಅದರ ಸಾಧನೆಯಲ್ಲಿ ಮುಂಬರೆಯುತ್ತಾರೆ. ಆ ಬಗೆಯ ಆದರ್ಶ ಸಾಧನೆಯಲ್ಲಿ ಹಳ್ಳತಿಟ್ಟುಗಳಲ್ಲಿ ಊರುಗೋಲಾಗಿ, ಕತ್ತಲೆ ಯಲ್ಲಿ ಬೆಳಕಾಗಿ, ಸೋತು ಸೊರಗಿದಾಗ ಅಮೃತವಾಗಿ ಬಂದೆರಗಲು ಬಾಳಿನ ಜೊತೆಗಾತಿಯ ನೆರವು ಬೇಕು. ಮದುವೆಯ ಪವಿತ್ರ ಗುರಿ, ಆ ಇಹಪರಗಳ ಸಹಧರ್ಮಿಣಿಯನ್ನು ಹುಡುಕಿಕೊಡುವುದೇ ಆಗಿದೆ........ಅಂತಹ ಹೆಣ್ಣು ಸಿಕ್ಕಿ ದರೆ ನಾನು........" ಎಂದು ಹೇಳಿದ ಸದಾಶಿವ ಕನಸು ಕಾಣುವವನಂತೆ.

"ನಿಮಗೆ ಬೇಕಿರುವುದು ಹೃದಯದ ಸಾಮರಸ್ಯ. ನಿಮ್ಮ ಉದಾತ್ತ ಜೀವ ನಾದರ್ಶಗಳಲ್ಲಿ ನಂಬಿಕೆಯುಳ್ಳ ಹೆಣ್ಣು ! ಅಂಥವಳನ್ನು ನಾನು ಸೂಚಿಸಿದರೆ ನೀವು ವರಿಸುವಿರಾ ?"

ಸದಾಶಿವ ಹ್ಞೂಗುಟ್ಟಿದ.

"ಆಕೆ ತುಂಬಾ ಬಡವಳು !"

"ಬಡತನ ನನಗೆ ಮುಖ್ಯವಲ್ಲ !"

"ನಿಮ್ಮಷ್ಟು ಕಲಿತವಳಲ್ಲ—ಆದರೂ ಬುದ್ಧಿವಂತೆ. ನಿಮ್ಮ ಹಾಗೆಯೇ ಅವಳೂ ಆದರ್ಶವಾದಿ !"

"ಓದು ಮುಖ್ಯವಲ್ಲ—ಸಂಸ್ಕಾರ ಮುಖ್ಯ."

"ಹೇಳಿಕೊಳ್ಳುವ ರೂಪವಿಲ್ಲದಿದ್ದರೂ, ನೋಡಲು ಲೋಕದ ಕಣ್ಣಿನಲ್ಲಿ ಲಕ್ಷಣವಾಗಿದ್ದಾಳೆ."

"ಲೋಕದ ಕಣ್ಣಿಗೆ ಲಕ್ಷಣವಾಗಿದ್ದವಳು ನನ್ನ ಕಣ್ಣಿಗೂ ಚೆಲುವೆ "

"ಲೋಕದ ಕಣ್ಣಿನಲ್ಲಿ ಅವಳು ವಿಧವೆ ಎನಿಸಿದ್ದರೆ ?"

"ವಿಧವೆ ಎನ್ನುವ ಮಾತು ನನ್ನ ಶಬ್ದ ಭಂಡಾರದಲ್ಲಿಯೇ ಇಲ್ಲ. ವಿಧವೆ, ವಿಧುರ ಎನ್ನುವ ಮಾತುಗಳಿಗೆ ನಾನು ಕೊಡುವ ಅರ್ಥ, ಜಿತೇಂದ್ರಿಯ ಸರ್ವ

ಸಂಗ ಪರಿತ್ಯಾಗಿ, ಸಂಯಮಿ, ಸನ್ಯಾಸಿ ಎಂದು. ಅದು ಪವಿತ್ರವಾದ ತುರಿಯಾ ಶ್ರಮವೆಂದು ನನ್ನ ಭಾವನೆ. ಗಂಡು ಹೆಣ್ಣುಗಳು ಸಂಸಾರದಲ್ಲಿ ಆಸಕ್ತಿಹೊಂದ ದವರೆಲ್ಲರೂ, ಸನ್ಯಾಸಿಗಳು. ಇದರಲ್ಲಿ ವರ್ಗಭೇದವಿಲ್ಲ. ವರ್ಣಭೇದವಿಲ್ಲ. ವಯೋಭೇದವಿಲ್ಲ. ಲಿಂಗಭೇದವಂತೂ ಇಲ್ಲವೇ ಇಲ್ಲ!"

"ಹಾಗಾದಲ್ಲಿ ಸಂಸಾರದಲ್ಲಿ ವಿರಕ್ತೆಯಾಗದ ವಿಧವೆಯೊಬ್ಬಳನ್ನು ನೀವು ಕೈಹಿಡಿಯಲು ಒಪ್ಪುವಿರಾ?"

"ಖಂಡಿತವಾಗಿಯೂ" ಎಂದ ಸದಾಶಿವ.

ಈ ವೇಳೆಗೆ ಸದಾಶಿವನಿಗೆ ಶಾರದೆ ಯಾರನ್ನು ಗುರಿಯಲ್ಲಿಟ್ಟುಕೊಂಡು ಮಾತನಾಡುತ್ತಿರುವಳೆಂದು ತಿಳಿದು ಹೋಗಿತ್ತು.

"ನೀವು ಆಡುತ್ತಿರುವ ಆಟವೇನು?" ಎಂದಳು ಶಾರದೆ ಹುಸಿ ನಗುತ್ತಾ.

"ಚದುರಂಗ!"

"ಆಟದಲ್ಲಿ ನಿಮ್ಮ ಗುರಿ?"

"ಮನಸ್ಸಿಗೆ ವ್ಯಾಯಾಮ."

"ನನ್ನ ಪ್ರಶ್ನೆ ಅದಲ್ಲ."

"ನಮ್ಮನ್ನು ನೆಚ್ಚಿದ ಅರಸು, ಮಂತ್ರಿ, ಪ್ಯಾದೆಗಳನ್ನು ಶತೃವಿನ ಬಾಯಿಗೆ ಬೀಳಿಸದೆ ಗುರಿ ಮುಟ್ಟಿಸುವುದು."

"ಶತೃವೇ ಮಿತ್ರರಾದರೆ?"

"ಆಗ ಆಟವೇ ಇಲ್ಲ."

"ಹೌದು ಜೀವನದಲ್ಲಿಯೂ ಬಡಿದಾಟವಿಲ್ಲ........"

"ಅಂತಾದರೆ?"

ಕ್ಷಣಕಾಲ ಸುಮ್ಮನಿದ್ದು ಹೇಳಿದಳು.

"ಹಾಗಾದರೆ ಶತೃವನ್ನು ಮಿತ್ರಳನ್ನಾಗಿ ಮಾಡಿಕೊಳ್ಳಿ!"

"ಶತೃವು ಯಾರು?" ತಿಳಿದೂ ತಿಳಿಯದವನಂತೆ ಪ್ರಶ್ನಿಸಿದ ಸದಾಶಿವ.

"ನಿನ್ನ ಎದುರಾಳು ಸುಮಿತ್ರೆ!"

"ಆಕೆಯನ್ನು ನಾನೆಂದೋ ಮಿತ್ರಳನ್ನಾಗಿ ಮಾಡಿಕೊಂಡಿದ್ದೇನೆ" ಎಂದ ಸುಮಿತ್ರೆಯ ಕಡೆ ನೋಡುತ್ತಾ.

ಈ ಮಾತು ಕೇಳಿ ಸುಮಿತ್ರೆ ಲಜ್ಜೆಯಿಂದ ತಲೆ ತಗ್ಗಿಸಿದಳು. ಅವಳ

ಮುಖ ಕೆಂದಾವರೆಯಾಯಿತು.

"ಸುಮಿತ್ರೆ ನೀನೂ ತಿಳಿಯದವಳಲ್ಲ. ನಿನಗೂ ಮದುವೆಯ ವಯಸ್ಸಾಗಿದೆ. ಮಕ್ಕಳಿಗೆ ಮದುವೆ ಮಾಡುವುದು ತಾಯಿ ತಂದೆಗಳೆನಿಸಿಕೊಂಡವರ ಕರ್ತವ್ಯ................ ಸದಾಶಿವ ನಿನಗೆ ಅನುರೂಪನಾದ ವರ. ನಿನ್ನನ್ನು ಮದುವೆಯಾಗಲು ದೊಡ್ಡ ಮನಸ್ಸು ಮಾಡಿ ಒಪ್ಪಿದ್ದಾರೆ. ನಿನ್ನ ಅಭಿಪ್ರಾಯ ವೇನು?"

ಸುಮಿತ್ರೆ ಕ್ಷಣಕಾಲ ಆಲೋಚಿಸಿದಳು.

ಅವಳಿಗೆ ತನ್ನ ಮದುವೆಯ ಪ್ರಶ್ನೆ ಇಷ್ಟು ಹಠಾತ್ತಾಗಿ, ಇಷ್ಟು ವಿಚಿತ್ರವಾಗಿ ತಲೆ ಹಾಕುವುದೆಂದು ಕನಸುಮನಸ್ಸಿನಲ್ಲಿಯೂ ತಿಳಿದಿರಲಿಲ್ಲ. ಸದಾಶಿವನೇನೋ ಎಲ್ಲ ವಿಷಯದಲ್ಲಿ ಸುಮಿತ್ರೆಯ ಪತಿದೇವನಾಗಲು ಅರ್ಹ. ಈ ಬಗ್ಗೆ ಸುಮಿತ್ರೆಯೂ, ಈ ಮೊದಲೇ ಎಷ್ಟೋ ಬಾರಿ, ಕನಸು ಕಟ್ಟಿ ಸುಖಿಸಿದ್ದಳು. ಆದರೆ ಸದಾಶಿವ—ಹಣವಂತರ ಮಗ--ಕಲಿತವನು. ತನ್ನನ್ನು ಆತ ವಿವಾಹವಾಗುವನೇ ಎಂದುಕೊಂಡು ಆ ವಿಷಯದಲ್ಲಿ ನಿರುತ್ಸಾಹ ತಾಳಿದ್ದಳು. ಆದರೆ ಸದಾಶಿವನೇ ಇಂದು, ಹೀಗೆ ಹೇಳಿದ ಮೇಲೆ?........... ಇದೇನು ಕನಸೋ ನನಸೋ?

ಆದರೂ ಸುಮಿತ್ರೆ ಹುಚ್ಚು ಸಂತೋಷದಲ್ಲಿ ಕೊಚ್ಚಿಹೋಗಲಿಲ್ಲ. ಅವಳು ಮತ್ತೇನನ್ನೋ ಆಲೋಚಿಸುತ್ತಾ ಕುಳಿತಳು.

ಮಾತಿಲ್ಲದೆ ಕುಳಿತ ಸುಮಿತ್ರೆಯನ್ನು ಕಂಡು, "ಸುಮಿತ್ರೆ, ಇದು ನಾಚುವ ವೇಳೆಯಲ್ಲ--" ಎಂದಳು ಶಾರದೆ.

"ನನಗಿನ್ನೂ ಒಂದೆರಡು ವರ್ಷ ಕಾಲೇಜು ಓದುವ ಆಸೆಯಿದೆ. ಏನೇ ಆಗಲಿ ನಾನು ಡಾಕ್ಟರ್ ಆಗದ ಹೊರತು ನಾನೊಬ್ಬಳು ಮನುಷ್ಯಳಲ್ಲ ಎಂದುಕೊಂಡಿದ್ದೇನೆ" ಎಂದಳು ಸುಮಿತ್ರೆ.

"ಇಂಥ ಆಸೆ ನೂರು ಇರಲಿ, ಅವುಗಳಿಗೆ ನನ್ನ ಬೆಂಬಲವುಂಟು" ಎಂದ ಸದಾಶಿವ.

"ಹಾಗಾದ್ರೆ................ " ಎಂದು ಸದಾಶಿವ ಹಾಗೂ ಶಾರದೆಯ ಕಡೆ ನೋಡಿ, ನೋಟ ಹಾಗೂ ಮುಖಮುದ್ರೆಯಲ್ಲಿ ತನ್ನ ಒಪ್ಪಿಗೆಯನ್ನು ಸೂಚಿಸಿದಳು ಸುಮಿತ್ರೆ.

ಇನ್ನು ಉಳಿದಿರುವುದು ಪಾರ್ವತಮ್ಮನವರ ಒಪ್ಪಿಗೆ! ಅವರು ಈ ಮೊದಲೇ ಈ ಬಗ್ಗೆ ತರ್ಕ-ವಿತರ್ಕವೆಸಗಿ—ಮಗನ ದಾರಿಯಲ್ಲಿ ಹೋಗುವುದೇ ಎಲ್ಲರಿಗೂ ಹಿತವೆಂದು ಅರಿತುಕೊಂಡಿದ್ದರು.

"ಮನೆಗೆ ಭಾಗ್ಯಲಕ್ಷ್ಮಿ ಬರುತ್ತಾಳೆಂದರೆ ಯಾರು ಬೇಡತನ್ನುತ್ತಾರೆ!" ಎಂದು ಹೇಳಿದರು ಆಕೆ ಶಾರದೆ ಪ್ರಶ್ನಿಸಿದಾಗ.

"ನಿಮ್ಮ ಯಜಮಾನರನ್ನು ಒಪ್ಪಿಸುವ ಭಾರ ನಿಮ್ಮದು. ನಮ್ಮವರನ್ನು ಒಪ್ಪಿಸುವ ಭಾರ ನನ್ನದು." ಎಂದು ನಕ್ಕಳು—ಶಾರದೆ.

"ನಮ್ಮ ಇಂದಿನ ಮಾತು-ಕತೆಯನ್ನೇ ನಿಶ್ಚಿತಾರ್ಥವೆಂದುಕೊಳ್ಳೋಣ.... ಅಮ್ಮ ಸುಮಿತ್ರ ನಿನ್ನ ಗಂಡನಿಗೆ, ಅತ್ತೆಗೆ ನಮಸ್ಕಾರ ಮಾಡಮ್ಮ" ಎಂದಳು ಶಾರದೆ.

ಸುಮಿತ್ರೆ ಆನಂದಭಾಷ್ಪನೇತ್ರೆಯಾಗಿ ಶಾರದೆ ಹೇಳಿದಂತೆ ಮಾಡಿದಳು.

ನಿಶ್ಚಿತಾರ್ಥವಾದ ಒಂದೇ ತಿಂಗಳಲ್ಲಿ ಸುಮಿತ್ರೆ ಸದಾಶಿವರು ಗಂಡ ಹೆಂಡಿರಾದರು.

ಮಡಿಕೇರಿಯ ಜನ ಇಂಥ ಮದುವೆ ತಾವಿನ್ನು ಕಾಣುವುದಿಲ್ಲವೆಂದು ಕೊಂಡಾಡಿದರು. ಊರಿನ ಬಡಬಗ್ಗರಿಗೆ ಎಂಟು ದಿನಗಳ ಕಾಲ ಅನ್ನ-ವಸ್ತ್ರಗಳ ದಾನಧರ್ಮ ನಡೆಯಿತು.

ಮದುವೆಗೆ ಮದರಾಸಿನ ಮಾನ್ಯ ಗೌರ್ನರರೂ, ಇತರ ಮಂತ್ರಿಗಳೂ ಶುಭ ಸಂವೇಶ ಕಳುಹಿಸಿದ್ದರು. ದೇಶದ ಮೂಲೆ ಮೂಲೆಗಳಿಂದ ಶುಭಾಶಯದ ಸುರಿಮಳೆಯೇ ಆಯಿತು. ಶಾರದೆಗೆ—ಮದುವೆಗೆ ಅತಿರಥ, ಮಹಾರಥರು ಬಂದು ಹರಸಿ ಹೋದುದು ಹೆಚ್ಚಲ್ಲ. ಆದರೆ ಜಯಂತನ ತಾಯಿ ಬಂದುದು ಹೆಚ್ಚು. ಶಾರದೆ ಮಡಿಕೇರಿ ಬಿಟ್ಟು ಹೋದ ಮೇಲೆ ಆಕೆಗೆ ಶಾರದೆಯ ಹಿರಿಮೆ ಅರ್ಥವಾಯಿತು. ಮಗ ಸೊಸೆ ತನ್ನ ಕಣ್ಣೆದುರಿನಲ್ಲಿಯೇ ಸುಖವಾಗಿದ್ದುದಲ್ಲದೆ, ತಮ್ಮ ಸಂಸಾರವೂ ನೆಮ್ಮದಿಯಾಗಿತ್ತು. ಇಷ್ಟಕ್ಕೆಲ್ಲಾ ಕಾರಣಳಾದ ಶಾರದೆಗೆ— ಕೋಪದ ಹೊತ್ತಿನಲ್ಲಿ ಎಂತಹ ಕೆಡಕು ಬಗೆದೆನಲ್ಲ—ಎಂದು ಆಕೆಗೆ ಒಂದೇಸಮನೆ ಪಶ್ಚಾತ್ತಾಪವಾಗಿತ್ತು. ಶಾರದೆ ಮಡಿಕೇರಿಯನ್ನು ಬಿಟ್ಟು ಹೊರಟು ಹೋಗಿದ್ದುದರಿಂದ ಅವಳಲ್ಲಿ ಕ್ಷಮಾಪಣೆ ಕೇಳುವ ಅವಕಾಶ ಬರಲಿಲ್ಲ. ಈಗ ಆಕೆ ಸುಮಿತ್ರೆಯ ಮದುವೆಗೆ ಕರೆಸಿಕೊಳ್ಳದೆ ಬಂದು

ತನ್ನ ತಪ್ಪುಗಳೆಲ್ಲವನನ್ನು ಮನ್ನಿಸಿಬಿಡಬೇಕೆಂದು ಪ್ರಾರ್ಥಿಸಿದಳು. ಪ್ರೀತಿ ಎಂಥ ವರನ್ನೂ ದಾರಿಗೆ ತರಬಲ್ಲುದೆಂಬುದಕ್ಕೆ ಇದೇ ನಿದರ್ಶನ.

ಶಾರದೆಗೆ ಕಣ್ಣೀರು ಬಂತು ; ಅದು ಸಂತೋಷದ ಕಣ್ಣೀರು !

## ೯

ಸುಮಿತ್ರೆಯ ತಲೆಯ ಮೇಲೆ ಅಕ್ಕೀಕಾಳು ಬಿದ್ದುದು ಶಾರದೆಯ ಹೊರೆ ಎಷ್ಟೋ ಇಳಿಸಿದಂತೆ ಆಗಿದೆ. ತಮ್ಮನ್ನೇ ನಂಬಿದ್ದ ಹುಡುಗಿಯನ್ನು ಸರಿಯಾದ ಮನೆ ಸೇರಿಸಿದ್ದಾಳೆ. ಇನ್ನು ಅವಳ ಬಗ್ಗೆ ಚಿಂತೆಯಿಲ್ಲ. ಇನ್ನು ಶಾರದೆ ಇತರ ವಿಷಯಗಳ ಕಡೆ ಗಮನ ಕೊಡಬಹುದು. ಈ ಕೆಲವು ತಿಂಗಳಿಂದ ಶಾರದೆಯ ಗಮನ ರಾಜಕೀಯದತ್ತ ಹರಿಯುತ್ತಿದೆ. ಸಮಾಜದಲ್ಲಿ ಕಾಣುವ ಎಲ್ಲ ಕುಂದು-ಕೊರತೆಗಳಿಗೆ—ಅನ್ಯಾಯ, ಅಜ್ಞಾನ, ಬಡತನ, ರೋಗರುಜಿನ ಗಳೆಲ್ಲಕ್ಕೂ ರಾಜಕೀಯ ಪಾರತಂತ್ರ್ಯವೂ, ಒಂದು ಪ್ರಬಲವಾದ ಕಾರಣವೆಂದು ತಿಳಿದು ಬಂದಿದೆ. ನಲವತ್ತು ಕೋಟಿ ಭಾರತೀಯರು ಜಗತ್ತಿನ ಪ್ರಜಾ ಸಂಖ್ಯೆ ಯಲ್ಲಿ ಐದನೆಯ ಒಂದು ಭಾಗವಾಗಿದ್ದುಕೊಂಡೂ, ಜೀವಚ್ಛವಗಳಂತೆ ಬಾಳನ್ನು ನೂಕುತ್ತಿರುವಲ್ಲಿ, ಅವರಿಗೆ ಅನ್ನದೇವರು ಪ್ರತ್ಯಕ್ಷನಾಗದ ಹೊರತು ಯಾವ ರಾಜ್ಯಕ್ರಾಂತಿಯೂ ಇಲ್ಲ. ಸಮಾಜಕ್ರಾಂತಿ ಇಲ್ಲ. ಅನ್ನ ! ಬಟ್ಟೆ !! ಇದೇ ಭಾರತೀಯನ ಜೀವನದ ಗುರಿ. ಉಳಿದದ್ದು ಅನಂತರ. ಈ ಅನ್ನ-ಬಟ್ಟೆಯ ಸಮಸ್ಯೆಯನ್ನು ಬಗೆಹರಿಸಲು ಆಳರಸರು ಪ್ರಯತ್ನಿಸಬೇಕು. ದೇಶದ ಸಂಪ ತ್ತನ್ನು ಕೊಳ್ಳೆ ಹೊಡೆಯುವುದನ್ನು ನಿಲ್ಲಿಸಬೇಕು. ಬಂಡವಾಳಗಾರರು ದೇಶದ ಜನರನ್ನು ಶೋಷಿಸುವುದನ್ನು ತಪ್ಪಿಸಬೇಕು. ತಾಸು ತಾಸುಗಳತನಕ ಯಂತ್ರದ ಗುಲಾಮನಾಗಿ ದುಡಿದು ದಣಿಯುವ ಕೂಲಿಕಾರನಿಗೆ ವಿಶ್ರಾಂತಿ, ಶುಶ್ರೂಷೆ ಬೇಕು. ಆದರೆ ಈ ಎಲ್ಲ ಮಾತು ಯಾರಿಗೆ ಬೇಕು ? ಇದು ಅರಣ್ಯರೋದನವಲ್ಲದೆ ಮತ್ತೇನು! ಜನ ಕಳೆದ ಐವತ್ತು ವರ್ಷಗಳಿಂದ ಬೇಡುತ್ತಾ ಬಂದಿದ್ದಾರೆ—'ನಮಗೆ ಸ್ವಾತಂತ್ರ್ಯ ಕೊಡಿ. ದಾಸ್ಯದ ನೊಗದಿಂದ ಬಿಡುಗಡೆ ಮಾಡಿ.' ಎಂದು.

ಬೇಡಿದರೆ ಬರುವುದೇ ಸ್ವಾತಂತ್ರ್ಯ! ರಕ್ತ ಹರಿಸಿ ಕಟ್ಟಿದ ಸಾಮ್ರಾಜ್ಯದ ಕಪಿ ಮುಷ್ಟಿಯಿಂದ ದೇಶ ರಕ್ತ ಹರಿಸದೆ ಬಿಡುಗಡೆಯಾದೀತೇ? ಜಗತ್ತಿನಲ್ಲಿ ಅನ್ಯಾಯದ ವಿರುದ್ಧ, ದಬ್ಬಾಳಿಕೆಯ ವಿರುದ್ಧ, ದಲಿತ ರಾಷ್ಟ್ರಗಳು ದಂಗೆ ಎದ್ದಿರುವಾಗ, ಭಾರತ ಸುಮ್ಮನಿರಲಾದೀತೇ? ಅದು ಒಕ್ಕೊರಲಿನಿಂದ ಕೂಗಿತು, ಸಾರಿತು. "ಸ್ವಾತಂತ್ರ್ಯ ನಮ್ಮ ಆಜನ್ಮಸಿದ್ಧ ಹಕ್ಕು." ಆಳರಸರು ಎಚ್ಚೆತ್ತರು. ಶತ್ರುಗಳು ಮನೆಯ ಬಾಗಿಲಿಗೇ ಬಂದಿದ್ದಾರೆ. ಶತ್ರುಗಳನ್ನು ಸೋಲಿಸಿ ಹಿಮ್ಮೆಟ್ಟಿಸಲು, ದೇಶದ ಜನತೆಯ ಸಹಕಾರ, ಸಹಾಯಗಳಿಲ್ಲದೆ ಅಸಾಧ್ಯವೆಂದು ಬಗೆದು, ಬ್ರಿಟಿಷರು ಸಂಧಾನಕ್ಕಾಗಿ ಕ್ರಿಪ್ಸ್ ಮಹಾಶಯನನ್ನು ಕಳುಹಿಸಿಕೊಟ್ಟರು. ಆತ ಭಾರತದ ನಾಯಕರೊಡನೆ ನಡೆಸಿದ ಮಾತುಕತೆ ವಿಫಲವಾಯಿತು. ಇದುವರೆಗೆ ಬೇಡಿದರೆ ಸ್ವಾತಂತ್ರ್ಯ ಸಿಗುವುದೆಂದು ತಿಳಿದಿದ್ದ ಜನತೆ, ಇಂದು ಕಿತ್ತುಕೊಳ್ಳದ ಹೊರತು ಸಿಗದೆಂದು ಮನಗೊಂಡಿತು. ರಾಷ್ಟ್ರದ ಜೀವನಾಡಿಯಾಗಿದ್ದ ಕಾಂಗ್ರೆಸ್ ಸಂಸ್ಥೆ ಕಾಯುವಷ್ಟು ದಿನ ಕಾದು ಬೇಸತ್ತು ಜುಲೈ ತಿಂಗಳಲ್ಲಿ ಸ್ವಾತಂತ್ರ್ಯ ನಿರ್ಣಯದ ಠರಾವು ಮಾಡಿತು. ಸ್ವಾತಂತ್ರ್ಯ ಸಮರದ ಗೊತ್ತು-ಗುರಿಗಳನ್ನು ಚರ್ಚಿಸಲು ಬೊಂಬಾಯಿಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಭೆ ಸೇರಿತು. ಭಾರತ ಜನತೆಯ ನಾಯಕ ಮಣಿಯಾಗಿದ್ದ ಮಹಾತ್ಮಾ ಗಾಂಧೀಜಿಯವರು ಎ. ಐ. ಸಿ. ಸಿ. ಸಭೆಯಲ್ಲಿ ಗುಡುಗಿದರು.

"ಇಂದು ವಿಶ್ವದಲ್ಲಿ ಶಾಂತಿಸ್ಥಾಪನೆಗಾಗಿ ಯುದ್ಧ ನಡೆದಿದೆ. ಪ್ರಪಂಚದಲ್ಲಿರುವ ಆಳು, ಅರಸರೆನ್ನುವ ಭೇದ ಅಳಿಯಲೆಂದೇ ಈ ವಿಶ್ವಮೇಧ ನಡೆಯುತ್ತಿವುದು. ಇದರಲ್ಲಿ ಭಾರತೀಯರಾದ ನಾವು ನಮ್ಮ ಪಾಲಿನ ಕರ್ತವ್ಯವನ್ನು ನೆರವೇರಿಸಬೇಕು! ಇದಕ್ಕೆ ಬ್ರಿಟಿಷ್ ಸರಕಾರ ಸದವಕಾಶ ಕಲ್ಪಿಸಿ ಕೊಡಬೇಕು. ನಾವು ಸ್ವತಂತ್ರರು! ಅನ್ಯ ರಾಷ್ಟ್ರಗಳ ಜೊತೆಯಲ್ಲಿ ಭುಜಕ್ಕೆ ಭುಜ ಕೊಟ್ಟು ಶಾಂತಿ ಸ್ಥಾಪನೆಗಾಗಿ ಯುದ್ಧ ಮಾಡುತ್ತೇವೆ. ನಮ್ಮದು ಅಹಿಂಸಾ ಯುದ್ಧ........ಪ್ರತಿಯೊಬ್ಬನಲ್ಲಿಯೂ ಆತ್ಮವಿಶ್ವಾಸ ಬೆಳೆಯಲಿ........ಅವನಿಗೆ ಅವನೇ ನಾಯಕ........ಸ್ವರ್ಗದ ಬಾಗಿಲು ತಾನಾಗಿಯೇ ತೆರೆದಿದೆ. ಈ ಯುದ್ಧದಲ್ಲಿ ಭಾಗ ವಹಿಸಲು ಪುಣ್ಯ ಬೇಕು. ಯುದ್ಧದಲ್ಲಿ ಮಡಿದರೆ ಮೋಕ್ಷವುಂಟು. ಬದುಕಿದರೆ ಸ್ವರಾಜ್ಯ. ಅದಂತೂ ಖಂಡಿತ. ಎಚ್ಚೆ ಭಾರತ ಪುತ್ರ—

' ಮಾಡು ಇಲ್ಲವೇ ಮಡಿ ! ' ಗಾಂಧೀಜಿಯ ಈ ಅಮರ ಮಂತ್ರ ನಾಡಿನ ಜನತೆಯ ಎದೆಯಲ್ಲಿ ನಿನಾದವಾಯಿತು.

ಜನ ಸ್ವಾತಂತ್ರ್ಯದ ರಣಗೀತೆಯನ್ನು ಕೇಳಿ ಹುಚ್ಚೆದ್ದು ಕುಣಿದರು. ಎಲ್ಲಿ ನೋಡಿದರೂ ' ಬ್ರಿಟಿಷರೇ ಭಾರತ ಬಿಟ್ಟು ಹೊರಡಿ ' ಎನ್ನುವ ರಣಗರ್ಜನೆ ! ಚಳುವಳಿ ಕಾಳ್ಗಿಚ್ಚಿನಂತೆ ಹರಡಿತು. ಜಾತಿ ಮತ್ಸರದ ವಿಷ ಕುಡಿದು ಬಡತನದ ಬಡವಾಗ್ನಿಯಲ್ಲಿ ಬೆಂದು, ನಿತ್ರಾಣಗೊಂದಿದ್ದ ನಾಡಿನವರ ಎದೆಯಲ್ಲಿ ಹೊಸ ರಕ್ತ ಉಕ್ಕಿ ಹರಿಯಿತು. ಆಬಾಲವೃದ್ಧರಾದಿಯಾಗಿ, ಎಲ್ಲರೂ ವೈರಿ ನಿರ್ಯಾಣಕ್ಕಾಗಿ, ಕಂಕಣ ತೊಟ್ಟು ಯುದ್ಧ ರಂಗಕ್ಕೆ ಇಳಿದರು. ಕ್ರಾಂತಿ ಕಾಳಿಯ ನಾಲಿಗೆ ನಾಡಿನ ನಾಲ್ದೆಸೆಗೂ ಚಾಚಿತು. ಅದು ಜನರಲ್ಲಿದ್ದ ಸಣ್ಣತನ ದ್ವೇಷಾಸೂಯೆಗಳನ್ನು ಕಬಳಿಸಿ, ಇಲಿಗಳಂತಿದ್ದ ಜನರನ್ನು ಹುಲಿಗಳನ್ನಾಗಿ ಮಾಡಿತು. ಇರುಳಿಗೆ ಬರಲು, ನಡುಗುತ್ತಿದ್ದ ಹೆಣ್ಣಿನ ಕರುಳಿನಲ್ಲಿ, ಕಲಿತನದ ಕೆಚ್ಚು ಕೊನರಿಸಿತು. ಹೀಗಿರುವಲ್ಲಿ ಶಾರದೆ ಕಣ್ಣುಮುಚ್ಚಿ ಕುಳಿತುಕೊಳ್ಳಬಲ್ಲಳೇ ?

ಶಾರದೆಗಂತೂ ಬೊಂಬಾಯಿಯಲ್ಲಿ ಎ. ಐ. ಸಿ. ಸಿ. ಸಭೆ ನಡೆಯಲಿರುವ ಸುದ್ದಿ ಕೇಳಿದ ಲಾಗಾಯಿತು ಎದೆ ಒಂದೇಸಮನೆ ಉದ್ವೇಗದಿಂದ ಹೊಡೆದುಕೊಳ್ಳುತ್ತಿತ್ತು. ಅಲ್ಲಿ ಏನು ನಿರ್ಧರವಾಗುವುದೋ ? ನಾಡಿನ ನಾಯಕರು ಅಂತಿಮ ಸಮರದ ಸಂದೇಶ ಸಾರಿದರೆ, ತನ್ನ ಪ್ರತಿಕ್ರಿಯೆ ಏನು ? ತಾನಂತೂ ಚಳುವಳಿಗೆ ಧುಮುಕುವುದು ನಿಜ. ತನ್ನೊಂದಿಗೆ ಭಗಿನೀ ಸಮಾಜದ ಗೆಳತಿಯರೂ ಸಹಕರಿಸಿದರೆ, ಚಳುವಳಿ ಬಿರುಸಾಗುವುದು. ಆದರೆ ಸಮಾಜದ ಸದಸ್ಯರಲ್ಲಿಬಹುಮಂದಿ ಅಧಿಕಾರಿಗಳ ಮನೆಯವರು. ಚಳುವಳಿಗೆ ಖಂಡಿತ ಬೆಂಬಲ ಕೊಡುವುದಿಲ್ಲ. ಇನ್ನು ಕಾಲೇಜು ಹುಡುಗಿಯರ ಮಾತು ! ಎಂದುಕೊಂಡು ಲೀಲಾವತಿಯೊಂದಿಗೆ ಮಾತನಾಡಿ ಕಾಲೇಜಿನ ಹುಡುಗಿಯರಿಗೆ ಈಗಿನಿಂದಲೇ ಮುನ್ಸೂಚನೆ ಕೊಡಲು ತಿಳಿಸಿದಳು.

ಈ ಬಾರಿ ಸ್ವಾತಂತ್ರ್ಯದೇವಿ ಎಷ್ಟು ಜನರನ್ನು ಆಹುತಿ ತೆಗೆದುಕೊಳ್ಳುವಳೋ ! ಸ್ವಾತಂತ್ರ್ಯದೇವಿಯ ನವಜನ್ಮಕ್ಕೆ ಎಷ್ಟೊಂದು ಮಕ್ಕಳ ರಕ್ತ ಮಾಂಸದ ಅಭಿಷೇಕ ನಡೆಯಬೇಕೋ ! ಎಷ್ಟು ಜನ ತಮ್ಮ ತನು-ಮನ-ಧನಗಳನ್ನು ಅರ್ಪಿಸಬೇಕೋ ಬಲ್ಲವರು ಯಾರು ?

ಎಲ್ಲರೂ ಎದುರು ನೋಡುತ್ತಿದ್ದ ದಿನ ಬಂದೇ ಬಂತು. ಎ. ಐ. ಸಿ. ಸಿ. ಸಭೆ ಆರಂಭವೂ ಆಯಿತು. ನಾಯಕರು ನಾಡಿಗೆ ಕ್ರಾಂತಿ ಸಂದೇಶವನ್ನು ಕೊಟ್ಟಿದ್ದೂ ಆಯಿತು. ಗಾಂಧೀಜಿಯವರಂತೂ ನಿರ್ದಾಕ್ಷಿಣ್ಯವಾಗಿ ಹೇಳಿ ಬಿಟ್ಟಿದ್ದರು. "ಬ್ರಿಟಿಷರೇ ಭಾರತದಿಂದ ತೊಲಗಿರಿ!" ಜನ, ಗಾಂಧೀಜಿಯ ಬಾಯಿಂದ ಇನ್ನೇನು ಬರುವುದೋ ಎಂದು ಕಾದು ಕುಳಿತಿದ್ದಾಗ ಭಯಂಕರ ಸುದ್ದಿಯೊಂದು ಬಂತು. ಭಾನುವಾರದ ದಿನ ಬೆಳಗಾಗುವ ಮುನ್ನವೇ ಸರಕಾರ ನಾಯಕರನ್ನು ಸೆರೆಹಿಡಿದು ಯಾವುದೋ ಅಜ್ಞಾತ ಸ್ಥಳಕ್ಕೆ ಕೊಂಡೊಯ್ದಿದ್ದಾರೆ ಎನ್ನುವ ಸುದ್ದಿ! ಶಾರದೆ ಈ ಸುದ್ದಿ ಕೇಳಿ, ಕ್ಷಣಕಾಲ ಮೂಕಳಾಗಿ ಕುಳಿತಳು. ಅನಂತರ ಚೇತರಿಸಿಕೊಂಡು, ಭಗಿನೀ ಸಮಾಜಕ್ಕೆ ಧಾವಿಸಿದಳು. ಅಲ್ಲಿ ಸರಕಾರ ಕೈಕೊಂಡ ಕೆಲಸವನ್ನು ಪ್ರತಿಭಟಿಸಲು ಸಭೆ ಸೇರಿಸಲು ಪ್ರಯತ್ನಿಸಿದಳು. ಇದು ವರೆವಿಗೆ ಶಾರದೆಯ ಎಲ್ಲ ಚಟುವಟಿಕೆಗಳಲ್ಲಿ ಬಲಭುಜವಂತಿದ್ದ ಯಶೋದಾಬಾಯಿ ಶಾರದೆಯನ್ನು ಬೇರೆ ಕರೆದು ಸರಕಾರದಿಂದ ರಕ್ಷಿತವಾದ ಭಗಿನೀ ಸಮಾಜ ರಾಜಕೀಯಕ್ಕೆ ಕೈ ಹಾಕುವುದು ಸರಿಯಲ್ಲವೆಂದು ಹೇಳಿದಳು. ಈ ಮಾತು ಕೇಳಿ ಶಾರದೆಗೆ ಆಶ್ಚರ್ಯವಾಯಿತು. ಈಕೆ ಮೊದಲಿನ ಯಶೋದಾಬಾಯಿಯೇ ಎಂದು ಸಂದೇಹವೂ ಆಯಿತು. ಕಾಲಕ್ರಮದಲ್ಲಿ ಅರಿವಾಯಿತು, ಆಕೆ ಗಂಡನ ಅಪ್ಪಣೆಯನ್ನು ಪಾಲಿಸಲು ಬಂದಿದ್ದಾಳೆ ಎಂದು. ಆತ ಎಷ್ಟೆಂದರೂ ಮ್ಯಾಜಿಸ್ಟ್ರೇಟ. ದೇಶದ ಶಾಂತಿ ಸ್ಥಾಪನೆ, ಆತನ ಹೆಗಲ ಮೇಲೆ ಬಿದ್ದಿದೆ ಎಂದು ತಿಳಿದವನು. ಆತನ ಪತ್ನಿ ಯಶೋದಾ ಬಾಯಿ ಎಂದ ಮೇಲೆ ಕೇಳುವದೇನು?

ಶಾರದೆ ಯಶೋದಾಬಾಯಿಯ ಮಾತನ್ನು ಧಿಕ್ಕರಿಸಿ, ಸಮಾಜದಲ್ಲಿಯೇ ಸಭೆ ಸೇರಿಸುವುದಾಗಿ ನಿಶ್ಚಯಿಸಿದಳು. ಇಬ್ಬರಲ್ಲಿ ಬಹುಕಾಲದಿಂದ ಇದ್ದ ಗೆಳೆತನ ರಾಜಕೀಯದ ಬೆಂಕಿಯಲ್ಲಿ ಸುಟ್ಟುಹೋಯಿತು.

"ಸಭೆ ಸೇರಿಸಲು ನಾನು ಅವಕಾಶ ಕೊಡುವುದಿಲ್ಲ" ಎಂದಳು ಮ್ಯಾಜಿಸ್ಟ್ರೇಟರ ಹೆಂಡತಿಯ ಗತ್ತಿನಲ್ಲಿ ಯಶೋದಾಬಾಯಿ.

"ನಾನು ಸಭೆ ಸೇರಿಸುವುದೇ ನಿಜ!"

"ನಾವು ಪೋಲೀಸರಿಗೆ ಹೇಳಿ ಕಳುಹಿಸಬೇಕಾಗುತ್ತದೆ!"

ಮಾತಿಗೆ ಮಾತು ಬೆಳೆದು ಪರಿಸ್ಥಿತಿ ಹದಗೆಟ್ಟಿತು. ಆಗ ಲೀಲಾವತಿ

ನಡುವೆ ತಲೆಹಾಕಿ, "ಶಾರದೆ ಇಲ್ಲಿ ಸಭೆ ಸೇರಿಸಲು ಎಷ್ಟು ಜನವಿದ್ದಾರೆ. ಹತ್ತು ಮಂದಿಗೆಲ್ಲಾ ಒಂದು ಸಭೆಯೇ. ಇದೇ ಕೆಲಸವನ್ನು ಹೊರಗೆ ಮಾಡಿದರೆ ಸಾವಿರಾರು ಜನ ಸೇರುತ್ತಾರೆ. ಏಕೆ ವೃಥಾ ಕಂಠ ಶೋಷಣೆ." ಎಂದು ಶಾರದೆಯನ್ನು ಬಲವಂತವಾಗಿ ಎಳೆದುಕೊಂಡು ಮಹಾರಾಣೀ ಕಾಲೇಜಿನ ಮುಂದಕ್ಕೆ ಕರೆದುಕೊಂಡು ಹೋದಳು.

ಕಾಲೇಜಿನ ಬಳಿ ಹುಡುಗಿಯರೆಲ್ಲ ಸಭೆ ಸೇರಿದ್ದರು. ವಿದ್ಯಾರ್ಥಿನಿ ಮುಖಂಡಳು ಹುಡುಗಿಯರನ್ನು ಉದ್ದೇಶಿಸಿ ಮಾತನಾಡಲು ಶಾರದೆಯನ್ನು ಪ್ರಾರ್ಥಿಸಿದಳು. ಶಾರದೆಗೆ ಬಹಿರಂಗ ಸಭೆಗಳಲ್ಲಿ ಮಾತನಾಡಿ ರೂಢಿ ಕಡಿಮೆ. ಆದರೇನು? ಅವಳು ಮಾತನಾಡಲು ತೊಡಗಿದೊಡನೆಯೇ ಆವೇಶ ಬಂದು ಉಜ್ವಲವಾಗಿ ಭಾಷಣ ಮಾಡಿಬಿಟ್ಟಳು.

'ಇನ್ನು ಮೇಲೆ ನಿಮಗೆ ನೀವೇ ನಾಯಕರು........ನೀವು ಯಾವ ಕೆಲಸ ಮಾಡಿದರೂ ಶಾಂತಿಯಿಂದ ಶಿಸ್ತಿನಿಂದ ಮಾಡಬೇಕು. ಶಾಲಾ-ಕಾಲೇಜುಗಳನ್ನು ಬಹಿಷ್ಕರಿಸಿರಿ. 'ಮಾಡಿ ಇಲ್ಲವೇ ಮಡಿಯಿರಿ' ಎನ್ನುವ ರಣಗೀತೆಯನ್ನು ಹಳ್ಳಿ ಹಳ್ಳಿಗಳಲ್ಲಿ ಪ್ರಚಾರ ಮಾಡಿ. ಎಲ್ಲ ಕೆಲಸಗಳಲ್ಲಿ ಗಂಡಸರಿಗೆ ಮಾರ್ಗದರ್ಶಕರಾಗಬೇಕೇ ಹೊರತು ಅವರಿಂದ ಹೇಳಿಸಿಕೊಳ್ಳಬಾರದು!........ಇದು ಅಂತಿಮ ಹೋರಾಟ. ಇದನ್ನು ಯಶಸ್ವಿಯಾಗಿಸುವುದೂ ಬಿಡುವುದೂ ನಿಮ್ಮ ಮೇಲಿನ ಹೊಣೆಗಾರಿಕೆ. ಈ ಯುದ್ಧದಲ್ಲಿ ಸೋತು ಒಮ್ಮೆಟ್ಟುವುದಕ್ಕಿಂತ ರಣಾಂಗಣದಲ್ಲಿ ಮಡಿಯುವುದು ಸಾವಿರ ಪಾಲು ಲೇಸು!.......... ನಿಮ್ಮ ಹೋರಾಟದಲ್ಲಿ ಸರಕಾರ ಸಾವಿರ ವಿಘ್ನ ತಂದೊಡ್ಡುತ್ತದೆ; ಸಾವಿರ ಬಗೆಯಲ್ಲಿ ಹಿಂಸಿಸುತ್ತದೆ; ಆದರೆ ಅವುಗಳನ್ನು ಎದುರಿಸಿ ಮುಂದೆ ಸಾಗುವ ಕಲಿತನ ನಿಮ್ಮದಾಗಲಿ!' ಇದೇ ಶಾರದೆಯ ಭಾಷಣದ ಸಾರಾಂಶ.

ಸಭೆ ಮುಗಿದ ನಂತರ ಮೆರವಣಿಗೆ ನಡೆಯಿತು. ಮೆರವಣಿಗೆ ಮಹಾರಾಜಾ ಕಾಲೇಜಿನ ಮುಂದೆ ಸೇರಿದ್ದ ವಿದ್ಯಾರ್ಥಿ ಸಾಗರವನ್ನು ಸೇರಿಕೊಂಡಿತು. ಸಭೆಯಲ್ಲಿ ವಿದ್ಯಾರ್ಥಿ ಮುಖಂಡರು ಸರಕಾರದ ವರ್ತನೆಯನ್ನು ಖಂಡಿಸಿ ಠರಾವುಗಳನ್ನು ಮಾಡಿದರು. ಚಳುವಳಿಯನ್ನು ಹೇಗೆ ನಡೆಸಬೇಕೆಂಬ ಬಗ್ಗೆ, ಹುಡುಗ-ಹುಡುಗಿಯರಿಗೆ ತಿಳುವಳಿಕೆ ಕೊಡಲು, ಅದಕ್ಕಾಗಿ ಒಂದು ಕಾರ್ಯನಿರ್ವಾಹಕ ಮಂಡಳಿಯನ್ನು ಚುನಾಯಿಸಿದರು. ಅಂದಿನ ಸಭೆ ಊರಿನ

ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ತೆಗೆದು ಜೈಕಾರಗಳೊಡನೆ ಪರಿಸಮಾಪ್ತಿಯಾಯಿತು.

ಆ ಸಂಜೆ ಸುಬ್ಬರಾಯನ ಕೆರೆಯಲ್ಲಿ ಪ್ರಚಂಡ ಸಭೆ. ಹತ್ತು ಸಾವಿರಕ್ಕೂ ಮೇಲ್ಪಟ್ಟು ಜನ ಸೇರಿದ್ದರು. ಆ ಸಭೆಯಲ್ಲಿ ಭಾಷಣ ಮಾಡುತ್ತಾ ಶಾರದೆ ಎಂದಳು: "ಈ ಸಮರದಲ್ಲಿ ಗಂಡಿನ ಪಾತ್ರವು ಎಷ್ಟು ಮುಖ್ಯವೋ ಹೆಣ್ಣಿನ ಪಾತ್ರವೂ ಅಷ್ಟೇ ಮುಖ್ಯ. ಹೆಣ್ಣು ಅಡಿಗೆಯ ಮನೆಯನ್ನು ಬಿಟ್ಟು ರಾಜಕೀಯ ಸಮರದಲ್ಲಿ ಧುಮುಕಲಿ. ಸಟ್ಟುಗ ಹಿಡಿಯುವ ಕೈ, ತೊಟ್ಟಿಲು ತೂಗುವ ಕೈ, ತ್ರಿರಂಗಿ ಧ್ವಜವನ್ನು ಹಿಡಿದು, ಜನತೆಯನ್ನು ಹುರಿದುಂಬಿಸಲಿ! ಇಂದು ಇದೇ ಅವಳ ನಿಜವಾದ ಕರ್ತವ್ಯ. ನಿಜವಾದ ಸೇವೆ!"

ದಿನ ಕಳೆದಂತೆ ಚಲೇಜಾವ್ ಚಳುವಳಿಗೆ ಬಿಸಿ ಏರಿತು. ದೇಶದಲ್ಲೆಲ್ಲಾ ಮುಷ್ಕರದ ಸುದ್ದಿಯ ಹೊರತು ಬೇರೆ ಸುದ್ದಿಯಿಲ್ಲ. ಎಲ್ಲೆಲ್ಲೂ ಗೋಲೀಬಾರ್. ಮಕ್ಕಳು ಮರಿಗಳೆನ್ನದೆ ಗುಂಡಿಕ್ಕಿ ಕೊಲ್ಲುವ ನರಮೇಧ! ನಿರಪರಾಧಿ ನಿಶ್ಶಸ್ತ್ರ ಜನರ ಮೇಲೆ ಲಾಠೀ ಛಾರ್ಜ್. ಬೊಂಬಾಯಿ ಮೊದಲಾದ ನಗರಗಳಲ್ಲಿ ರೊಚ್ಚಿಗೆದ್ದ ಜನ ಅಹಿಂಸೆಯನ್ನು ಮರೆತು ಹಿಂಸೆಗೂ ಕೈಯಿಕ್ಕಿದರು. ಪೋಲೀಸ್ ಮಿಲಿಟರಿ ವಾಹನಗಳನ್ನು ಸುಟ್ಟು ಭಸ್ಮ ಮಾಡಿದರು. ಅನೇಕ ಅಂಚೆ ಮನೆ, ರೈಲ್ವೆ ಸ್ಟೇಷನ್‌ಗಳು ಅಗ್ನಿ ನಾರಾಯಣನ ಪಾಲಾದವು. ರೈಲ್ವೆ ಹಳಿಗಳನ್ನು ಕಿತ್ತರು. ತಂತಿಗಳನ್ನು ಕತ್ತರಿಸಿದರು. ಇಂಥವರನ್ನು ಶಿಕ್ಷಿಸಲು ಸರ್ಕಾರದವರು ಭಾರತ ರಕ್ಷಣಾ ಕಾನೂನಿನ ಜೊತೆಗೆ ನೂರೆಂಟು ಆರ್ಡಿನೆನ್ಸ್‌ಗಳನ್ನು ರಚಿಸಿದರು. ಪೋಲೀಸ್ ಹಾಗೂ ಮಿಲಿಟರಿಯವರಿಗೆ ದಂಗೆ ಅಡಗಿಸಲು ಸರ್ವಾಧಿಕಾರ ಕೊಟ್ಟರು. ಅವರೋ, ಅಧಿಕಾರ ಮತ್ತರಾಗಿ ಕೋಪದಿಂದ ಉದ್ರಿಕ್ತರಾಗಿ, ಸ್ವಜನರ ಕೊಲೆಗೆ ಟೊಂಕ ಕಟ್ಟಿದರು. ಅವರು ಅಪರಾಧಿ, ನಿರಪರಾಧಿ ಎಂದು ನೋಡದೆ, ಸಿಕ್ಕಿದವರನ್ನು ಸದೆಬಡಿದರು. ಹುಚ್ಚರು, ದಡ್ಡರು, ಅಂಗಹೀನರು, ಮುದುಕರೆನ್ನದೆ, ಎಲ್ಲರನ್ನೂ ವಿಚಾರಣೆಯಿಲ್ಲದೆ ಸೆರೆಮನೆಗೆ ತುಂಬಿದರು. ಕಡೂರು ಜಿಲ್ಲೆಯಲ್ಲಿ ಎರಡು ಬಾರಿ ತಂತಿ ಕತ್ತರಿಸಿದ ರಿಂದ, ಎಂಟು-ಹತ್ತು ವರ್ಷದ ಹುಡುಗರ ಮೇಲೆ ರಾಜದ್ರೋಹದ ಆಪಾದನೆ ಹೊರಿಸಿ, ಜೈಲಿಗೆ ಹಾಕಿದರು!

ಜನ ಮಾತ್ರ ಸರಕಾರದ ಪಾಶವೀ ಶಕ್ತಿಗೆ ಮಣಿಯಲಿಲ್ಲ! ಸರಕಾರ

ತುಳಿದಷ್ಟೂ ಜನ ಚೇತರಿಸಿಕೊಂಡು ಮೇಲೇಳುತ್ತಿದ್ದರು. ಶಾಲಾ-ಕಛೇರಿಗಳ ಮುಂದೆ ಪಿಕೆಟಿಂಗ್ ನಡೆದು ಅವುಗಳನ್ನು ಮುಚ್ಚಬೇಕಾಯಿತು. ಅನೇಕ ಅಧಿಕಾರಿಗಳು ಕೆಲಸಕ್ಕೆ ರಾಜೀನಾಮೆಯಿತ್ತು ಚಳುವಳಿಗೆ ಧುಮುಕಿದರು. ಲೀಲಾವತಿ--ಅವಳೇ ಹೆಣ್ಣು ಮಕ್ಕಳ ಸೇನಾನಿ. ಆಕೆ, ಶಾರದೆ, ಹಾಗೂ ಇತರರು ವಿದ್ಯಾರ್ಥಿ ಮುಖಂಡರೊಡನೆ ಸೇರಿ, ಗುಪ್ತವಾಗಿ ಕಾರ್ಯಕ್ರಮವನ್ನು ಪರಿಶೀಲಿಸಿ ಚಳುವಳಿಯ ಕಾವು ಆರದಂತೆ ನೋಡಿಕೊಂಡರು. ಸುಮಿತ್ರೆ ಕೋರ್ಟಿನ ಮುಂದೆ 'ಪಿಕೆಟಿಂಗ್' ನಡೆಸಿದಳೆಂದು ಅವಳನ್ನು ಬಂಧಿಸಿ ಒಂದೆರಡು ತಿಂಗಳ ಕಾಲ ಸೆರೆಮನೆಗೆ ಹಾಕಿದರು.

ಮುಂದಾಳುಗಳನ್ನೆಲ್ಲಾ ಹಿಡಿದುಬಿಟ್ಟ ಮೇಲೆ ಚಳುವಳಿ ತಣ್ಣಗಾಗುವುದೆಂದು ಸರಕಾರ ಊಹಿಸಿ, ಕೈಗೆ ಸಿಕ್ಕಿದವರನ್ನು ಕೈಸೆರೆ ಹಿಡಿದರು. ಚಳುವಳಿಗಾರರ ದೊಡ್ಡ ಗುಂಪು ಭೂಗತವಾಗಿ ಇದ್ದುಕೊಂಡು ಸರಕಾರಕ್ಕೆ ಕಿರುಕುಳ ಕೊಡಲು ತೊಡಗಿದರು.

ಒಂದು ದಿನ ಅರಮನೆಯ ಮುಂಭಾಗದ ಬಯಲಿನಲ್ಲಿ ಸಭೆ ಸೇರಿಸಲು ಕಾರ್ಯಕರ್ತರಲ್ಲಿ ನಿರ್ಣಯವಾಯಿತು. ಊರಿನ ಜನವೆಲ್ಲ ಸಾಲುಗಟ್ಟಿಕೊಂಡು ಬಂದು ಟೌನ್‌ಹಾಲ್ ಬಯಲಿನಲ್ಲಿ ಸೇರಿದರು. ಜನರ ಜಯಘೋಷ ನಭೋಮಂಡಲವನ್ನು ಬಿರಿಯಿತು. ಬಯಲು ಬಿಳೀ ಟೋಪಿಗಳ ಸಮುದ್ರದಂತೆ ಕಂಡಿತು. ಭಾಷಣಕಾರರು ಇನ್ನೇನು ಭಾಷಣ ಮಾಡಬೇಕೆಂದು ಇರುವಾಗ, ಮೂರು ನಾಲ್ಕು ಪೋಲೀಸು ವ್ಯಾನುಗಳು ಬಂದವು. ಜಿಲ್ಲಾಧಿಕಾರಿ ಸಭೆಯನ್ನು ಬರಖಾಸ್ತು ಮಾಡಲು ಅಪ್ಪಣೆ ಮಾಡಿದ. ಜನ ಕೂತಲ್ಲಿಂದ ಕದಲಲಿಲ್ಲ. ಜಿಲ್ಲಾಧಿಕಾರಿ ಲಾಠೀ ಛಾರ್ಜು ಮಾಡಲು ಹುಕುಂ ಮಾಡಿದ. ಎಲ್ಲಿಂದಲೋ, ಕಲ್ಲೊಂದು ಬಂದು, ಜಿಲ್ಲಾಧಿಕಾರಿಯ ಮುಖಕ್ಕೆ ಬಡಿಯಿತು. ಜಿಲ್ಲಾಧಿಕಾರಿ ಸಿಟ್ಟಿಗೆದ್ದು ಕುದುರೆ ರಾಹುತರನ್ನು ಜನರ ಮೇಲೆ ಅಟ್ಟಿದ. ಜನ 'ಹೋ' ಎಂದು ಕೂಗಿಕೊಂಡು ದಿಕ್ಕಾಪಾಲಾಗಿ ಚದುರಿದರು. ಕುದುರೆಗಳ ಕಾಲ್ತುಳಿತಕ್ಕೆ ಸಿಕ್ಕಿ ಜನ ಚೀರಿದರು. ಹತ್ತು ನಿಮಿಷದಲ್ಲಿ ಸಭೆ ಚದುರಿತು. ಬಯಲಿನಲ್ಲಿ ಗಾಯಾಳುಗಳ ಸೇವೆ ಮಾಡುತ್ತಾ ಉಳಿದಿದ್ದ ಮಂದಿಯನ್ನು ಸೆರೆ ಹಿಡಿದು ಮೋಟಾರುಗಳಲ್ಲಿ ತುಂಬಿಕೊಂಡರು. ಸೆರೆ ಸಿಕ್ಕಿದವರ ಪೈಕಿ ಶಾರದೆಯೂ ಒಬ್ಬಳು. ಅವಳು ಹೇಡಿಯಂತೆ ಓಡದೆ ಧೀರಳಂತೆ ಸಭಾಂಗಣದಲ್ಲಿ ನಿಂತಿದ್ದಳು!

ಸಭೆ ನಡೆಯಬೇಕಾಗಿದ್ದ ಸ್ಥಳದಲ್ಲಿ ಕರ್ಫ್ಯೂ ಜಾರಿ ಮಾಡಲಾಯಿತು. ಶಾರದೆ ತಮ್ಮನ್ನು ವಿಚಾರಣೆಗಾಗಿ ಕೋರ್ಟಿಗೆ ತೆಗೆದುಕೊಂಡು ಹೋಗುವರೆಂದು ತಿಳಿದಿದ್ದಳು. ಆದರೆ ಪೋಲೀಸು ವ್ಯಾನು ಮೈಸೂರು ಬಿಟ್ಟು ಕೊಡಗಿನ ರಸ್ತೆ ಹಿಡಿಯಿತು. ಆಗ ಒಳಗಿದ್ದ ಎಲ್ಲರಿಗೂ ತಮ್ಮನ್ನು ಎಲ್ಲಿಗೆ ಒಯ್ಯುವರೆಂದು ಆಶ್ಚರ್ಯ. ಬಹುಶಃ ಜೈಲುಗಳು ಭರ್ತಿಯಾಗಿರಬೇಕು. ಹೀಗಾಗಿ ತಮ್ಮನ್ನು ಬೇರೆ ಜೈಲಿಗೆ ಕರೆದೊಯ್ಯುತ್ತಿದ್ದಾರೆ ಎಂದುಕೊಂಡರು. ಅವರ ಊಹೆ ಸುಳ್ಳಾಯಿತು.

ಪೋಲೀಸ್ ವ್ಯಾನ್ ಹುಣಸೂರಿನ ಬಳಿ ನಿಲ್ಲದೆ, ಹೆಗ್ಗಡದೇವನ ಕೋಟೆ ಕಾಡಿನ ಸೀಳುದಾರಿಯಲ್ಲಿ ಮುಂದುವರೆದು ಒಮ್ಮೆ ಹಠಾತ್ತಾಗಿ ನಿಂತಿತು. ಪೋಲೀಸ್ ಜಮೇದಾರ್ ವ್ಯಾನಿನ ಬಾಗಿಲು ತೆರೆದು ಒಳಗಿದ್ದವರನ್ನು ಕೆಳಗಿಳಿಸಿ ಬಂದ ದಾರಿಯಲ್ಲಿ ಹಿಂದಿರುಗಿದ. ಸಂಜೆಕತ್ತಲು ಕವಿಯತೊಡಗಿತ್ತು. ಸುತ್ತಲೂ ಗಗನಚುಂಬಿತ ವೃಕ್ಷಶ್ರೇಣಿ. ಕಾಡು ಪ್ರಾಣಿಗಳ ಗರ್ಜನೆ ಸಂತತವಾಗಿ ಕೇಳಿಸುತ್ತಿತ್ತು. ಸೆರೆಯಾಳುಗಳಿಗೆ ದುರಾತ್ಮರೂ, ದಯಾಶೂನ್ಯರೂ ಆದ ಪೋಲೀಸಿನವರು ತಮ್ಮನ್ನು ಎಂತಹ ನಿರ್ಜನಾರಣ್ಯದಲ್ಲಿ ಬಿಟ್ಟು ಹೋಗಿದ್ದಾರೆ ಎಂದು ಹೆದರಿಕೆಯಾಯಿತು. ಶಾರದೆ ಅಂಜುಕುಳಿ ಸೆರೆಯಾಳುಗಳಿಗೆ ಧೈರ್ಯ ಹೇಳಿ, ಸಮಾಧಾನಪಡಿಸಿದಳು. ಅಕ್ಕಪಕ್ಕದಲ್ಲಿ ಹಳ್ಳಿಗಳೇನಾದರೂ ಇದ್ದರೆ, ಹೋಗಬಹುದೆಂದು ಯಾವನೋ ಒಬ್ಬ ಮರ ಹತ್ತಿ ನೋಡಿದನು. ಎಲ್ಲಿ ನೋಡಿದರೂ ಗಬೋ ಎಂದು ಎದೆ ಬಿರಿಯುವ ಕತ್ತಲಲ್ಲದೆ ಮತ್ತೇನೂ ಕಾಣಿಸಲಿಲ್ಲ.

ರಾತ್ರೆಯನ್ನು ಅಲ್ಲೇ ಕಳೆದು ಬೆಳಗಾದ ಮೇಲೆ, ಅಲ್ಲಿಂದ ಪಾರಾಗುವ ದಾರಿ ಹುಡುಕಬೇಕೆಂದು ನಿರ್ಣಯಿಸಿ, ಅಲ್ಲಿ ಬಿದ್ದಿದ್ದ ಕಡ್ಡಿ ಪುಳ್ಳೆಗಳನ್ನು ಆರಿಸಿ ತಂದು ಸೂಡಿ ಮಾಡಿದರು. ಅದರ ಬೆಳಕಿನಲ್ಲಿ ನೆಲವನ್ನು ಇದ್ದುದ್ದರಲ್ಲಿಯೇ ಸ್ವಚ್ಛಗೊಳಿಸಿದ್ದೂ ಆಯಿತು. ಎಲ್ಲರೂ ಉಟ್ಟವಸ್ತ್ರಗಳನ್ನು ಹಾಸಿ ಮಲಗಿದರು. ಆದರೆ ನಿದ್ರೆ ಹತ್ತಬೇಕಲ್ಲ! ಮೊದಲೇ ಹಸಿವು, ನೀರಡಿಕೆ, ಇದರ ಜೊತೆಗೆ ಹುಲಿ ಚಿರತೆಗಳ ಭಯ. ನಿದ್ರೆ ಹೇಗೆ ಬಂದೀತು. ರಾತ್ರೆಯೆಲ್ಲಾ ಸೆರೆಯಾಳುಗಳು ವಿವಿಧ ರೀತಿಯ ಮಾತುಕತೆಗಳಲ್ಲಿ ಕಳೆದರು. ಶಾರದೆ ತನಗೆ ತಿಳಿದ ಹತ್ತೆಂಟು ಸಂಗತಿಗಳನ್ನು ಹೇಳಿ ಎಲ್ಲರನ್ನೂ ರಂಜಿಸಿದಳು. ಅಂತೂ ಇಂತೂ

ಬೆಳಗಾಯಿತು. ರಾತ್ರೆ ಕಾಣದಿದ್ದ ಕಾಡುಕೋಳಿ–ನರಿ–ಗೂಗೆ–ನವಿಲುಗಳು ಅವರ ಕಣ್ಣುಮುಂದೆ ಸುಳಿದು ಹೋದುವು. ದೂರದಲ್ಲಿ ಜಿಂಕೆಯ ಹಿಂಡು ಒಮ್ಮೆ ಕಾಣಿಸಿಕೊಂಡು ಮತ್ತೆ ಮಾಯವಾಯಿತು. ಹತ್ತಿರದಲ್ಲಿ ಎಲ್ಲಿಯೋ ಹುಲಿಯ ಗರ್ಜನೆ, ಆನೆಗಳ ಕೂಗು ಕೇಳಿಸಿತು. ಎಂತಹ ಅಪಾಯಕರವಾದ ಸ್ಥಳದಲ್ಲಿ ತಾವು ರಾತ್ರೆಯನ್ನು ಕಳೆದೆವು ಎಂದು ಈಗ ಅವರಿಗೆ ಅರಿವಾಗಿ ಇನ್ನಿಷ್ಟು ಹೆದರಿಕೆಯಾಯಿತು.

ಬೆಳ್ಳಂಬೆಳಗಾದ ಮೇಲೆ ಚಳಿಯಲ್ಲಿ ಗಡಗಡನೆ ನಡುಗುತ್ತಾ ಸೆರೆಯಾಳು ಗಳು ಮೋಟರಿನ ಜಾಡನ್ನು ಗುರುತಿಸಿಕೊಂಡು ನಡೆದರು. ನಾಲ್ಕು ಮೈಲಿ ನಡೆದ ಮೇಲೆ ಒಂದೆರಡು ಹುಲ್ಲು ಜೋಪಡಿ ಇದ್ದ ಒಂದು ಹಳ್ಳಿ ಕಣ್ಣಿಗೆ ಬಿತ್ತು. ಅಲ್ಲಿನ ರೈತ-ಸೆರೆಯಾಳುಗಳ ಕರುಣ ಕಥೆ ಕೇಳಿ, ಮನಸೊಂದು, ತನ್ನ ಮನೆಯ ಲ್ಲಿದ್ದ ಹಾಲು ಮೊಸರನ್ನು ಕೊಟ್ಟನು. ಶಾರದೆ ಕಾಡಿನಲ್ಲಿ ಸಿಕ್ಕುವ ಗೆಡ್ಡೆ-ಗೆಣಸುಗಳನ್ನು ತರಿಸಿಕೊಂಡು ಎಲ್ಲರಿಗೂ ಹೊಟ್ಟೆಯಾರ ಅಡಿಗೆ ಮಾಡಿ ಹಾಕಿದಳು.

ಆ ಹಳ್ಳಿಯಿಂದ ಆರು ಮೈಲಿ ನಡೆದ ಮೇಲೆ ಸುಮಾರು ಇಪ್ಪತ್ತು ಮನೆ ಗಳುಳ್ಳ ಒಂದು ಗ್ರಾಮ. ಅಲ್ಲಿನ ಪಟೇಲ ಅವರನ್ನು ಪ್ರೀತಿಯಿಂದ ಬರಮಾಡಿ ಕೊಂಡು ಸತ್ಕರಿಸಿದ. ಅವನ ಸಹಾಯದಿಂದ ಒಂದು ಎತ್ತಿನ ಬಂಡಿಯನ್ನು ಹೂಂಚಿ, ಅದರಲ್ಲಿ ಕುಳಿತು ಸಂಜೆಯ ವೇಳೆಗೆ ಸರಕಾರಿ ರಸ್ತೆಗೆ ಬಂದು ಮುಟ್ಟಿ ದರು. ಸಂಜೆ ಮಡಿಕೇರಿಯಿಂದ ಹಿಂದಿರುಗಿ ಬರುತ್ತಿದ್ದ ಒಂದು ಲಾರಿ, ಅವ ರನ್ನು ಕೂಡಿಸಿಕೊಂಡು ರಾತ್ರೆ ಸುಮಾರು ಒಂಬತ್ತು ಗಂಟೆಯ ವೇಳೆಗೆ ಮೈಸೂ ರಿಗೆ ತಂದುಬಿಟ್ಟಿತು.

ಶಾರದೆ ಮನೆಗೆ ಬಂದಾಗ ಮನೆಗೆ ಬೀಗ ಹಾಕಿತ್ತು. ಅವಳು ನೇರ ಕಿಟ್ಟಣ್ಣ ಕೆಲಸ ಮಾಡುತ್ತಿದ್ದ ಫಲಾಹಾರ ಮಂದಿರಕ್ಕೆ ಹೋದಳು. ಹೋಟೆ ಲಿನ ಯಜಮಾನ ಕಿಟ್ಟಣ್ಣನ ಹೆಂಡತಿ ಎಂತಹ ಕ್ರಾಂತಿಕಾರಳಿರುವಳೆಂದು ಆಶ್ಚರ್ಯಪಟ್ಟ. ಮಾಲೀಕ ಹೊರಗೆ ತೋರಿಸಿಕೊಳ್ಳದಿದ್ದರೂ, ಅಂತರಂಗ ದಲ್ಲಿ ಗಾಂಧೀ ಭಕ್ತ. ಅವನು ಶಾರದೆಯನ್ನು ಅಲ್ಲೇ ಊಟ ಮಾಡಲು ಬಲ ವಂತ ಮಾಡಿದ. ಅಲ್ಲದೆ ಹಸಿದು ಬರುವ ಸತ್ಯಾಗ್ರಹಿಗಳಿಗೆ ತಾನು ಅನ್ನ ಹಾಕು ವುದಾಗಿ ಶಾರದೆಗೆ ಆಶ್ವಾಸನವಿತ್ತನು. ಇದರಿಂದ ಮನೆಯನ್ನೇ ಸೇರದೆ

ಹಗಲಿರಳು ದುಡಿಯುತ್ತಿದ್ದ ಅನೇಕ ಸತ್ಯಾಗ್ರಹಿಗಳಿಗೆ ಎಷ್ಟೋ ಸಹಾಯ ವಾಯಿತು.

ಸುಮಿತ್ರೆ ಡಿಟೆನ್ಯೂಸ್‌ದಲ್ಲಿದ್ದವಳು ವಿಚಾರಣೆನಡೆದು ಬಿಡುಗಡೆಯಾಗಿ ತಿಂಗಳಿಗೇ ಮನೆಗೆ ಬಂದಳು. ಸುಮಿತ್ರೆ ಸುಮ್ಮನೆ ಕೂಡುವ ಹುಡುಗಿಯಲ್ಲ. ಅವಳು ಮಾರನೆಯ ದಿನವೇ ಸುಮಾರು ಮುನ್ನೂರು ಮಂದಿ ಸತ್ಯಾಗ್ರಹಿಗಳನ್ನು ಕಟ್ಟಿಕೊಂಡು ಅರಸೀಕೆರೆಗೆ ಟಿಕೆಟ್ ಇಲ್ಲದೆ ಪ್ರಯಾಣ ಬೆಳೆಸಿದಳು. ಹಾಸನದ ನಿಲ್ದಾಣದಲ್ಲಿ ಪೋಲೀಸ್ ಸೂಪರಿಂಟೆಂಡೆಂಟರು ಲಾರಿ ಬಂದೂಕು ಸಮೇತ ಟಿಕೆಟ್ ಇಲ್ಲದೆ ಬರುವವರ ಮೇಲೆ ಕೈಮಾಡಲು ಕಾದಿದ್ದರು. ಇದನ್ನರಿತ ಸತ್ಯಾಗ್ರಹಿಗಳು ಸುಮಾರು ಮುವತ್ತೈದು ಮೈಲುಗಳನ್ನು ನಡೆದುಕೊಂಡೇ ಬಂದು ಪೋಲೀಸರಿಗೆ ಮಣ್ಣು ಮುಕ್ಕಿಸಿದರು. ಹಾಸನದಲ್ಲಿ ಯಾರೋ ಪುಣ್ಯಾತ್ಮರು ಸತ್ಯಾಗ್ರಹಿಗಳಿಗೆ ಒಳ್ಳೆಯ ಊಟ ಹಾಕಿದರು. ಅದನ್ನುಂಡು ಮತ್ತೆ ಮೈಸೂರಿಗೆ ಟಿಕೆಟ್ ಇಲ್ಲದೆ ಪ್ರಯಾಣ!

ನಮ್ಮ ರೈಲಿಗೆ ನೀವೇಕೆ ಕಾಸು ಕೊಡಬೇಕು?

ಶಾರದೆಯ ಚಟುವಟಿಕೆಗಳಲ್ಲಿ ಈಗ ಕೊಂಚ ಬದಲಾವಣೆಯಾಯಿತು. ಲೀಲಾವತಿ ಮತ್ತಿತರ ಮುಖಂಡರು ಸೆರೆಮನೆ ಸೇರಿಬಿಟ್ಟಿದ್ದುದರಿಂದ ವಿದ್ಯಾರ್ಥಿಗಳಿಗೆ ಸರಿಯಾದ ನಾಯಕರಿಲ್ಲದೆ ಅನಾಯಕವಾಗಿ ಬಿಟ್ಟಿತ್ತು. ಸತ್ಯಾಗ್ರಹದ ಕೇಂದ್ರ ಕಚೇರಿಯಾಗಿದ್ದ ಮಹಾರಾಣೀ ಕಾಲೇಜು ಹಾಸ್ಟೆಲನ್ನು ಮುಚ್ಚಿ ಅಲ್ಲಿದ್ದ ಹುಡುಗಿಯರನ್ನು ಅವರ ಊರುಗಳಿಗೆ ಕಳುಹಿಸಿಬಿಟ್ಟಿದ್ದರು.

ಹೀಗಾಗಿ ಚಳುವಳಿ ಕೊಂಚ ಕೊಂಚ ಸಪ್ಪೆಯಾಗುತ್ತಾ ಬಂತು. ಎಲ್ಲೆಲ್ಲಿ ನೋಡಿದರೂ ಪೋಲೀಸಿನವರ ಸರ್ಪ ಕಾವಲು. ರಾತ್ರಿಯ ವೇಳೆ ಬೀದಿಗಳಲ್ಲಿ ತಲೆಯಿಡುವಂತೆಯೇ ಇಲ್ಲ—ಕರ್ಫ್ಯೂ ಆಜ್ಞೆ! ಯಾರ ಬಗ್ಗೆ ಅನುಮಾನವೋ ಅವರನ್ನು ಜೈಲಿಗೆ ತುಂಬಲು ಪೋಲೀಸರು ಸಿದ್ಧರಾಗಿ ಕುಳಿತಿದ್ದರು. ಶಾರದೆಯ ಮನೆಯ ಮುಂದೆ ಸಿ. ಐ. ಡಿ. ಗಳು ಗಸ್ತು ಹೊಡೆಯುತ್ತಿರುವುದು ಶಾರದೆಯ ಗಮನಕ್ಕೆ ಬಂದಿತ್ತು. ಅವಳ ಮೇಲೆ ಯಾವುದಾದರೊಂದು ಆರೋಪ ಹೊರಿಸಿ, ಅವಳನ್ನು ಸೆರೆ ಹಿಡಿಯಲು ಅವಳ ಚಲನ ವಲನಗಳ ಮೇಲೆ ಕಣ್ಣಿಟ್ಟಿದ್ದರು. ಶಾರದೆ ಪಕ್ಕನೆ ಸಿಕ್ಕಿಕೊಳ್ಳುವ ಹೆಣ್ಣಲ್ಲ!

ಅವಳು ಚಳುವಳಿಯ ತಂಟೆಗೆ ಹೋಗದೆ, ಕೂಲಿಕಾರರ ಸ್ಥಿತಿಗತಿಗಳ

ಕಡೆಗೆ ಗಮನ ಕೊಟ್ಟಳು. ನಗರದಲ್ಲಿದ್ದ ಒಂದೆರಡು ಸಣ್ಣ ಮಿಲ್ಲುಗಳು ಮುಷ್ಕರ ಹೂಡಿದ್ದವು. ಕೂಲಿಕಾರರು ಕೆಲಸವಿಲ್ಲದೆ ಕೈಕಟ್ಟಿ ಕುಳಿತು ಬಿಟ್ಟರು. ಅವರ ಹೊಟ್ಟೆಗೆ ಅವರು ದುಡಿಯದ ಹೊರತು ಗಂಜಿಯಿಲ್ಲ. ಅವರು ಮತ್ತೆ ಕೆಲಸಕ್ಕೆ ಹೋದರೆ, ಸತ್ಯಾಗ್ರಹಕ್ಕೆ ಎಷ್ಟೋ ಬಲ ಕಡಿಮೆಯಾಗುತ್ತದೆ ಎಂದು ಕೊಂಡು ಶಾರದೆ ಊರಿನ ವರ್ತಕರಲ್ಲಿ, ಹಾಗೂ ಹೋಟಲ್ ಮಾಲೀಕರಲ್ಲಿ ಚಂದಾ ಎತ್ತಿ ಕೂಲಿಗಾರರಿಗೆ ಒಪ್ಪತ್ತಿನ ಗಂಜಿಗೆ ದಾರಿ ಮಾಡಿಕೊಟ್ಟಳು. ಈ ಮಧ್ಯೆ ಚಳುವಳಿಯ ಮುಖಪತ್ರವಾಗಿದ್ದ 'ಕಿಡಿ' ಪತ್ರಿಕೆಯ ಸಂಪಾದಕರು ಪೋಲೀಸರ ಕೈಗೆ ಸಿಕ್ಕಿಬಿಟ್ಟ ಕಾರಣ, ಅದನ್ನು ನಡೆಸುವ ಜವಾಬ್ದಾರಿ ಸುಮಿತ್ರೆಯ ಮೇಲೆ ಬಿತ್ತು. ಸುಮಿತ್ರೆ ಅಚ್ಚಾದ ಪ್ರತಿಗಳನ್ನು ಹಂಚಿ ಬರಲು ಹೋಗಿದ್ದಾಗ ಶಾರದೆಯ ಮನೆಯನ್ನು ಸಶಸ್ತ್ರ ಪೋಲೀಸಿನವರು ಮುತ್ತಿ, ಮನೆಯಲ್ಲಿದ್ದ ಸೈಕ್ಲೋಸ್ಟೈಲ್ ಯಂತ್ರ ಹಾಗೂ ರಾಜದ್ರೋಹಕರವಾದ ಹಸ್ತಪತ್ರಿಕೆಗಳನ್ನು ವಶಪಡಿಸಿಕೊಂಡು ಕೋರ್ಟಿನಲ್ಲಿ ಹಾಜರ್ಪಡಿಸಿದರು.

ಮ್ಯಾಜಿಸ್ಟ್ರೇಟರು ಶಾರದೆಗೆ ಆರು ತಿಂಗಳ ಕಠಿಣ ಶಿಕ್ಷೆ ವಿಧಿಸಿದರು. ಶಾರದೆಯನ್ನು ಜೈಲಿಗೆ ಒಯ್ಯುವಾಗ ಸುದರ್ಶನ ತಾಯಿಯೊಂದಿಗೆ ತಾನೂ ಜೈಲಿಗೆ ಬರುವುದಾಗಿ ಹಠ ಮಾಡಿದ. ಅವನನ್ನು ಮನೆಗೆ ಕರತರಬೇಕಾದರೆ ಪೋಲೀಸ ಇನ್ಸ್‌ಪೆಕ್ಟರಿಗೆ ಸಾಕು ಸಾಕಾಯಿತು. ಶಾರದೆ 'ಅರೆಸ್ಟ' ಆದ ಕೆಲವು ದಿನಗಳಲ್ಲಿಯೇ ಸುಮಿತ್ರೆಯನ್ನೂ ಕರ್ಫ್ಯೂ ಆಜ್ಞೆಯನ್ನು ಉಲ್ಲಂಘಿಸಿದಳೆಂದೂ, ಆಕ್ಷೇಪಣೆಗೆ ಕಾರಣವಾದ ಕಾಗದ ಪತ್ರಗಳು ಅವಳಲ್ಲಿದ್ದವೆಂದೂ ಸೆರೆಮನೆಗೆ ಹಾಕಿದರು.

ಸುಮಿತ್ರೆ ಜೈಲಿನಿಂದ ಬಿಡುಗಡೆಯಾಗಿ ಬರುವ ತನಕ, ಕಿಟ್ಟಣ್ಣನ ಊಟ ತಿಂಡಿಗಳೆಲ್ಲ ಹೋಟಲಿನಲ್ಲಿಯೇ ನಡೆಯುತ್ತಿತ್ತು. ಸುದರ್ಶನನಿಗೆ ತಾಯಿಗಿಂತಲೂ ತಂದೆಯ ಬಳಿ ಹೆಚ್ಚು ಸಲಿಗೆ ಒಡಂಬಡಿಕೆ ಇದ್ದುದರಿಂದ ಅವನನ್ನು ಸುಧಾರಿಸುವುದು ಹೆಚ್ಚು ಕಠಿಣವಾಗಲಿಲ್ಲ. ಆದರೂ ಒಮ್ಮೊಮ್ಮೆ ಸುದರ್ಶನ ಮಾಡುತ್ತಿದ್ದ ಚೇಷ್ಟೆಗಳಿಂದ ಅನಾಹುತಗಳೇ ಸಂಭವಿಸುತ್ತಿತ್ತು!

ಸುದರ್ಶನನಿಗೆ ಮೂರು ವರ್ಷ ಕೂಡಾ ತುಂಬಿಲ್ಲದಿದ್ದರೂ ಅವನು ಮಹಾ ತುಂಟ. ಅವನು ರಗಳೆಮಾಡಿ ತಾಯಿಯಿಂದ ಒಂದು ಖಾದಿಟೋಪಿ, ಜುಬ್ಬ ಹೊಲಿಸಿಕೊಂಡಿದ್ದ. ಅಲ್ಲದೆ ಪುಟಾಣಿ ತ್ರಿರಂಗಿ ಧ್ವಜ ಬೇರೆ. ಅವನ

ಕಣ್ಣಿಗೆ ಯಾರಾದರೂ ಖಾಕಿ ಉಡುಪಿನವರು ಬೀದಿಯಲ್ಲಿ ಕಂಡರೆ ಸಾಕು. ಅವನು 'ಕ್ವಿಟ್ಟಿಂಡಿಯಾ !' ಎಂದು ಕೂಗಿಕೊಳ್ಳುತ್ತಿದ್ದ. ಗಾಂಧೀ ಟೋಪಿ ಕಂಡರೆ 'ಮಹಾತ್ಮಾ ಗಾಂಧೀಕಿ ಜೈ' ಎನ್ನುತ್ತಿದ್ದ. ಸಾಮಾನ್ಯವಾಗಿ ಕಿಟ್ಟಣ್ಣ ಸುದರ್ಶನನನ್ನು ತನ್ನೊಡನೆ ಹೋಟೇಲಿಗೆ ಕರೆದುಕೊಂಡು ಹೋಗುತ್ತಿದ್ದ—ಮನೆಯಲ್ಲಿ ಬಿಟ್ಟರೆ ಬಾವುಟ ತೆಗೆದುಕೊಂಡು ಜೈಕಾರ ಮಾಡುತ್ತಾ ಎಲ್ಲಾದರೂ ಹೊರಟುಬಿಟ್ಟಾನೆಂದು ಹೆದರಿ.

ಒಂದು ದಿನ ಕಿಟ್ಟಣ್ಣ ಹೋಟಲು ಕೆಲಸ ತೀರಿಸಿಕೊಂಡು ಮನೆಗೆ ಹಿಂದಿರುಗಿ ಬರುತ್ತಿದ್ದಾಗ ಸುದರ್ಶನ ಅವನ ಹಿಂದೆ ಪುಟ್ಟ ಪುಟ್ಟ ಹೆಜ್ಜೆ ಹಾಕುತ್ತಾ ಬಾವುಟ ಹಿಡಿದುಕೊಂಡು ಬರುತ್ತಿದ್ದ. ಒಂದು ಕಡೆ ಎದುರಿಗೆ ಬರುತ್ತಿದ್ದ ಪೋಲೀಸಿನವನು ಸುದರ್ಶನನನ್ನು ನೋಡಿ, ಯಾಕೋ ಏನೋ ತನ್ನಲ್ಲಿಯೇ ನಕ್ಕ. ಸುದರ್ಶನ ಪೋಲೀಸಿನವನನ್ನು ಕಂಡು ' ಕ್ವಿಟ್ಟಿಂಡಿಯಾ ' ಎಂದು ಕೂಗಿದ. ಪೋಲೀಸಿನವನು ಈ ಮಾತನ್ನು ಕೇಳಿ ಇನ್ನಷ್ಟು ಗಟ್ಟಿಯಾಗಿ ನಕ್ಕ. ಆ ವೇಳೆಗೆ ಸುದರ್ಶನನ ಕೈಯಲ್ಲಿದ್ದ ಬಾವುಟ ನೆಲಕ್ಕೆ ಬಿತ್ತು. ಪೋಲೀಸಿನವನು ಅದನ್ನು ಎತ್ತಿ ಸುದರ್ಶನನಿಗೆ ಕೊಡಲು ಹೋದ. ಇದನ್ನು ನೋಡುತ್ತಿದ್ದ ಯಾವನೋ ಒಬ್ಬ "ಹುಡುಗನ ಕೈಲಿದ್ದ ಬಾವುಟ ಕಿತ್ತುಕೊಂಡಿದ್ದಾನೆ. ಹಿಡೀರೋ ಅವನ್ನ ! " ಎಂದು ಕೂಗು ಹಾಕಿದ.

ಬೀದಿಯ ಜನ ಆ ಮಾತು ನಿಜವೆಂದು ಪೋಲೀಸಿನವನಮೇಲೆ ಬಿದ್ದರು. ಪೋಲೀಸಿನವನು ಇದು ಯಾತರ ಪಂಚಾಯಿತಿ ಎಂದು ಕೊಂಚ ದೊಡ್ಡ ಹೆಜ್ಜೆ ಹಾಕಿ ಬೇಗ ಬೇಗ ನಡೆದ. ಜನ ಪೋಲೀಸಿನವನು ತಪ್ಪು ಮಾಡಿ ಓಡಿ ಹೋಗುತ್ತಿರುವನೆಂದು ಭಾವಿಸಿ, ಪೋಲೀಸಿನವನನ್ನು ನಾಲ್ಕು ಕಡೆಯಿಂದ ಮುತ್ತಿದರು. ಕ್ಷಣಮಾತ್ರದಲ್ಲಿ ನೂರಾರು ಜನ ಸೇರಿಬಿಟ್ಟರು. ಎಲ್ಲರೂ 'ಹೊಡೆಯಿರಿ, ಬಡಿಯಿರಿ' ಎಂದು ಹೇಳುತ್ತಿದ್ದರೇ ಹೊರತು ವಿಷಯವೇನೆಂದು ವಿಚಾರಿಸಲಿಲ್ಲ. ಆಗ ಕಿಟ್ಟಣ್ಣ ಜನರ ನಡುವೆ ದಾರಿ ಮಾಡಿಕೊಂಡು ಬಂದು ಪೋಲೀಸಿನವನನ್ನು ಜನರ ಕೈಯಿಂದ ಬಿಡಿಸಿ, ಸುರಕ್ಷಿತವಾಗಿ ಪೋಲೀಸು ಠಾಣೆಗೆ ತಲುಪಿಸದೇ ಇದ್ದಿದ್ದರೆ, ಆ ಪೋಲೀಸಿನವನ ಕಥೆ ಅಲ್ಲಿಯೇ ಪೂರೈಸಿಬಿಡುತ್ತಿತ್ತು. ಅಂತೂ ತುಂಟ ಸುದರ್ಶನ ಪೋಲೀಸಿನವನ ಜೀವಕ್ಕೆ ಸಂಚಕಾರ ತಂದಿದ್ದ!

ಸುದರ್ಶನ ಎಷ್ಟೋ ವೇಳೆ ತನಗರಿಯದ ಪ್ರಶ್ನೆಗಳನ್ನು ಕೇಳಿ ಕಿಟ್ಟಣ್ಣ ನನ್ನು ದುಃಖಕ್ಕೀಡು ಮಾಡುತ್ತಿದ್ದ. ಒಮ್ಮೊಮ್ಮೆ ತಾಯಿಯ ನೆನಪಾದಾಗ "ಅಪ್ಪ, ಅಮ್ಮ ಏಕೆ ಇಲ್ಲಿಲ್ಲ" ಎನ್ನುವನು. ಆ ಮುಗ್ಧ ಮಗುವಿಗೆ ತನ್ನ ಹೆತ್ತ ತಾಯಿತಂದೆ ಕಿಟ್ಟಣ್ಣ ದಂಪತಿಗಳೆಂದೇ ಭಾವನೆ. ಈ ಭಾವನೆ ಮಗುವಿನ ಮನಸ್ಸಿನಲ್ಲಿ ರೂಢ ಮೂಲವಾಗಿ ಬೆಳೆಯುವಂತೆ ಶಾರದೆ ಕಿಟ್ಟಣ್ಣ ಇವರ ವರ್ತನೆ ಇತ್ತು.

"ಅಮ್ಮನನ್ನು ಜೈಲಿಗೆ ಹಾಕಿದ್ದಾರೆ ಮಗು!" ಎಂದು ಉತ್ತರಿಸುವನು ಕಿಟ್ಟಣ್ಣ.

"ಹಾಗಾದರೆ ನಿನ್ನನ್ನೇಕೆ ಜೈಲಿಗೆ ಹಾಕಿಲ್ಲ?" ಎಂದು ಕೇಳುತ್ತಾನೆ.

ಈ ಪ್ರಶ್ನೆಗೆ ಏನೆಂದು ಉತ್ತರ ಹೇಳಬೇಕು?

ಕಿಟ್ಟಣ್ಣ ಈ ಮೊದಲೇ ಎಷ್ಟೋ ಬಾರಿ, ದೇಶದ ಸತ್ಯಾಗ್ರಹ ಸಮರದಲ್ಲಿ ತಾನು ಕಿಂಚಿತ್ತೂ ಭಾಗ ವಹಿಸದೆ ಇರುವೆನಲ್ಲಾ ಎಂದು ಕೊರಗಿದ್ದ. ಆಗ ಶಾರದೆ ಸಮಾಧಾನ ಪಡಿಸಿದ್ದಳು. "ನೀವು ಭಾಗ ವಹಿಸದಿದ್ದರೂ, ನಿಮ್ಮ ಹೆಂಡತಿ ಮಕ್ಕಳನ್ನು ಸತ್ಯಾಗ್ರಹ ಸಮರಕ್ಕೆ ಅರ್ಪಿಸಿ ಬಿಟ್ಟಿದ್ದೀರಲ್ಲ! ಇದಕ್ಕಿಂತಲೂ ಹೆಚ್ಚಿನ ತ್ಯಾಗ ಬೇಕೇ?"

ಕಿಟ್ಟಣ್ಣ ಆ ಕ್ಷಣಕ್ಕೆ ಸಮಾಧಾನ ಹೊಂದಿದರೂ, ನಾಳೆ ಸ್ವಾತಂತ್ರ್ಯ ಬಂದಾಗ, ಇತರರು ಸಂಪಾದಿಸಿ ಕೊಟ್ಟ ಸ್ವರಾಜ್ಯವನ್ನು—ಅದಕ್ಕಾಗಿ ಕೊಂಚವೂ ಶ್ರಮಿಸದ ತಾನು ಪರಜೀವಿಯಂತೆ ಅನುಭವಿಸಬೇಕೇ? ಎಂದು ಪೇಚಾಡಿ ಕೊಳ್ಳುತ್ತಿದ್ದ.

ಸುದರ್ಶನ 'ನಿನ್ನನ್ನೇಕೆ ಜೈಲಿಗೆ ಹಾಕಿಲ್ಲ' ವೆಂದು ಕೇಳಿದಾಗಲೆಲ್ಲ ಆ ವಿಷಯ ಅವನ ಮನಸ್ಸಿಗೆ ಚುಚ್ಚುತ್ತಿತ್ತು.

"ಸತ್ಯಾಗ್ರಹ ಸಮರದಲ್ಲಿ ಭಾಗಿಯಾಗಲೂ ಪುಣ್ಯ ಬೇಕು!" ಎಂದು ಕೊಳ್ಳುವನು ಕಿಟ್ಟಣ್ಣ.

"ನಾನು ಪಾಪ ಮಾಡಿದವನು ಮಗು! ಅದಕ್ಕಾಗಿ ಹಾಕಿಲ್ಲ!" ಎನ್ನುವನು ಮಗುವಿಗೆ. ಆಗ ಅವನ ಕಣ್ಣಿನಲ್ಲಿ ಕಣ್ಣೀರು ಕಾಣಿಸಿಕೊಳ್ಳುವುದು. ಸುದರ್ಶನ ತನ್ನ ಪ್ರಶ್ನೆಯಿಂದ ತಂದೆಗೆ ನೋವಾಯಿತೆಂಬುದನ್ನು ಅರಿತು ತಪ್ಪಾಯಿತೆಂಬಂತೆ ಮೌನ ತಾಳುವನು.

ಸುದರ್ಶನ—ಕಿಟ್ಟಣ್ಣನಿಗೇ ಏಕೆ—ಅವನನ್ನು ಕಂಡವರಿಗೆಲ್ಲಾ ಅವನೊಬ್ಬ ವಿಚಿತ್ರ ಸೃಷ್ಟಿ ಎಂದೇ ಭಾವನೆ. ಅವನು ಒಂದೇ ವರ್ಷಕ್ಕೇ ಮಾತು ಕಲಿತ. ಎರಡು ವರ್ಷ ತುಂಬಿ ಮೂರನೆಯ ವರ್ಷ ಆರಂಭವಾಗುತ್ತಿದ್ದಂತೆ, ಓದುವ ಆಸೆಯನ್ನು ವ್ಯಕ್ತಪಡಿಸಿ, ಸುಮಿತ್ರೆಯನ್ನು ಪೀಡಿಸಿ, ಕನ್ನಡ ಹಾಗೂ ಇಂಗ್ಲೀಷ್ ಅಕ್ಷರಗಳನ್ನು ಸ್ವಲ್ಪವೂ ತಪ್ಪಿಲ್ಲದೆ ಬರೆಯಲು ಕಲಿತುಕೊಂಡಿದ್ದ. ಅವನು ಅಕ್ಷರ ಬರೆಯುತ್ತಾ ಕುಳಿತಾಗ ಅವನ ಮುಖಭಂಗಿಯನ್ನು ನೋಡಬೇಕು! ಅವನ ಏಕಾಗ್ರಚಿತ್ತತೆ, ಎಂತಹವರನ್ನೂ ಬೆರಗುಗೊಳಿಸದೆ ಇರದು. ಅವನಿಗೆ ಸ್ಲೇಟು ಪುಸ್ತಕ ತಂದಿತ್ತ ದಿನವಂತೂ—ಕನಸಿನಲ್ಲಿಯೂ "ಅ....ಆ.... ಇ....ಈ" ಎಂದು ಕನವರಿಸುತ್ತಿದ್ದ. ಇದನ್ನು ಕೇಳಿ ಶಾರದೆ, "ಈಗಲೇ ಈ ಪಾಟಿ ಓದುವ ಆಸೆಯಿದ್ದರೆ, ಮುಂದೆ ಹೇಗೋ ದೇವರಿಗೇ ಗೊತ್ತು!" ಎಂದುಕೊಂಡು ಮಗನನ್ನು ಮುದ್ದುಗೈದಿದ್ದಳು.

ಮೆಡಿಕಲ್ ಕಾಲೇಜಿನಲ್ಲಿ ಕಲಿಯುವ ಸುಮಿತ್ರೆಯೇ ಎಷ್ಟೋ ಬಾರಿ ಓದುವುದನ್ನು ಬಿಟ್ಟು ಸುದರ್ಶನನ ಮಾತುಗಳನ್ನು ಕೇಳುತ್ತಾ ಕುಳಿತು ಬಿಡುತ್ತಿದ್ದಳು. ಈ ವಿಷಯವನ್ನು ಅವಳು ತನ್ನ ಮನಶ್ಶಾಸ್ತ್ರದ ಪ್ರೊಫೆಸರರಿಗೆ ತಿಳಿಸಿದಾಗ ಅವರು ಸುದರ್ಶನನನ್ನು ನೋಡಲು ಬಯಸಿದರು.

ಒಂದು ದಿನ "ಅಕ್ಕಾ ನಾನೂ ಕಾಲೇಜಿಗೆ ಬರ್‍ತೀನಕ್ಕ?" ಎಂದು ಸುದರ್ಶನ ಹಠ ಮಾಡಿದ್ದಕ್ಕೆ—ಸುಮಿತ್ರೆ ಅವನನ್ನು ಮೆಡಿಕಲ್ ಕಾಲೇಜಿಗೆ ಕರೆದೊಯ್ದಳು.

"ಸುದರ್ಶನ, ಇವರೇ ನಮ್ಮ ಪ್ರೊಫೆಸರ್" ಎಂದು ಸುದರ್ಶನನಿಗೆ ಪ್ರೊಫೆಸರರ ಪರಿಚಯ ಮಾಡಿಕೊಟ್ಟಳು.

"ಗುಡ್ ಮಾರ್ನಿಂಗ್ ಸಾರ್" ಎಂದು ಸುದರ್ಶನ ಹೇಳಿ ಪ್ರೊಫೆಸರಿಗೆ ಹಸ್ತಲಾಘವವನ್ನಿತ್ತ. ಅವನ ಚಟುವಟಿಕೆ ಚುರುಕುತನವನ್ನು ಕಂಡು ಪ್ರೊಫೆಸರರು ಬೆರಗಾದರು. ಅವರು ಅವನ ಪುಟ್ಟ ಕೈಯನ್ನು ಕುಲುಕಿ, ಅವನನ್ನು ಅನಾಮತ್ತು ಎತ್ತಿ ಅಲ್ಲೇ ಇದ್ದ ಟೇಬಲ್ಲಿನ ಮೇಲೆ ಕೂಡಿಸಿದರು. ಸುದರ್ಶನ ಮೇಜಿನ ಮೇಲಿದ್ದ ಡಸ್ಟರನ್ನು ನೋಡಿ, 'ಥೂ, ಇದು ಧೂಳು ಬಟ್ಟೆ!' ಎಂದು ಪಕ್ಕಕ್ಕೆ ಸರಿದು ಕುಳಿತ. ಈ ಮಾತು ಕೇಳಿ ಪ್ರೊಫೆಸರರು ಮೂಗಿನ ಮೇಲೆ ಬೆರಳಿಟ್ಟರು. ಎರಡುವರೆ ವರ್ಷದ ಮಗುವಿಗೆ ಶುಚಿ, ಅಶುಚಿಗಳ ತಿಳುವಳಿಕೆ

ಇದ್ದಮೇಲೆ, ಆ ಮಗುವನ್ನು ಏನೆಂದು ಕರೆಯಬೇಕು?

"ಸುದರ್ಶನ, ನಮ್ಮ ಮನೆಗೆ ಬರ್ತೀಯಾ ?" ಎಂದು ಪ್ರಶ್ನಿಸಿದರು.

"ನೀವು ನಮ್ಮ ಮನೆಗೆ ಬಂದರೆ ನಾನೂ ಬರ್ತೀನೆ ಸಾರ್. "

"ಹೋಗಲಿ, ಕಾಲೇಜಿಗೆ ಬರ್ತೀಯಾ ?"

"ಹೂಂ" ಎಂದು ತಲೆಯಲ್ಲಾಡಿಸಿ, ಕಣ್ಣರಳಿಸಿ ಪ್ರೊಫೆಸರರನ್ನು ನೋಡಿದ.

"ಬೇಷ್ !"

"ಸಾರ್, ನಾನು ಬರ್ತೀನೆ ಅಂದ್ರೂ ಅಕ್ಕ ಕರಕೊಂಡು ಬರೋದೇ ಇಲ್ಲ ಸಾರ್ !"

ಈ ಮಾತು ಕೇಳಿ ಸುಮಿತ್ರೆ ನಕ್ಕಳು. ಮೆಡಿಕಲ್ ಕಾಲೇಜಿಗೆ ಸುದರ್ಶನನೇ ?

ಆ ದಿನ ಸುದರ್ಶನನನ್ನು ಕಳುಹಿಸಿ ಕೊಡುತ್ತಾ ಪ್ರೊಫೆಸರರು ಸುಮಿತ್ರೆಗೆ ಹೇಳಿದರು—

"ಈ ಮಗುವೊಂದು ರತ್ನವೆಂದು ತಿಳಿದು ಜೋಪಾನವಾಗಿ ನೋಡಿಕೊಳ್ಳಿ. ಇವನು ಬೆಳೆದು ದೊಡ್ಡವನಾದರೆ, ಸರಿಯಾದ ವಿದ್ಯಾಭ್ಯಾಸ ಸಿಕ್ಕಿದರೆ ಇವನು ಜಗತ್ತಿನ ಅತಿ ಮೇಧಾವಿ ವ್ಯಕ್ತಿಗಳಲ್ಲಿ ಒಬ್ಬನಾಗುತ್ತಾನೆ. ಹಾಗಿಲ್ಲದೆ ಕಷ್ಟದೆಶೆಯಲ್ಲಿ ಬೆಳೆದನೆಂದರೆ ಈ ಮಗು ಭಾವೋದ್ರೇಕವನ್ನು ತಡೆಯಲಾರದೆ ಬಾಲ್ಯದಲ್ಲಿಯೇ ಹೃದ್ರೋಗಕ್ಕೆ ತುತ್ತಾಗುತ್ತಾನೆ ಅಥವಾ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಇದು ಖಂಡಿತ. ನೀವು ಇವನ ಮೇಲೆ ಸದಾ ಕಣ್ಣಿಟ್ಟು ಜಾಗರೂಕವಾಗಿ ನೋಡಿಕೊಳ್ಳಿ !" ಎಂದು ಸೂಚನೆಯಿತ್ತರು.

ಆ ದಿನ ತರಗತಿಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸುತ್ತಾ ಪ್ರೊಫೆಸರರು ಹೇಳಿದರು, "ಸೃಷ್ಟಿಯ ಮರ್ಮವನ್ನು ಹೀಗೆಂದು ಹೇಳಲು ಬರುವಂತಿಲ್ಲ. ಕೆಲವು ಮಕ್ಕಳಿಗೆ ಪ್ರಕೃತಿದತ್ತವಾದ ಅಪೂರ್ವ ಮೇಧಾಶಕ್ತಿ, ವಿವೇಚನಾಶಕ್ತಿಯಿರುತ್ತದೆ. ಸುದರ್ಶನ ಅಂತಹ ಮಗು—ಅವನು ಮನಸ್ಸು ಮಾಡಿದರೆ, ಹತ್ತು ವರ್ಷಕ್ಕೆ ಎಂ. ಬಿ. ಬಿ. ಎಸ್. ಮಾಡಬಲ್ಲ !"

ಈ ಸುದ್ದಿಯನ್ನು ಕೇಳಿ ಕಿಟ್ಟಣ್ಣ ದಂಪತಿಗಳು ಬಿದ್ದುಬಿದ್ದು ನಕ್ಕರೇ ವಿನಹ ಬೇರೇನೂ ನುಡಿಯಲಿಲ್ಲ.

ದೇಶದಲ್ಲಿ ವಿಧ್ವಂಸಕ ಚಳುವಳಿಯು ಹೆಚ್ಚಾಗಿತ್ತು. ಅಹಿಂಸೆಯಿಂದ ಆರಂಭವಾಗಿದ್ದ ಚಲೇಜಾವ್ ಚಳುವಳಿ ಸ್ವಾರ್ಥಿಗಳ ಕೈಗೆ ಸಿಕ್ಕಿ ಹಿಂಸೆಯ ರೂಪ ತಳೆದಿತ್ತು. ಹಿಂಸೆ ಹಿಂಸೆಯ ಎದುರು ಎಷ್ಟೊಂದು ದಿನ ನಡೆದೀತು? ದಿನ ಕಳೆದಂತೆ, ಸತ್ಯಾಗ್ರಹದ ಬಿಸಿ ಆರುತ್ತಾ ಬಂದು, ಒಂದು ವರ್ಷ ಕಳೆಯುವುದರೊಳಗೆ, ಅದು ಸಂಪೂರ್ಣವಾಗಿ ತಣ್ಣಗಾಗಿ ಹೋಯಿತು.

ಶಾರದೆಯೂ, ಸುಮಿತ್ರೆಯೂ ಸೆರೆಮನೆಯಿಂದ ಬಿಡುಗಡೆಯಾಗಿ ಬಂದರು ಶಾರದೆ ಸೆರೆಮನೆಯಲ್ಲಿ ಸರಿಯಾದ ಊಟ ವಸತಿಯಿಲ್ಲದೆ ಸೊರಗಿದ್ದಳು. ಆದರೆ ಸುಮಿತ್ರೆ--ಅವಳನ್ನು ಬೆಂಗಳೂರಿನ ಜೈಲಿನಲ್ಲಿ ಇಟ್ಟಿದ್ದುದರಿಂದ ಅವಳು ಮೊದಲಿಗಿಂತಲೂ ಗೆಲುವಾಗಿದ್ದಳು. ಶಾರದೆ ಮನೆಗೆ ಬಂದ ಕೆಲವು ದಿನ ಯಾವ ಚಟುವಟಿಕೆಗಳಿಗೆ ಹೋಗದೆ, ವಿಶ್ರಾಂತಿ ತೆಗೆದುಕೊಂಡಳು. ಇದೇ ವೇಳೆಗೆ ಅವರ ಸಂಸಾರಕ್ಕೆ ದೊಡ್ಡದೊಂದು ವಿಪತ್ತು ಬಂದಿತು. ಕಿಟ್ಟಣ್ಣನ ಹೋಟಲ್ ಯಜಮಾನ ಸತ್ಯಾಗ್ರಹ ಸಮಯದಲ್ಲಿ ಸತ್ಯಾಗ್ರಹಿಗಳಿಗೆ ಪರೋಕ್ಷವಾಗಿ ಸಹಾಯ ಮಾಡಿ ಸರಕಾರದ ಆಗ್ರಹಕ್ಕೆ ಪಾತ್ರನಾಗಿದ್ದ. ಸರಕಾರ ಅವನ ಮೇಲೆ ಕೈಮಾಡಲು ವರ್ಷದಿಂದ ಸಮಯ ಕಾಯುತ್ತಾ ಕುಳಿತಿತ್ತು. ಅದೇನು ಗ್ರಹಾಚಾರವೋ, ಅದಾರು ಸುದ್ದಿ ಕೊಟ್ಟರೋ ಆಹಾರದ ಇಲಾಖೆಯವರು ಒಂದು ದಿನ ಅಕಸ್ಮಾತ್ತಾಗಿ ಅವರ ಉಗ್ರಾಣದ ಶೋಧನೆಗೆ ಬಂದರು. ಉಗ್ರಾಣದಲ್ಲಿ ಕಳ್ಳಸಂತೆಯಲ್ಲಿ ಕೂಡಿಟ್ಟಿದ್ದ ಅಕ್ಕಿ, ಸಕ್ಕರೆ, ಗೋಧಿಗಳು ರೇಷನ್ ಪ್ರಮಾಣಕ್ಕಿಂತಲೂ ಹತ್ತರಷ್ಟು ಅಧಿಕ ಪ್ರಮಾಣದಲ್ಲಿ ಸಿಕ್ಕಿ ಹೋದವು. ಆಹಾರದ ಇಲಾಖೆಯವರಿಗೆ ಅಷ್ಟೇ ಸಾಕಾಯಿತು. ಅವರು ಹೋಟಲಿನ ಮಾಲೀಕನ ಮೇಲೆ ಉಗ್ರವಾದ ಕ್ರಮ ತೆಗೆದುಕೊಂಡರು. ಹೋಟಲನ್ನು ಮುಚ್ಚಿಸಿ, ಸೀಲ್ ಮಾಡಿ, ಕೇಸ್ ಹಾಕಿದರು.

ಯಜಮಾನ ಪಟ್ಟುಹಿಡಿದು ಹೋರಾಡಿದ ಮೇಲೆ ಲೈಸೆನ್ಸ್ ಉಳಿಯಿತು. ಆದರೆ ಬೋರ್ಡಿಂಗ್ ಲೈಸೆನ್ಸ್ ರದ್ದಾಗಿ ಹೋಯಿತು. ಅಲ್ಲಿ ಊಟ ಮಾಡುತ್ತಿದ್ದವರೆಲ್ಲ ಬೇರೆಡೆಗೆ ಹೋಗಿ ಬಿಟ್ಟರು. ಕಿಟ್ಟಣ್ಣನಿಗೆ ಈಗ ಕೆಲಸವಿಲ್ಲದಾಯಿತು. ಯಾರು ತಾನೇ ಕೆಲಸವಿಲ್ಲದೆ ಸುಮ್ಮನೆ ಸಂಬಳ ಕೊಟ್ಟಾರು? ಇಷ್ಟಾದರೂ ಹೋಟೆಲಿನ ಯಜಮಾನ ಕಿಟ್ಟಣ್ಣನಿಗೆ ಎರಡು ತಿಂಗಳ ಸಂಬಳವನ್ನು ಮುಂಗಡವಾಗಿ ಕೊಟ್ಟು, ಅವನಿಗೆ ಬೇರೆ ಕಡೆಯಲ್ಲಿ ಕೆಲಸ ಹುಡುಕಿ

ಕೊಳ್ಳಲು ಹೇಳಿದನು. ಯಜಮಾನನ ಕಷ್ಟದೆಸೆಯನ್ನು ಕಣ್ಣಾರೆ ಕಂಡಿದ್ದ ಕಿಟ್ಟಣ್ಣ, ಅಲ್ಲೇ ಕೆಲಸಕ್ಕಾಗಿ ಮೊಂಡುಬೀಳಲಿಲ್ಲ.

ಕಿಟ್ಟಣ್ಣ ತಿಂಗಳ ಕಾಲ ಮೈಸೂರಿನಲ್ಲಿ ಕೆಲಸದ ಬೇಟೆ ನಡೆಸಿದ. ಎಲ್ಲೂ ಕೆಲಸ ಸಿಕ್ಕುವ ಸೂಚನೆ ಕಂಡುಬರಲಿಲ್ಲ. ಕೆಲಸವಿಲ್ಲದೆ ಮೈಸೂರಿನಲ್ಲಿ ಕುಳಿತರೆ ಸಂಸಾರ ಸಾಗುವ ಬಗೆ? ಒಂದು ದಿನ ಯಾವನೋ ಸ್ನೇಹಿತನೊಡನೆ ಸುಮ್ಮನೆ ಡಿ. ಇ. ಓ. ರವರ ಆಫೀಸಿಗೆ ಹೋಗಿದ್ದಾಗ, ಕಿಟ್ಟಣ್ಣನ ತಲೆಯೊಳಗೆ ಹಠಾತ್ತನೆ, ಹೊಸ ಯೋಚನೆಯೊಂದು ಸುಳಿಯಿತು. ಕೆಲಸವಿಲ್ಲದೆ ಅಲೆಯುವ ಬದಲು ಯಾವುದಾದರೂ ಸ್ಕೂಲಿನಲ್ಲಿ ಏಕೆ ಉಪಾಧ್ಯಾಯನಾಗಿ ಕೆಲಸ ಮಾಡಬಾರದು? ಕಿಟ್ಟಣ್ಣ ಅಲ್ಲಿಯೇ ಒಂದು ಅಪ್ಲಿಕೇಷನ್ ಬರೆದು ಡಿ. ಇ. ಓ. ಸಾಹೇಬರನ್ನು ಕಂಡು ತನ್ನ ಅಹವಾಲನ್ನು ಹೇಳಿಕೊಂಡ. ಸದ್ಯಕ್ಕೆ ಮೈಸೂರು ನಗರದಲ್ಲಿನ ಶಾಲೆಗಳಲ್ಲಿ ಸ್ಕೂಲು ಮಾಸ್ತರ ಕೆಲಸ ಖಾಲಿ ಇಲ್ಲದೆ ಇದ್ದುದರಿಂದ, ಗ್ರಾಮಾಂತರ ಪ್ರದೇಶದಲ್ಲಿ ಕೆಲಸ ಮಾಡಲು ಇಚ್ಛೆ ಇದ್ದರೆ ತಾವು ಕೆಲಸ ಕೊಡುವುದಾಗಿ ಅವರು ತಿಳಿಸಿದರು. ಕಿಟ್ಟಣ್ಣ ಆಗಲಿ ಎಂದು ತನ್ನ ಸಮ್ಮತಿ ತಿಳಿಸಿದ.

ಡಿ. ಇ. ಓ. ಸಾಹೇಬರು ಅದೇ ದಿನ ಕಿಟ್ಟಣ್ಣನಿಗೆ ಫ್ರೆಂಚ್ ರಾಕ್ಸ್ ಬಳಿಯ ಕೇತನಹಳ್ಳಿಯ 'ನ್ಯೂ ಟೈಪ್' ಮಾಧ್ಯಮಿಕ ಶಾಲೆಯಲ್ಲಿ ಕೆಲಸ ಮಾಡಲು ಹೇಳಿ ಆರ್ಡರನ್ನು ಸಂಗಡಲೇ ಕೊಟ್ಟು ಕಳುಹಿಸಿದರು.

ಈ ಸುದ್ದಿಯನ್ನು ಕೇಳಿ ಶಾರದೆ ಸಂತೋಷಪಟ್ಟರೂ, ತಾವು ಮೈಸೂರು ಬಿಟ್ಟರೆ, ಸುಮಿತ್ರೆಯ ಪಾಡೇನೆಂಬುದು ತಿಳಿಯದೆ ಕ್ಷಣ ಕಾಲ ವ್ಯಾಕುಲಚಿತ್ತಳಾದಳು. ಅದನ್ನು ಸುಮಿತ್ರೆಯೇ ಬಗೆಹರಿಸಿದಳು. "ಯಾರಾದರೂ ಹಣ ಸಹಾಯ ಮಾಡಿದರೆ ಕಾಲೇಜು ಹಾಸ್ಟೆಲಿನಲ್ಲಿ ಇರಬಹುದು." ಸುಮಿತ್ರೆ ತನ್ನ ಗಂಡನನ್ನು ಮನಸ್ಸಿನಲ್ಲಿಟ್ಟುಕೊಂಡು ಹಾಗೆ ಹೇಳಿದ್ದಳು. ಈ ಮಾತು ಶಾರದೆಯ ಮನಸ್ಸಿಗೆ ಸರಿ ಕಂಡಿತು. ಅವಳು ಇದೇ ವಿಷಯವನ್ನು ಸದಾಶಿವನಿಗೆ ಬರೆಸಿದಳು. ಸದಾಶಿವ ಆ ಕಾಗದ ಕಂಡು ಮೈಸೂರಿಗೆ ಬಂದು ಎಲ್ಲ ವಿಷಯಕ್ಕೂ ಮಾತನಾಡಿದ. ಶ್ರೀಮಂತರ ಪುತ್ರನಾದ ಅವನಿಗೆ ಸುಮಿತ್ರೆಯ ವೆಚ್ಚ ಹೊರೆಯಾಗಿ ಕಾಣಿಸಲಿಲ್ಲ. ಅವನು ಹೆಂಡತಿಯನ್ನು ಹಾಸ್ಟೆಲಿನಲ್ಲಿ ಇಟ್ಟು ಓದಿಸಲು ಸಂತೋಷದಿಂದಲೇ ಒಪ್ಪಿಕೊಂಡ. ಅದರಂತೆ ಸುಮಿತ್ರೆ ತನ್ನ

ಸಾಮಾನುಗಳನ್ನು ಹಾಸ್ಟೆಲಿಗೆ ಸಾಗಿಸಿದಳು. ಇತ್ತ ಕಿಟ್ಟಣ್ಣ ದಂಪತಿಗಳು ಕೇತನಹಳ್ಳಿಗೆ ಹೊರಟು ನಿಂತರು.

## ೧೦

ಶಾರದೆಗೆ ಮೈಸೂರನ್ನು ಬಿಟ್ಟು ಹೊರಡಲು ಕಾಲೇ ಬರಲಿಲ್ಲ. ಅವಳನ್ನು ಬೀಳ್ಕೊಡಲು ಸುಮಿತ್ರೆ ಹಾಗೂ ಲೀಲಾವತಿಯರು ಸ್ಟೇಷನ್‌ಗೆ ಬಂದಿದ್ದರು. ಸದಾಶಿವನಂತೂ ಅವರೊಂದಿಗೇ ಮಂಡ್ಯಕ್ಕೆ ಹೋಗುವವನಿದ್ದ. ಸುಮಿತ್ರೆಗೆ ಹೆತ್ತ ತಂದೆ ತಾಯಿಗಳಿಗಿಂತಲೂ ಹೆಚ್ಚಾಗಿದ್ದ ಕಿಟ್ಟಣ್ಣ ಶಾರದೆಯರನ್ನು ಅಗಲಿ ಮೈಸೂರಿನಲ್ಲಿ ತಾನು ಒಬ್ಬಂಟಿಗಳಾಗಿರಬೇಕಲ್ಲ ಎನ್ನುವ ದುಃಖದಲ್ಲಿ ಮಾತೇ ನಿಂತುಹೋಗಿತ್ತು. ಅವಳ ಮನದ ದುಗುಡವನ್ನು ಕಂಡುಕೊಂಡಿದ್ದ ಶಾರದೆ ಅಷ್ಟೇ ದುಃಖಿನಿಯಾಗಿದ್ದರೂ, ನಗುಮುಖದೊಡನೆ ಇದ್ದುಕೊಂಡು ಸುಮಿತ್ರೆಯನ್ನು ರಂಜಿಸಲೆತ್ನಿಸುತ್ತಿದ್ದಳು.

ಸುದರ್ಶನನಂತೂ ಸುಮಿತ್ರೆಯ ಬಗಲಿನಿಂದ ಕೆಳಗಿಳಿಯಲೇ ಇಲ್ಲ.

"ಅಕ್ಕ, ನೀನೂ ಬರೋಲ್ವೇನಕ್ಕ—ಊರಿಗೆ?" ಎಂದು ಅವನ ಪ್ರಶ್ನೆ.

"ಇಲ್ಲ ಮಗೂ! ಅಕ್ಕ ಇನ್ನೂ ಓದಬೇಕು. ಅದಕ್ಕೋಸ್ಕರ ಇಲ್ಲೇ ಇರ್ತಾಳೆ!" ಎಂದಳು ಶಾರದೆ.

"ಹಾಗಾದ್ರೆ ನಾನೂ ಇಲ್ಲೇ ಇರ್ತೀನಿ! ನಾನೂ ಅಕ್ಕನ ಜೊತೇಲೀ ಕಾಲೇಜಿಗೆ ಹೋಗ್ತೀನಿ!" ಎಂದ ಅಕ್ಕನನ್ನು ಪಿಳಪಿಳನೆ ನೋಡುತ್ತಾ ಸುದರ್ಶನ.

ಈ ಮಾತನ್ನು ಕೇಳಿ ಎಲ್ಲರೂ ಘೊಳ್ಳನೆ ನಕ್ಕುಬಿಟ್ಟರು. "ಹಾಗಾದ್ರೆ ನಮ್ಮ ಜೊತೇಲಿ ನೀನು ಬರೋದಿಲ್ಲ ಅನ್ನು!" ಎಂದ ಕಿಟ್ಟಣ್ಣ.

"ಊಹೂಂ. ನಾನು ಅಕ್ಕನ ಹತ್ರಾನೇ ಇರ್ತೀನೆ. ಅಕ್ಕ ನಂಗೆ ಮಗ್ಗಿ ಕಲಿಸ್ಕೊಡತಾಳೆ. ಬೊಂಬೆ ತೋರಿಸ್ತಾಳೆ. ಕಥೆ ಹೇಳ್ತಾಳೆ" ಎಂದುಬಿಟ್ಟ ಸುದರ್ಶನ.

ಗಾರ್ಡು ರೈಲು ಹೊರಡುವ ವೇಳೆಯಾಯಿತೆಂದು ಸೀಟಿ ಊದಿದ. ಕಿಟ್ಟಣ್ಣ ಸುಮಿತ್ರೆಯ ಕೈಯಿಂದ ಕುಮಾರ ಕಂಠೀರವನನ್ನು ಎತ್ತಿಕೊಳ್ಳಲು

ನೋಡಿದ. ಊಹೂಂ. ಅವನು ಬರಲೊಪ್ಪಿದರೆ ತಾನೇ........ಕಡೆಗೆ ಬಲವಂತ ವಾಗಿ ಬಳಿಗೆ ಬರಮಾಡಿಕೊಳ್ಳಲು ಅವರಿಗೆ ಸಾಕುಸಾಕಾಯಿತು.

"ನಮ್ಮೂರಿನಲ್ಲೂ ಸ್ಕೂಲು ಇದೆ. ಪುಸ್ತಕ ಇದೆ. ಮೊಂಡುಹಠ ಮಾಡ ಬಾರದು ಸುದರ್ಶನ."

"ಅಕ್ಕ ಬಂದರೆ ನಾನೂ ಬರ್ತೀನಿ."

"ಹೂಂ. ಅಕ್ಕನೂ ಬರ್ತಾಳೆ. ಬಾ ನೀನು" ಎಂದಾಗಲೇ ಅವನು ರೈಲಿ ನಿಂದ ಹೊರಗೆ ಬರಲೊಪ್ಪಿದುದು!

"ಸುಮಿತ್ರಾ, ನಿನಗೆ ಹಾಸ್ಟೆಲು ಬೇಜಾರಾದ್ರೆ ಶನಿವಾರ ಭಾನುವಾರ ಊರಿಗೆ ಬಂದು ಬಿಡಮ್ಮ—ಅಷ್ಟೇನೂ ದೂರವಿಲ್ಲ!"

ಸುಮಿತ್ರೆ ಹಾಗೇ ಆಗಲೆಂದು ತಲೆಯಲ್ಲಾಡಿಸಿದಳು.

"ನಿನಗೆ ಇಲ್ಲಿ ಅನುಕೂಲ ಸರಿಯಾಗಿದೆಯೋ ಇಲ್ಲವೋ ನೋಡಿಕೊಂಡು ನಾಳೆನೇ ಕಾಗದ ಬರಿ!" ಎಂದಳು ಶಾರದೆ.

"ಹೂಂ."

"ಏನೇ ಸುಮಿತ್ರೆ, ಮನೆಯಲ್ಲಿ ಅಷ್ಟೊಂದು ಹರಟುತ್ತಿದ್ದ ಮಾತಿನಮಲ್ಲಿ ಯಾಗಿದ್ದ ನೀನು ಈಗ ಕೋಲೇ ಬಸವನ ಹಾಗೆ ಎಲ್ಲಕ್ಕೂ ಹೂಗುಟ್ಟುತ್ತಿದ್ದೀ ಯಲ್ಲೇ?" ಎಂದ ಸದಾಶಿವ.

ಸುಮಿತ್ರೆಯ ಮುಖ ನಾಚಿಕೆಯಿಂದ ಕೆಂಪಾಯಿತು.

"ನೀವು ಮಾತನಾಡಿಸಲಿಲ್ಲ ಎಂದು ಸುಮಿತ್ರೆಗೆ ಸಿಟ್ಟು" ಎಂದ ಕಿಟ್ಟಣ್ಣ.

ಸುಮಿತ್ರೆಗೆ ಇನ್ನಷ್ಟು ಲಜ್ಜೆಯಾಯಿತು.

"ನಮ್ಮ ಮುಂದೆ ಎಲ್ಲಿ ಮಾತಾಡ್ತಾಳೆ? ಏನಿದ್ರೂ ಎಲ್ಲ ಕಾಗದಪತ್ರದಲ್ಲಿ ನಡೆಯುತ್ತೆ ಅವರ ಮಾತುಕತೆ!" ಎಂದಳು ಶಾರದೆ.

ಈ ಮಾತು ಕೇಳಿ ಸುಮಿತ್ರೆ ಹುಸಿ ಮುನಿಸು ಮಾಡುತ್ತಾ, "ಥೂ........ ಹೋಗೇ........ಚಿಕ್ಕಮ್ಮ!" ಎಂದಳು.

"ಹೋಗ್ತಾನೇ ಇದ್ದೇನಮ್ಮಾ....ನೀನೇನೂ ಯೋಚಿಸಬೇಡ" ಎಂದಳು ಶಾರದೆ ಹುಸಿ ನಗೆ ನಗುತ್ತಾ.

ಈ ಮಾತು ಕೇಳಿ ಸುಮಿತ್ರೆಗೆ ಅಳು ಬರುವಂತಾಯಿತು.

"ಚಿಕ್ಕಮ್ಮ, ನಾನು ಅದಕ್ಕಲ್ಲ ಹೇಳಿದ್ದು........"

" ಯಾವುದಕ್ಕೇ ಆಗಲಿ! ಇನ್ನೊಂದು ಐದು ನಿಮಿಷದಲ್ಲಿ ನಾವು ಮೈಸೂರು ಬಿಟ್ಟು, ದೂರ—ಬಹುದೂರ ಹೋಗಿರ್ತೇ"ವೆ!

ಇದನ್ನು ಕೇಳಿ ಸುಮಿತ್ರೆ ಅತ್ತೇ ಬಿಟ್ಟಳು. ತಾನು ಯಾಕಾದರು 'ಹೋಗು' ಅಂತ ಹೇಳಿದೆನೋ ಎಂದು ತನ್ನನ್ನೇ ಅನಳು ದೂಷಿಸಿ ಕೊಂಡಳು.

ಸುಮಿತ್ರೆಯ ಕಣ್ಣೀರನ್ನು ಕಂಡು ಶಾರದೆಗೂ ದುಃಖ ಮರುಕಳಿಸಿ ಕಿಟಕಿ ಯಲ್ಲಿ ಕೈಚಾಚಿ ಸುಮಿತ್ರೆಯನ್ನು ಬರಸೆಳೆದು ಅಪ್ಪಿಕೊಂಡಳು. ಅವಳ ತಲೆ ಯನ್ನು ನೇವರಿಸಿದಳು.

" ಥೂ ಹುಚ್ಚು ಹುಡುಗಿ, ಕಾಲೇಜಿನಲ್ಲಿ ಕಲಿತೂ, ಹೀಗೆ ಎಳೇ ಮಕ್ಕಳ ಹಾಗೆ ಅಳ್ತಾರೇನೇ ? " ಎಂದು ಸಂತೈಸಿದಳು.

ಸುಮಿತ್ರೆ " ಚಿಕ್ಕಮ್ಮಾ........ಚಿಕ್ಕಮ್ಮಾ" ಎಂದು ಹೇಳಿದಳೇ ಹೊರತು ಮುಂದೆ ಮಾತು ಸಾಗಲೇ ಇಲ್ಲ. ಅವಳ ಧ್ವನಿ ಗದ್ಗದಿತವಾಗಿ, ಮಾತು ಸರಾಗವಾಗಿ ಹೊರಟರೆ ತಾನೇ ?

ಸದಾಶಿವ, ಕಿಟ್ಟಣ್ಣ ಈ ದೃಶ್ಯವನ್ನು ನೋಡುತ್ತಾ ಗೊಂಬೆಗಳಂತೆ ಕುಳಿತು ಬಿಟ್ಟಿದ್ದರು.

ಎರಡನೆಯ ಬಾರಿ ಗಂಟೆ ಬಾರಿಸಿದೊಡನೆ, ಗಾರ್ಡು ಡ್ರೈವರ ನಿಗೆ 'ಸಿಗ್ನಲ್' ಕೊಡಲು ಹಸಿರು ಬಾವುಟ ಆಡಿಸಿದ. ಆಗ ಜೊತೆಯಲ್ಲಿ ಬಂದಿದ್ದ ಲೀಲಾವತಿ ಸುಮಿತ್ರೆಯನ್ನು ತನ್ನೆಡೆಗೆ ಎಳೆದುಕೊಂಡಳು.

"ಅಮ್ಮಾ ಲೀಲಾವತಿ, ಸುಮಿತ್ರೆಗೆ ಇನ್ನು ಮೈಸೂರಿನಲ್ಲಿ ಇರುವ ಬಂಧು, ಗೆಳತಿ—ಎಲ್ಲವೂ ನೀನೇ. ಅವಳ ಯೋಗಕ್ಷೇಮ ನಿನ್ನದಮ್ಮ." ಎಂದಳು ಶಾರದೆ ಲೀಲಾವತಿಯನ್ನು ಉದ್ದೇಶಿಸಿ.

ಲೀಲಾವತಿ ಹಾಗೆಯೇ ಆಗಲೆಂದು ತಲೆಯಲ್ಲಾಡಿಸಿಳು.

" ಈ ನಾಲ್ಕು ವರ್ಷಗಳು, ನೀನೂ, ಆ ಭಗಿನೀ ಸಮಾಜದ ಗೆಳತಿ ಯರೂ ತೋರಿದ ಆದರ, ಅಭಿಮಾನ, ಮೇಲಾಗಿ ಸ್ನೇಹವನ್ನು ನಾನು ಈ ಜನ್ಮ ದಲ್ಲಿ ಮರೆಯಲಾರೆ. ಮುಂದೆಯೂ ಇದೇ ವಿಶ್ವಾಸ ಇರಲಿ. ಆಗಾಗ್ಗೆ ಸಮಾಜದ ಚಟುವಟಿಕೆಗಳಿಗೆ ಬರೆಯುತ್ತೀ ತಾನೇ ? "

" ಹೂಂ. "

ಗಾಡಿ, ಶಿಲ್ಲು ಹಾಕಿಕೊಂಡು ಹಳಿಗಳ ಮೇಲೆ ಉರುಳಿತು. ಶಾರದೆ, ಕಿಟ್ಟಣ್ಣ, ಸದಾಶಿವ ಸುದರ್ಶನರು ಕೈಬೀಸಿ ' ಗುಡ್ ಬೈ ' ಹೇಳಿದರು.

ಸುಮಿತ್ರೆಯ ಕಂಬನಿದುಂಬಿದ ಕಣ್ಣುಗಳಿಗೆ ಅವರು ಕೇವಲ ಛಾಯಾ ರೂಪಿತರಾಗಿ ತೋರಿದರು. ಸುಮಿತ್ರೆ ಉನ್ಮತ್ತಳಂತೆ ಕೈಲಿದ್ದ ಕರವಸ್ತ್ರ ವನ್ನು ಬೀಸಿದಳು. ರೈಲು ನಿಲ್ದಾಣದಿಂದ ಕಣ್ಮರೆಯಾಗುವ ತನಕ ಬೀಸು ತ್ತಲೇ ಇದ್ದಳು.

' ಹುಚ್ಚು ಹುಡುಗಿ ' ಎಂದೆನ್ನುತ್ತಾ ಲೀಲಾವತಿ ರಟ್ಟೆ ಹಿಡಿದು ಎಳೆದಾ ಗಲೇ ಸುಮಿತ್ರೆಗೆ ಎಚ್ಚರ.

ರೈಲು ಇದಾವುದನ್ನೂ ಗಮನಿಸದಂತೆ ತನ್ನ ಪಾಡಿಗೆ ತಾನು ಓಡುತ್ತಿತ್ತು. ಅದಕ್ಕೆ ಈ ಬಗೆಯ ನೋಟ ದಿನವಹಿ ಸರ್ವಸಾಮಾನ್ಯ. ದಿನವಹಿ ಎಷ್ಟೋ ಮಂದಿ ತರುಣ ಪ್ರೇಮಿಗಳನ್ನೂ, ಅಣ್ಣ ತಂಗಿಯರನ್ನೂ, ತಂದೆ ಮಕ್ಕಳನ್ನೂ ಅಗಲಿಸಿ, ದೂರ ಬಹು ದೂರ ಕೊಂಡೊಯ್ಯುತ್ತಿದ್ದರೂ, ಆ ಬಗ್ಗೆ ಅದಕ್ಕೆ ದುಃಖವೂ ಇಲ್ಲ, ಸಂತೋಷವೂ ಇಲ್ಲ. ಇದೆಲ್ಲ ಮಾನವರಿಗೆ—ಸುಖ ಬಂದಾಗ ಹಿಗ್ಗುವ, ದುಃಖ ಬಂದಾಗ ಕುಗ್ಗುವ ಮಾನವರಿಗೆ! ಆದರೆ ರೈಲಿಗೆ? ಮಾನವರ ಜಯಾಪಜಯಗಳು, ಸಂತೋಷ ದುಡುಕುಗಳು ಎಲ್ಲವೂ ಒಂದೇ. ಅದರ ದೃಷ್ಟಿಯಲ್ಲಿ ಎಲ್ಲಿ ವಿರಹವೋ ಅಲ್ಲಿಯೇ ಮಿಲನ! ಎಲ್ಲಿ ಕಣ್ಣೀರೋ ಅಲ್ಲೇ ಆನಂದಭಾಷ್ಪ! ಹೀಗಾಗಿ ಅದು ಅನಾಸಕ್ತಿ ಯೋಗಿ. ಅದರ ಸ್ಥಿತಪ್ರಜ್ಞೆ ಯನ್ನು ಯಾವ ಭಾವವೂ ಚಂಚಲಗೊಳಿಸದು. ಆದುದರಿಂದಲೇ ಜ್ಞಾನಿಗಳು ಜಗತ್ತನ್ನು ರೈಲಿಗೆ ಹೋಲಿಸುವುದು........

ಈ ಜಗತ್ತಿನಲ್ಲಿ ಜನ ಕೆಲವು ಕಾಲ ಒಟ್ಟಿಗೆ ಇರುತ್ತಾರೆ. ತಮ್ಮ ತಮ್ಮ ನಿಲ್ದಾಣ ಬರುತ್ತಲೇ ಅಲ್ಲಿಂದ ಕಾಲ್ತೆಗೆಯುತ್ತಾರೆ. ಎಲ್ಲಿಂದಲೋ ಬಂದು, ಬಂಡಿಯಲ್ಲಿ ಇದ್ದ ನಾಲ್ಕು ಕ್ಷಣಗಳಲ್ಲಿಯೇ ಅದನ್ನೇ ತಮ್ಮ ಮನೆ ಮಾಡಿ ಕೊಂಡು, ನಕ್ಕು ನಗಿಸುತ್ತಾರೆ. ಅತ್ತು ಅಳಿಸುತ್ತಾರೆ. ಎಲ್ಲವೂ ನಾಲ್ಕು ದಿನ ಗಳ ಜೀವ. ಒಂದಿರುಳ ಪ್ರೇಮ. ಅವಧಿ ಪೂರೈಸಿ, ರೈಲಿನಿಂದ ಹೊರಬಿದ್ದ ಮೇಲೆ ಒಬ್ಬರನ್ನೊಬ್ಬರು ಸೇರುವುದು ಎಂದೋ........ಯಾವ ಕಾಲಕ್ಕೋ.... ಯಾರು ಬಲ್ಲರು ? ಹೀಗಿದ್ದೂ ನಾಲ್ಕು ದಿನಗಳ ಬಾಳನ್ನೇ ಶಾಶ್ವತವೆಂದು

ತಿಳಿದು ವರ್ತಿಸುವ ನಮ್ಮ ಮೌಢ್ಯತೆಯನ್ನು ಏನೆನ್ನಬೇಕು? ಇದನ್ನೆಲ್ಲಾ ಯೋಚಿಸುತ್ತಾ ಕುಳಿತಿದ್ದ ಶಾರದೆ ತನ್ನಲ್ಲಿಯೇ ನಕ್ಕಳು!

ಶಾರದೆಯ ಮನಸ್ಸೂ ರೈಲಿನಷ್ಟು ವೇಗದಲ್ಲಿಯೇ ಓಡುತ್ತಿತ್ತು. ಸುಮಿತ್ರೆಯನ್ನು ಬೀಳ್ಕೊಡುವಾಗ ಅವಳ ಮನಸ್ಸಿಗಾದ ನೋವು ಅವಳಿಗೇ ಗೊತ್ತು! ಸುಮಿತ್ರೆ—ಅವಳು ಶಾರದೆಯ ಮಗಳೇನೂ ಅಲ್ಲ. ಆದರೇನು? ಜೊತೆಯಲ್ಲಿ ಕಳೆದ ಐದಾರು ವರ್ಷಗಳಲ್ಲೇ ಅವಳು ಶಾರದೆಯ ಮಗಳೇ ಆಗಿದ್ದಳು. ಶಾರದೆಗೆ ಗತಸ್ಮೃತಿಗಳು ಕೆರಳಿ, ಕೃಷ್ಣವೇಣಿ ಶ್ರೀಧರರನ್ನು ನೆನೆದುಕೊಂಡಾಗಲೆಲ್ಲಾ ಸುಮಿತ್ರೆ ಸಂಜೀವಿನಿಯಾಗಿ ಬಂದು ಅವಳನ್ನು ಸಂತೈಸುತ್ತಿದ್ದಳು. ಶಾರದೆಯ ಭಾಗಕ್ಕೆ ಸುಮಿತ್ರೆ ಕೃಷ್ಣವೇಣಿಯೇ ಆಗಿದ್ದಳು. ಸುಮಿತ್ರೆಗೂ ಅಷ್ಟೇ. ಒಂದು ದಿನವಾದರೂ ಅವಳು ತನ್ನ ತಾಯಿ ತಂದೆಗಳನ್ನು ನೆನೆಸಿಕೊಂಡು ಖಿನ್ನಳಾದುದಿಲ್ಲ. ಸುಮಿತ್ರೆಯ ಮನಸ್ಸಿನ ಸೀಮೆಯಿಂದ ಹೆತ್ತವರೆಂದೋ ಮರೆಯಾಗಿದ್ದರು. ಈಗ ಅವಳಿಗೆ ಸರ್ವಸ್ವವೆಂದರೆ ಶಾರದೆಯ ಸಂಸಾರ! ಹೀಗಿರುವಲ್ಲಿ ಸುಮಿತ್ರೆ ತಾನು ಒಂಟಿಯಾಗಿ ಇರಬೇಕಾದುದಕ್ಕೆ ಕಣ್ಣೀರು ತರುವುದರಲ್ಲಿ ಅಚ್ಚರಿ ಏನು?........

ಶಾರದೆಗೆ ಇವುಗಳಳೊಂದೂ ಅಚ್ಚರಿಯೆನಿಸಲಿಲ್ಲ. ಅವಳನ್ನು ಅಚ್ಚರಿಗೊಳಿಸಿದ ಅಂಶವೆಂದರೆ ಎಲ್ಲವನ್ನೂ ತಾನು ತಿಳಿದೂ ತಿಳಿದೂ, ತಾನಾಗಿ ಮೋಹ ಮಮತೆಗಳ ಸುಳಿಗೆ ಸಿಕ್ಕಿ, ಅವುಗಳಿಂದ ಪಾರಾಗುವ ದಾರಿ ಕಾಣದೆ, ತೊಳಲುವ ತನ್ನ ವಿಚಿತ್ರ ನಡವಳಿಕೆ! ಶಾರದೆ ಆದಿನ ಜಗತ್ತಿನ ಆರ್ತನಾದಕ್ಕೆ ಕಿವಿಗೊಟ್ಟು, ಕರ್ತವ್ಯದ ಕರೆಯನ್ನು ಮನ್ನಿಸಿ, ಮಲಗಿದ್ದ ಪತ್ನಿ ಪುತ್ರರನ್ನು ಬಿಟ್ಟು ಹೊರಟು ಹೋದ ಭಗವಾನ್ ಬುದ್ಧ ಮುನಿಯ ಮನೋನಿಷ್ಠುರತೆಯಲ್ಲಿ, ದೃಢತೆಯಲ್ಲಿ ತಾನೂ ಮಲಗಿದ್ದ ಮಕ್ಕಳನ್ನು ಬಿಟ್ಟು ಬಂದಳು. ಅಲ್ಲಿಗೆ ಆ ಮಕ್ಕಳ ಮೋಹ, ಕರುಳಿನ ಬಳ್ಳಿ ಕಡಿದೊಗೆಯಿತೆಂದು ಅವಳು ಬಗೆದಳು. ಆದರೆ ಆದುದೇನು?

ಮಡಿಕೇರಿಗೆ ಬಂದ ಮೇಲೆ ಶಾರದೆಯ ಸಂಸಾರ ಇನ್ನಷ್ಟು ಬೆಳೆಯಿತು. ಹೆಣ್ಣಿನ ಮಂಟಪ ಅವಳ ಕೈಗೂಸಾಯಿತು. ಅದರ ಸಂಬಂಧದಲ್ಲಿ ಎಷ್ಟೊಂದು ಜನ ಶಾರದೆಯ ಕೊರಳಿಗೆ ಜೋತುಬಿದ್ದರು. ಪಾರ್ವತಮ್ಮ ಶಾರದೆಯನ್ನು ಮಗಳೆಂದೇ ತಿಳಿದರು. ಮಂಗಳೆ ಶಾರದೆಗೆ ಅಕ್ಕನೇ ಆದಳು. ಸುಮಿತ್ರೆ,

ಶೈಲಜೆಯರಿಗೆ ' ಚಿಕ್ಕಮ್ಮ 'ನಾಮದು ಸರಿಯೇ ಸರಿ! ಇನ್ನು ಮೈಸೂರಿಗೆ ಬಂದ ಮೇಲೆ ಶಾರದೆಯ ಬಳಗಕ್ಕೆ ಇನ್ನಿಷ್ಟು ಜನ ಸೇರಿಹೋದರು. ಯಶೋದಾಬಾಯಿ, ಲೀಲಾವತಿ, ನಿರ್ಭಾಗ್ಯ ರುಕ್ಮಿಣಿ, ಪತಿತೆಯಾದ ಆ ಮುತ್ತೈದೆ, ಅನಾಥಾಲಯದ ಧರ್ಮದರ್ಶಿನಿ, ಅಲ್ಲಿನ ಮಕ್ಕಳು, ಸಮಾಜದ ಸದಸ್ಯರು, ಒಬ್ಬರೇ....ಇಬ್ಬರೇ....ಶಾರದೆ ಯಾರನ್ನೂ ಮರೆಯುವಂತಿಲ್ಲ. ಅಂತೆಯೇ ಹೋದೆಡೆಯಲ್ಲೆಲ್ಲಾ ಇತರರು ತೋರಿಸಿದ ಪ್ರೀತಿ ಸ್ನೇಹಗಳನ್ನು ಕುರಿತು ಆಲೋಚಿಸುತ್ತಾ ಅಂದುಕೊಂಡಳು. " ಮೋಹ ಮಮತೆಗಳಿಲ್ಲದೆ ಬದುಕೇ ಇಲ್ಲವೇನೋ "........ಶಾರದೆಗೆ ತಟಕ್ಕನೆ, ತಾನು ಎಲ್ಲಿಯೋ ಓದಿದ್ದ ಒಂದು ವಾಕ್ಯ ನೆನಪಿಗೆ ಬಂತು. " ಪ್ರೇಮವಿದ್ದೆಡೆ ಬದುಕುಂಟು ; ಹಗೆತನ ವಿನಾಶದ ದಾರಿ. " ಶಾರದೆಗೆ ಈ ಮಾತನ್ನು ನೆನೆದು ಒಂದು ಬಗೆಯ ತೃಪ್ತಿ, ಸಮಾಧಾನ ಉಂಟಾಯಿತು. ತಾನು ಸಣ್ಣ ಸಂಸಾರದಿಂದ ದೊಡ್ಡ ಸಂಸಾರಕ್ಕೆ ಬಿದ್ದುದಕ್ಕೆ ವ್ಯಥೆಯಾಗಲಿಲ್ಲ. " ಈಸಬೇಕು— ಇದ್ದು ಜೈಸಬೇಕು " ಎನ್ನುವ ದಾಸರ ಪಲ್ಲವಿಯನ್ನು ನೆನೆದು ಅವಳು ತನ್ನಲ್ಲಿಯೇ ನಕ್ಕಳು.

ಕಿಟ್ಟಣ್ಣ ತನ್ನ ಚಿಂತೆಯಲ್ಲಿ ತಾನು ಮುಳುಗಿದ್ದ. ಇದುವರೆಗೆ ಅವನ ಜೀವನ ಒಂದು ಬಗೆಯಾಗಿತ್ತು. ಆ ಬಗೆಯ ಜೀವನ ಅವನಿಗೆ ಒಗ್ಗಿತ್ತು. ಈಗ ದಿಳ್ಳಿಯಿಂದ ಹಳ್ಳಿಗೆ ಹೊರಟಿದ್ದಾನೆ. ಅವನ ವೃತ್ತಿ ಅವನಿಗೇ ವಿಚಿತ್ರ! ಇನ್ನು ಮೇಲೆ ತಾನೊಬ್ಬ ಶಾಲಾ ಉಪಾಧ್ಯಾಯ! ಇಂದಿನ ಮಕ್ಕಳನ್ನು ನಾಳಿನ ಯೋಗ್ಯ ಪೌರರನ್ನಾಗಿ ಮಾಡುವ ಜವಾಬ್ದಾರಿ ತನ್ನ ಹೆಗಲ ಮೇಲೆ ಬಿದ್ದಿದೆ. ತನಗೆ ಬಂದಿರುವ ಹೊಸ ಪಟ್ಟನ್ನು ನೆನೆದು ಅವನಿಗೆ ನಗು ಬರದೆ ಇರಲಿಲ್ಲ. ತನ್ನಲ್ಲಿಯೇ ನಕ್ಕ.

ಫ್ರೆಂಚ್ ರಾಕ್ಸ್ ನಿಲ್ದಾಣ ಬಂತು. ಅದೇ ಕಿಟ್ಟಣ್ಣ ಇಳಿಯಬೇಕಾಗಿದ್ದ ನಿಲ್ದಾಣ. ಸದಾಶಿವ ಲಗುಬಿಗೆಯಿಂದ ಅವರ ಸಾಮಾನುಗಳನ್ನು ಇಳಿಸಿ, ಮುಂದಿನ ಭಾನುವಾರ ತಾನು ಅವರ ಊರಿಗೆ ಬರುವುದಾಗಿ ಹೇಳಿ, ಮಂಡ್ಯಕ್ಕೆ ಹೊರಟು ಹೋದ.

ಸ್ಟೇಷನ್‌ಗೆ ಕಿಟ್ಟಣ್ಣನನ್ನು ಸ್ವಾಗತಿಸಲು ಯಾರೂ ಬರಲಿಲ್ಲ. ಕಿಟ್ಟಣ್ಣ ಯಾರಾದರೂ ಬಂದಾರೆಂದು ಊಹಿಸಿಯೂ ಇರಲಿಲ್ಲ. ಅವನು ಕೆಲವು ದಿನದ ಹಿಂದೆ ಕೇತನ ಹಳ್ಳಿಗೆ ಬಂದು ಆ ಊರಿನ ಪಟೇಲನ ನೆರವಿನಿಂದ ವಾಸಕ್ಕೊಂದು

ಮನೆಯನ್ನು ನೋಡಿಕೊಂಡು ಬಂದಿದ್ದ. ಮೊದಲು ಹಳ್ಳಿಗೆ ಹೋಗಿ ಅನಂತರ ಅಲ್ಲಿಂದ ಆಳು ಕಳುಹಿಸಿ, ಸಾಮಾನು ತರಿಸಿಕೊಂಡರಾಯಿತೆಂದು ಸಾಮಾನುಗಳನ್ನು ಸ್ಟೇಷನ್ ಮಾಸ್ತರ ವಶದಲ್ಲಿ ಇರಿಸಿ, ಕೇತನಹಳ್ಳಿಗೆ ಹೊರಟರು.

ಕೇತನಹಳ್ಳಿ ಫ್ರೆಂಚ್‌ರಾಕ್ಸ್ ನಿಲ್ದಾಣಕ್ಕೆ ಕೇವಲ ಒಂದೂವರೆ ಮೈಲಿ. ಅದು ಸಾವಿರ ಜನಸಂಖ್ಯೆಯುಳ್ಳ ಗ್ರಾಮ. ಐದು ಕೆಲವು ವರ್ಷಗಳಿಂದ ಈಚೆಗೆ ಪ್ರಗತಿ ಮಾರ್ಗದಲ್ಲಿ ನಡೆದಿತ್ತು. ಆ ಊರಿನಲ್ಲಿ ಹುಟ್ಟಿ, ಬೆಂಗಳೂರು ಸೇರಿ, ಓದಿ, ವಿದ್ಯಾವಂತನಾಗಿ, ಹಿರಿಯ ಅಧಿಕಾರಿಯಾಗಿದ್ದ ಒಬ್ಬ ಮಹನೀಯರ ಪ್ರಯತ್ನದಿಂದ ಆ ಗ್ರಾಮ ಮುಂದುವರೆದಿತ್ತು. ಅವರ ದೆಸೆಯಿಂದ ಕೇತನಹಳ್ಳಿಗೆ ಎಲೆಕ್ಟ್ರಿಕ್ ದೀಪ ಬಂದಿತ್ತು. ಊರಿಗೊಂದು ಆಸ್ಪತ್ರೆ ಹಾಗೂ ಪೋಸ್ಟಾಫೀಸ್ ಇತ್ತು. ಕೆಲವು ವರ್ಷಗಳ ಹಿಂದೆ ಆ ಗ್ರಾಮದಲ್ಲಿ 'ನ್ಯೂ ಟೈಪ್' ಮಿಡಲ್ ಸ್ಕೂಲು ಆರಂಭವಾಗಿತ್ತು. ಹೀಗಿದ್ದರೂ ಕೇತನಹಳ್ಳಿ ಎಷ್ಟು ಮುಂದುವರೆಯಬೇಕೋ ಅಷ್ಟು ಮುಂದುವರೆದಿರಲಿಲ್ಲ. ಕಾರಣ? ನಮ್ಮ ದೇಶದ ಇತರ ಹಳ್ಳಿಗಳಂತೆ ಕೇತನಹಳ್ಳಿಯೂ ಒಂದು ಪಾರ್ಟಿ ಗ್ರಾಮ. ಹಳ್ಳಿಗರ ಸಂಕುಚಿತ ಮನೋವೃತ್ತಿ, ಸ್ವಾರ್ಥ, ಅಜ್ಞಾನ, ಅಂಧಶ್ರದ್ಧೆ, ದ್ವೇಷಾಸೂಯೆಗಳಿಗೆ ಬಲಿಯಾಗಿ, ಊರು ಎರಡು ಬಣಗಳಾಗಿ ಒಡೆದಿತ್ತು.

ಶಾರದೆಗೆ ಕೇತನಹಳ್ಳಿಯ ವಾಸ ವಿಚಿತ್ರ ಅನುಭವಗಳನ್ನು ತಂದು ಕೊಟ್ಟಿತು. ಅವಳಿಗೆ ಹಳ್ಳಿಗಳ ನಿಜವಾದ ಸ್ವರೂಪ ಏನೆಂದು ತಿಳಿಯಹತ್ತಿತು. ಶಾರದೆ ಹಳ್ಳಿಯಲ್ಲೇ ಹುಟ್ಟಿ, ಹಳ್ಳಿಯಲ್ಲೇ ಬೆಳೆದಿದ್ದರೂ, ಅವಳ ಹಳ್ಳಿಗಾಡಿನ ಅನುಭವ ಬೇರೊಂದು ಬಗೆಯಾಗಿತ್ತು. ಶಾಮಣ್ಣನವರಂತಹ ದೇವತಾ ಮನುಷ್ಯರು ಊರ ಮುಖಂಡರಾಗಿದ್ದುದರಿಂದ ಕೊರಟಿ ನೆಮ್ಮದಿಯಾಗಿ ಸುಭಿಕ್ಷವಾಗಿತ್ತು. ಅದು ಎಲ್ಲ ವಿಷಯಗಳಲ್ಲಿ ಇತರ ಹಳ್ಳಿಗಳಿಗೆ ಮಾದರಿಯಾಗಿತ್ತು. ಶಾರದೆ ಭಗಿನೀ ಸಮಾಜದಲ್ಲಿ ಕೆಲಸ ಮಾಡುತ್ತಿದ್ದಾಗ, ಸಂದರ್ಶಿಸಿದ್ದ ಹಳ್ಳಿಗಳ ರೀತಿ ಅದೊಂದು ತರಹ ಇತ್ತು. ಅವು ನಗರಕ್ಕೆ ಅಂಟಿಕೊಂಡೇ ಇದ್ದುದರಿಂದ, ನಗರದ ಪ್ರಭಾವಕ್ಕೆ ಸಿಕ್ಕಿ, ಸಾಕಷ್ಟು ಮುಂದುವರೆದಿದ್ದವು. ಅವುಗಳಲ್ಲಿ ಸುಧಾರಣೆ ತರುವುದು ಶಾರದೆಗೆ ಹೆಚ್ಚು ಕಷ್ಟ ಕಾಣಲಿಲ್ಲ. ಆದರೆ ಕೇತನಹಳ್ಳಿಯ ಕಥೆಯೇ ಬೇರೆ. ಹೆಸರಿಗೆ ಅದು ಮುಂದುವರೆದ ಗ್ರಾಮ. ವಾಸ್ತವವಾಗಿ ಅದೊಂದು ಕುಗ್ರಾಮವೇ ಸರಿ! ಎಲ್ಲೆಲ್ಲಿ ನೋಡಿದರೂ ಕೊಳಕು.

ಯಾರ ಮನೆಯಲ್ಲಿ ನೋಡಿದರೂ ಸಣ್ಣ ಪುಟ್ಟ ಕಾಹಿಲೆ ಕಸಾಲೆಗಳು.
ದುಡಿದರೆ ಹೊಟ್ಟೆತುಂಬಾ ತಿನ್ನುವಷ್ಟು ಭೂಸಮೃದ್ಧಿಯಿದ್ದರೂ ಜನಕ್ಕೆ ದ
ಯುವುದು ಬೇಕಿಲ್ಲ. ಅವರು ಊರಿನಲ್ಲಿ ಕಾಡುಹರಟೆಯಲ್ಲಿ ಹೊತ್ತು
ಯುವರೇ ಹೊರತು, ಬಯಲಿನಲ್ಲಿ ಬೆವರು ಸುರಿಸರು. ಹೊಟ್ಟೆತುಂಬಾ ಹಿ
ಬೇಕೆಂದರೆ ಎಲ್ಲಿಂದ ಬಂದೀತು ?

ಈಚೆಗೆ ಕೆಲವು ದಿನಗಳಿಂದ ಪತ್ರಿಕೆಗಳ ತುಂಬಾ ದೇಶದಲ್ಲಿ ಹಠಾ
ತಲೆದೋರಿರುವ ಆಹಾರದ ಅಭಾವದ ಮಾತೇ ಮಾತು ! ಶಾರದೆಗೆ ಕ
ಯಲ್ಲಿ ಹೊತ್ತು ಹೋಗದೇ ಇದ್ದುದರಿಂದ ಅವಳು ಹೆಚ್ಚು ಕಾಲ ಪುಸ್ತಕ ಪ
ಗಳ ವ್ಯಾಸಂಗಕ್ಕೆ ವಿನಿಯೋಗಿಸುತ್ತಿದ್ದಳು. ಮನೆಯಲ್ಲಂತೂ ಸುದರ್ಶ
ಕಾಟವಿಲ್ಲ. ಅವನು ಕಿಟ್ಟಣ್ಣನೊಂದಿಗೆ ಶಾಲೆಗೆ ಹೋಗಿ ಬರುತ್ತಿದ್ದ. ಶಾರ
ಸಿಕ್ಕಿದ ನೆರೆಯೂ ಅಂತಹುದೇ. ಪೋಸ್ಟುಮಾಸ್ತರ ಮನೆಯಲ್ಲಿ ಮು
ಹೊತ್ತೂ ಅತ್ತೆ ಸೊಸೆಯರ ಜಗಳ. ಹೆಡ್‌ಮಾಸ್ಟರ ಮನೆಯಲ್ಲಿ ಮನು
ಕೈಲಿ ಮುಖ ಕೊಟ್ಟು ಮಾತನಾಡದ ಸಿಡುಕಿ ಹೆಂಡತಿ. ಹೀಗಾಗಿ ಶಾ
ಯಾರ ಮನೆಗೂ ಹೆಚ್ಚು ಹೋಗಿ ಬರುತ್ತಿರಲಿಲ್ಲ. ಇನ್ನು ಅವಳು ಹೋ
ಬರುತ್ತಿದ್ದುದೆಂದರೆ ಅದು ಸ್ಟೇಶನ್ ಮಾಸ್ಟರ ಮನೆಗೆ. ಸಂಜೆ ಬೇ
ವಾದರೆ, ಕಿಟ್ಟಣ್ಣ ಸುದರ್ಶನರೊಡನೆ ಫ್ರೆಂಚ್‌ರಾಕ್ಸ್ ತನಕ ಹೋಗಿ ಸ್ಟೇಷ
ಮಾಸ್ಟರ ಮನೆಯಲ್ಲಿ ಕೊಂಚ ಹೊತ್ತು ಕಳೆದುಬರುತ್ತಿದ್ದಳು.

ಸ್ಟೇಷನ್ ಮಾಸ್ಟರ ಮನೆಯವರು ಸುಧಾರಿಸಿದ ಜನ. ಸ್ಟೇಷನ್‌ಮಾ
ಹೆಂಡತಿ ತುಂಬಾ ಸ್ನೇಹಮಯಿ. ಮನೆಯ ತುಂಬಾ ಮಕ್ಕಳು. ಹಿರಿ
ಹುಡುಗಿಯನ್ನು ಬೊಂಬಾಯಿಗೆ ಕೊಟ್ಟಿತ್ತು. ಕಿರಿಯ ಹುಡುಗಿ ಮೈಸೂರಿ
ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಓದುತ್ತಿದ್ದಳು. ಒಮ್ಮೆ ಯಾವುದ
ಹಬ್ಬಕ್ಕೆ ಸುಮಿತ್ರೆ ಕೇತನಹಳ್ಳಿಗೆ ಬಂದಿದ್ದಾಗ—ಅದೇ ರೈಲಿಗೆ ತಂದೆಯ ಮ
ಬಂದಿದ್ದ ಸ್ಟೇಷನ್‌ಮಾಸ್ಟರ ಮಗಳ ಪರಿಚಯವಾಗಿ, ಬಹುಬೇಗ ಅವರಿಬ್ಬ
ಆಪ್ತ ಗೆಳತಿಯರಾಗಿ ಬಿಟ್ಟರು. ಮೈಸೂರಿನಲ್ಲಿ ಸುಮಿತ್ರೆಗೆ ಯೋಗ್ಯ ಸಂಗ
ಸಿಕ್ಕಿದಂತೆ ಸ್ಟೇಷನ್ ಮಾಸ್ಟರ ಮನೆಯವರು ಶಾರದೆಗೆ ಆಪ್ತ ಬಂಧು
ಆದರು.

ಒಂದು ದಿನ ಶಾರದೆ ಸ್ಟೇಷನ್ ಮಾಸ್ಟರ ಮನೆಗೆ ಬಂದಿದ್ದಾಗ, ಅ

ಟೇಬಲ್ ಮೇಲೆ ಇದ್ದ ಸ್ಟೇಟ್ಸ್‌ಮನ್ ಪತ್ರಿಕೆ ಕಣ್ಣಿಗೆ ಬಿತ್ತು. ಶಾರದೆ ಅದನ್ನು ಎತ್ತಿಕೊಂಡು ನೋಡಿದಳು. ಅದರ ತುಂಬಾ ಬಂಗಾಲದ ಬರಗಾಲದ ಚಿತ್ರಗಳು ಬಂದಿದ್ದವು. ಅವಕ್ಕೆ ಸಂಬಂಧಿಸಿದಂತೆ ಒಂದೆರೆಡು ಲೇಖನಗಳೂ ಇದ್ದವು. ಅದನ್ನು ನೋಡಿ ಶಾರದೆಗೆ ಕರುಳಿಗೆ ಬೆಂಕಿ ಇಟ್ಟಂತೆ ಆಯಿತು. ಅವಳಿಗೆ ಇದು ತನಕ ಬಂಗಾಳದ ಬರಗಾಲ ಇಷ್ಟು ಭೀಕರವಾಗಿವೆ ಎಂದು ತಿಳಿದಿರಲಿಲ್ಲ. ಬಂಗಾಳದ ಬರಗಾಲದ ನಿಜವಾದ ಸ್ವರೂಪ ಅವಳಿಗೆ ಗೊತ್ತಾದ್ದು ಆಗಲೇ.

ಅಕ್ಟೋಬರ್ ಹದಿನಾರಕ್ಕೆ ಬಂಗಾಳದ ಹೊನ್ನೆಲದ ಮೇಲೆ ಕ್ಷಾಮದ ಮಾರಿ ಕಾಲಿಟ್ಟಳಂತೆ. ಅವಳು ಬರುವಾಗ ತನ್ನೊಡನೆ ನೀರಿನ ಮಹಾಪೂರವನ್ನೇ ತಂದಳು. ಮಿದನಾಪುರ, ತಿಪ್ಪೇರ, ಪರಗಣ ಜಿಲ್ಲೆಗಳಲ್ಲಿ ಪ್ರಚಂಡ ಬಿರುಗಾಳಿಗಳು ಬೀಸಲಾರಂಭಿಸಿದವು. ಈ ಚಂಡ ಮಾರುತದ ಹೆದ್ದಾಳಿಯನ್ನು ಎದುರಿಸಲಾರದೆ, ಮನೆ ಮಠಗಳು ಕುಸಿದು ಬಿದ್ದವು. ಜನ, ದನ ಲೆಖ್ಖವಿಲ್ಲದಷ್ಟು ಸಾವಿನ ಕರಾಳ ಬಾಯಿಗೆ ಬಿದ್ದರು. ಪ್ರಳಯ ತಾಂಡವ ನೃತ್ಯವೇ ನಡೆಯಿತು. ನೆಲ ಹೊಲ, ಊರು ಉದ್ಯಾನ, ಎಲ್ಲವೂ ನೀರಿನಲ್ಲಿ ಮುಳುಗಿದವು. ಜನ ಹುಳುಮುಪ್ಪಟೆಗಳಂತೆ ನೀರಿನಲ್ಲಿ ಕೊಚ್ಚಿ ಹೋದರು. ಎಲ್ಲೆಲ್ಲಿ ನೋಡಿದರೂ ಹಾಹಾಕಾರ, ನೆರೆಹಾವಳಿಯಲ್ಲಿ ಸಿಕ್ಕಿ, ಜರ್ಝರಿತರಾದ ಪತಿತರ ಆಕ್ರಂದನ. ಅವರಿಗೆ ನರಕ ಯಾತನೆಯನ್ನು ಅನುಭವಿಸುವುದಕ್ಕಿಂತಲೂ, ಮರಣವೇ ಸುಖವಾಗಿ ತೋರಿತು.

ಸರಕಾರದವರು ಮಾಡಿದ್ದ ಅಂದಾಜಿನಂತೆ, ನೆರೆಹಾವಳಿಯಿಂದ ಮಡಿದವರ ಸಂಖ್ಯೆ ಹದಿನಾರು ಸಾವಿರ; ಸತ್ತ ದನಕರುಗಳ ಸಂಖ್ಯೆ ಲಕ್ಷದ ವರೆಗೆ. ಏಳು ಸಾವಿರಕ್ಕೂ ಮೇಲ್ಪಟ್ಟು ಗುಡಿಸಲುಗಳು ಹೆಸರಿಲ್ಲದಾದವು. ಹದಿನೈದು ಲಕ್ಷಕ್ಕೂ ಮೇಲ್ಪಟ್ಟ ಜನ ದಿಕ್ಕಿಲ್ಲದ ಪರದೇಶಿಗಳಾದರು. ಇದರ ಜೊತೆಗೆ ಮಾರಿಕಾ ಉಪದ್ರವ ಬೇರೆ. ಇದರಲ್ಲಿ ನರಳಿದವರ ಲೆಖ್ಖವೇ ಇಲ್ಲ!

ಇದರ ಬೆನ್ನಿಗೇ ಬೆಳೆಗಳೆಲ್ಲಾ ನಾಶವಾಗಿ, ಭೀಕರ ಕ್ಷಾಮ ಕಾಲಿರಿಸಿತು. ಒಂದೆಡೆ ನೆರೆ ಹಾವಳಿಯಿಂದ ಬೆಳೆಗಳು ಹಾಳಾದರೆ ಮತ್ತೊಂದೆಡೆಯಲ್ಲಿ ಮಳೆ ಸಕಾಲದಲ್ಲಿ ಬಾರದೆ ಬೆಳೆಗಳು ಒಣಗಿದವು. ಹಳ್ಳಿಯಲ್ಲಿ ಒಂದು ತುತ್ತು ಅನ್ನ ಕಾಣಲಾರದ ಜನ, ಕಲ್ಕತ್ತಾ ಮೊದಲಾದ ನಗರಗಳ ಕಡೆ ಮುಖ ಮಾಡಿ ನಡೆ

ದರು. ಆದರೆ ಕಲ್ಕತ್ತೆಗೆ ಜನ ಸಾಯಲು ಬರುವಂತಾಯಿತು. ಕಲ್ಕತ್ತೆಯ ರಾಜಬೀದಿಗಳು ನಿರಾಶ್ರಿತರಿಂದ, ಭಿಕ್ಷುಕರಿಂದ ತುಂಬಿ ಹೋದವು. ಅಕ್ಕಿಯ ಕಾಳಿಗೆ ಅಣೆ ಮುತ್ತುಗಳಿಗೂ ಮೀರಿದ ಬೆಲೆಯಾಯಿತು. ಜನ ಹೊಟ್ಟೆಗಾಗಿ ಮಾನ ಬಿಟ್ಟರು. ಮಕ್ಕಳನ್ನು ಮಾರಿದರು. ಹಿಡಿ ಅನ್ನಕ್ಕಾಗಿ ಬೀದಿಯ ನಾಯಿ ನರಿಗಳೊಂದಿಗೆ ಸ್ಪರ್ಧೆಗೆ ನಿಂತರು ! ಹಾಯ್ ! ಹಾಳು ಹೊಟ್ಟೆ ! ಬದುಕಿಗಿಂತ ಸಾವೇ ಸುಖವೆಂದು ಅವರಿಗೆ ಅನಿಸಿತು. ಜನ ಹಸಿವಿನಿಂದ ಸಾಯಲಾರದೆ ಬದುಕಿ ಸತ್ತರು. ಎಲ್ಲೆಲ್ಲಿ ನೋಡಿದರೂ ಹೆಣಗಳ ರಾಶಿ. ಅವನ್ನು ತೆಗೆದು ಮಣ್ಣುಮಾಡುವವರೇ ದಿಕ್ಕಿಲ್ಲದಾಯಿತು. ಜನ ಸತ್ತು ಆ ಮೂಲಕ ನಾಯಿನರಿಗಳ ಆಹಾರವಾಗಿ, ಕೃತಕೃತ್ಯರಾದರು.

ಸರಕಾರ ಮಾತ್ರ ತೆಪ್ಪಗೆ ನಿದ್ರಿಸುತ್ತಿತ್ತು. ಆರ್ತರ ಕೂಗು ಅದರ ಕಿವಿಗೆ ಬೀಳಲಿಲ್ಲ. ಕರುಣಾಜನಕ ನೋಟ ಅದರ ಗಮನ ಸೆಳೆಯಲಿಲ್ಲ. ಅದು ಯುದ್ಧದ ಕವಾಯತಿನಲ್ಲಿ ಮಗ್ನವಾಗಿ, ಕಳ್ಳ ಸಂತೆಕೋರರನ್ನು ಪೋಷಿಸಿ ಕೊಂಡು ನಿಂತಿತ್ತು.

ಶಾರದೆ ಚಿತ್ರಗಳ ಕಡೆ ಕಣ್ಣಾರಳಿಸಿ ನೋಡಿದಳು. ಒಂದು ಚಿತ್ರದಲ್ಲಿ ಮುದುಕಿಯಂತೆ ಕಾಣುವ ಹೆಂಗಸೊಬ್ಬಳು ಬಿದ್ದುಕೊಂಡಿದ್ದಾಳೆ. ಪೈಯ್ಯೋ ಎಲುಬಿನ ಹಂದರ ! ಅದಕ್ಕೆ ಅಂಟಿಕೊಂಡು ನಿಸತ್ವವಾಗಿ ನೀರಸವಾಗಿ ಸ್ತನಗಳು ಜೋಲು ಬಿದ್ದಿವೆ. ಅದಕ್ಕೆ ಬಾಯಿ ಇಟ್ಟು ಒಂದೆರಡು ವರ್ಷದ ಮಗು ಮಲಗಿದೆ ! ಆ ಮುದುಕಿಯ ಮೇಲೆ ಮಾನ ಮುಚ್ಚಲು ಒಂದು ತುಂಡು ಬಟ್ಟೆಯಿಲ್ಲ.

ಇನ್ನೊಂದು ಚಿತ್ರ. ಮನೆಯ ಮುರುಕು ಗೋಡೆಗಳ ನಡುವೆ ಎರಡು ಅಸ್ಥಿಪಂಜರಗಳು ಒಂದರ ಪಕ್ಕದಲ್ಲಿ ಒಂದು ಬಿದ್ದಿವೆ. ಬದುಕಿದ್ದಾಗ ಅವರು ಹೊಸದಾಗಿ ಮದುವೆಯಾದ ಗಂಡ ಹೆಂಡಿರಂತೆ ! ಈಗ ಸಾವಿನಲ್ಲಿಯೂ ಅಷ್ಟೇ. ಚರ್ಮ ಮಾಂಸಗಳು ಕ್ರಿಮಿಕೀಟಗಳ ಪಾಲಾಗಿ, ಅಸ್ಥಿ ಪಂಜರ ಮಾತ್ರ ಉಳಿದಿದೆ. ಅವು ಬಿದ್ದಿರುವ ಭಂಗಿಯಲ್ಲಿ--ಅವರು ಒಬ್ಬರನ್ನೊಬ್ಬರು ಎಷ್ಟು ಪ್ರೀತಿಸುತ್ತಿದ್ದರೋ ಏನೋ............ಒಬ್ಬರ ಕೈ ಇನ್ನೊಬ್ಬರನ್ನು ಅಪ್ಪಿದೆ. ಇಂದು ಅವು ಕೇವಲ ಮೂಳೆಗಳು !

ಶಾರದೆಗೆ ಈ ದೃಶ್ಯಗಳನ್ನು ಹೆಚ್ಚು ಕಾಲ ನೋಡುತ್ತಾ ಕುಳಿತುಕೊ

ಸ್ಥಲು ಆಗದೇ ಹೋಯಿತು. ಅವಳ ಕಣ್ಣುಗಳಿಂದ ಅವಳಿಗೆ ತಿಳಿಯದಂತೆ ಕಣ್ಣೀರು ತೊಟ್ಟಿಕ್ಕಿದವು. ಅಯ್ಯೋ, ಬಂಗಾರ ಬೆಳೆಯುತ್ತಿದ್ದ ಬಂಗಾಳ, ನಿನಗೆ ಈ ಕಂಗಾಲ ಸ್ಥಿತಿಯೇ? ಎಂದು ತನ್ನಲ್ಲೇ ಮಿಡುಕಿದಳು.

ಶಾರದೆ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಸುಮ್ಮನೆ ಅನುಕಂಪ 'ಸಹಾನು ಭೂತಿ ತೋರಿಸಿದರೆ ಸಾಲದು. ಅವರೊಡನೆ ನೆರವೂ ನೀಡಬೇಕು.' ಎಂದು ಬಂಗಾಳದ ಕ್ಷಾಮ ನಿವಾರಣೆಗಾಗಿ ನಿಧಿ ಕೂಡಿಸಲು ನಿರ್ಧರಿಸಿದಳು. ಈ ವೇಳೆ ಗಾಗಲೇ ದೇಶ್ಯಾದ್ಯಂತ ಜನ ನಾಯಕರು .ಬಂಗಾಳದ ಮಕ್ಕಳನ್ನು ಕ್ಷಾಮ ಮಾರಿಯ ದವಡೆಯಿಂದ ಪಾರು ಮಾಡಲು ಎಲ್ಲ ಬಗೆಯ ಸಹಾಯ ಮಾಡಬೇ ಕೆಂದು ಜನತೆಯಲ್ಲಿ ಮೊರೆಯಿಡುತ್ತಿದ್ದರು.

ದೇಶದ ಮೂಲೆ ಮೂಲೆಗಳಿಂದ ಕೊಡುಗೈಯ್ಯ ದಾನಿಗಳು ನಿಧಿ ಸಂಗ್ರ ಹಿಸಿ ಕಳುಹಿಸಿದರು. ನೂರಾರು ಡಾಕ್ಟರುಗಳು ಸೇವಾಪಥಕಗಳನ್ನು ಕಟ್ಟಿ ಕೊಂಡು ನೆರೆಹಾವಳಿಯಿಂದ ನೊಂದ ಜನಗಳಿಗೆ ವೈದ್ಯಕೀಯ ಸಹಾಯ ಕೊಡ ಲೆತ್ನಿಸಿದರು. ಶ್ರೀರಾಮಕೃಷ್ಣ ಮಠದ ಸಾಧುಗಳು ಬಡಬಗ್ಗರಿಗಾಗಿ ಅನ್ನಛತ್ರ ಗಳನ್ನು ಆರಂಭಿಸಿದರು. ಜನರ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಲು ತಮ್ಮಿಂದಾದಷ್ಟು ನೆರವು ನೀಡಿದರು.

ಸಾರ್ವಜನಿಕರೊಂದಿಗೆ ಸರಕಾರವೂ ಹೊಯ್ ಕೈಯ್ಯಾಗಿ, ಕ್ಷಾಮನಿವಾರ ಣೆಗಾಗಿ ದುಡಿದಿದ್ದರೆ, ಬರಗಾಲದ ಬೇಗೆಯಿಂದ ಜನರಿಗೆ ಬೇಗ ಮುಕ್ತಿ ದೊರೆಯು ತ್ತಿತ್ತೋ ಏನೋ. ಆದರೆ ಆಳರಸರಿಗೆ ನಮ್ಮ ದೇಶದ ಜನ ಇದ್ದರೆಷ್ಟು? ಸತ್ತರೆಷ್ಟು? ಅದೂ ಶತ್ರುಗಳು ಬ್ರಹ್ಮದೇಶವನ್ನು ಆಕ್ರಮಿಸಿಕೊಂಡು ಇಂಡಿಯಾ ದೇಶದ ಮೇಲೆ ಇನ್ನೇನು ಬೀಳಬೇಕೆಂದು ಇರುವಾಗ, ಅವರು ತಮ್ಮ ಅಸ್ತಿತ್ವ ವನ್ನು ಉಳಿಸಿಕೊಳ್ಳುವುದು ಹೇಗೆಂಬುದರಲ್ಲಿ ನಿರತರಾಗಿದ್ದರೆ ಹೊರತು ಬಂಗಾ ಳದ ಕೂಗಿಗೆ ಕಿವಿಗೊಡಲಿಲ್ಲ.

ಶಾರದೆ ಒಂದು ದಿನ ಊರಿನ ರೈತರ ಸಭೆ ಸೇರಿಸಿ, ಅವರಿಗೆ ಬಂಗಾಳದ ದುಃಸ್ಥಿತಿಯನ್ನು, ಕಲ್ಲೂ ಕಣ್ಣೀರಿಡುವ ರೀತಿಯಲ್ಲಿ ಬಣ್ಣಿಸಿದಳು. ಅನೇಕರು ತಮ್ಮಿಂದಾದಷ್ಟು ಸಹಾಯ ಮಾಡಲು ಮುಂದೆ ಬಂದರು. ಚಂದಾಪಟ್ಟಿ ಯನ್ನು ಪಟೇಲನ ಮುಂದಿಟ್ಟಾಗ, "ಇಲ್ಲಿರೋರೇ ಹೊಟ್ಟೆಗಿಲ್ಲದೆ ಸಾಯ್ತಿ ರೋವಾಗ ಬಂಗಾಳಕ್ಕೆ ಸಹಾಯ ಮಾಡಬೇಕಂತೆ—ಸಹಾಯ!" ಎಂದು

ಹೀಯಾಳಿಸಿ, ಹಿಂದಕ್ಕೆ ಕಳುಹಿಸಿದನೇ ಹೊರತು, ಅವನು ಚಿಕ್ಕಾಸು ಸಹಾಯ ಮಾಡಲಿಲ್ಲ. ಶಾರದೆ ಪಟೇಲನ ನಡುವಳಿಕೆಯಿಂದ ತುಂಬಾ ನೊಂದುಕೊಂಡಳು. ಇಂತಹ ಸಣ್ಣ ಮನಸ್ಸಿನ ಜನ ನಮ್ಮ ದೇಶದಲ್ಲಿ ಇರುವುದರಿಂದಲೇ ನಮ್ಮ ದೇಶದ ಹಣೆಯ ಬರಹ ಹೀಗಾದುದು ಎಂದುಕೊಂಡು ಸಮಾಧಾನ ತಂದುಕೊಂಡಳು.

ಕೇತನಹಳ್ಳಿಯಲ್ಲಿ ಶಾರದೆ ಬಯಸಿದಷ್ಟು ನಿಧಿ ಸಂಗ್ರಹವಾಗಲಿಲ್ಲ. ಕಡೆಗೆ ಅವಳಿಗೊಂದು ಆಲೋಚನೆ ಹೊಳೆಯಿತು. ಅವಳು ಕೇತನಹಳ್ಳಿಯ ಶ್ಯಾನು ಭೋಗರ ಸಹಾಯದಿಂದ ಫ್ರೆಂಚ್‌ರಾಕ್ಸ್ ತಾಲ್ಲೂಕಿನ ಅಮಲ್ದಾರರನ್ನು ಭೇಟಿ ಮಾಡಿ, ನಿಧಿಸಂಗ್ರಹದಲ್ಲಿ ಅವರೂ ನೆರವಾಗಬೇಕೆಂದು ಬೇಡಿಕೊಂಡಳು. ಅಮಲ್ದಾರರು ಇನ್ನೂ ತರುಣರು. ಅವರು ಶಾರದೆಯ ಕೆಲಸವನ್ನು ಕೊಂಡಾಡಿ ತಮ್ಮ ತಾಲ್ಲೂಕಿಗೆ ಸೇರಿದ ಪ್ರತಿಯೊಂದು ಹಳ್ಳಿಯಿಂದ ಇಷ್ಟಿಷ್ಟು ನಿಧಿ ಸಂಗ್ರಹಿಸಿ ಕಳುಹಿಸಬೇಕೆಂದು ಅಪ್ಪಣೆ ಮಾಡಿ, ಶಾರದೆಯೊಡನೆ ತಾವೇ ಒಂದೆರಡು ಹಳ್ಳಿಗಳಿಗೆ ಬಂದು ವಸೂಲಿಗೆ ನೆರವಾದರು. ತಾಲ್ಲೂಕು ದಣಿಯಾದ ಅಮಲ್ದಾರರೇ ಇಷ್ಟು ಆಸಕ್ತಿ ತೆಗೆದುಕೊಂಡಿರುವಾಗ, ಫ್ರೆಂಚ್‌ರಾಕ್ಸಿನ ಗಣ್ಯ ವರ್ತಕರೂ, ಇತರ ಮುಂದಾಳುಗಳೂ, ಈ ಕೈಂಕರ್ಯದಲ್ಲಿ ಸೇರಿ, ಶಾರದೆ ಊಹಿಸಿದ್ದ ನಿಧಿಯ ಹತ್ತರಷ್ಟು ಮೊಬಲಗನ್ನು ಶೇಖರಿಸಿ ಕೊಟ್ಟರು.

ಇದೇ ವೇಳೆಗೆ ಹಳೆಯ ವೈಸರಾಯರು ನಿವೃತ್ತರಾಗಿ, ಲಾರ್ಡ್ ವೇವೆಲ್ ವೈಸ್‌ರಾಯಿಯಾಗಿ ಬಂದಿದ್ದರು. ಅವರು ಮಿಲಿಟರಿ ಕಾರ್ಯಾಚರಣೆಯನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ದೇಶದ ಸುಭದ್ರತೆಗೋಸ್ಕರವಾದರೂ, ಬಂಗಾಳದ ಕ್ಷಾಮವನ್ನು ಅಡಗಿಸುವುದು ಅವಶ್ಯಕವೆಂದು ಬಗೆದು, ಕ್ಷಾಮ ನಿವಾರಣಾ ಕೆಲಸಗಳಲ್ಲಿ ಕೈಹಾಕಿದರು. ಕೆನಡ, ಆಸ್ಟ್ರೇಲಿಯಾ, ಸಂಯುಕ್ತ ಸಂಸ್ಥಾನಗಳಿಂದ ಆಹಾರ ಧಾನ್ಯಗಳು ಬಂದವು. ಅವುಗಳನ್ನು ಮಿಲಿಟರಿ ವಾಹನಗಳಲ್ಲಿ ತೆಗೆದುಕೊಂಡು ಹೋಗಿ ಹಸಿದವರಿಗೆ ಹಂಚಿದರು. ಮಿಲಿಟರಿ ವೈದ್ಯಕೀಯ ಪಡೆ, ರೋಗಪೀಡಿತರಿಗೆ ಸಹಾಯ ಮಾಡಿದವು. ಕಾಲಕ್ರಮೇಣ ಮಳೆಯಾಗಿ ಬೆಳೆ ಕೈಗೆ ಹತ್ತುವ ಸೂಚನೆ ಕಾಣತೊಡಗಿತು. ಆದರೆ ಇದೇ ವೇಳೆಯಲ್ಲಿ ದೇಶದ ಇತರ ಭಾಗಗಳಲ್ಲಿ ಭಯಂಕರ ಕ್ಷಾಮ ತಲೆದೋರಿತ್ತು.

ಉತ್ತರ ಕನ್ನಡ ಜಿಲ್ಲೆ, ಮೈಸೂರಿನ ಕೆಲವು ಜಿಲ್ಲೆಗಳು, ಕೇರಳ ಪ್ರಾಂತ

ಗಳಲ್ಲಿ ಮಳೆ ಸಕಾಲಕ್ಕೆ ಬರದೆ ಕ್ಷಾಮದ ಬೇಗೆಯಿಂದ ಧಗಧಗನೆ ಉರಿಯು ತ್ತಿತ್ತು. ಕೇತನಹಳ್ಳಿಯ ಸುತ್ತಮುತ್ತ ಮಾಮೂಲಿನಂತೆ ಮಳೆಯಾಗಿದ್ದರೂ ಸರಕಾರ ಚಿತ್ರದುರ್ಗ ಕೋಲಾರ ಜಿಲ್ಲೆಗಳನ್ನು ಕ್ಷಾಮದ ಜಿಲ್ಲೆಗಳೆಂದು ಸಾರಿ ಬಿಟ್ಟುದರಿಂದ ಧಾನ್ಯಗಳನ್ನು ಬೆಳೆದವರು ದಾಸ್ತಾನು ಮಾಡಿ, ಕಳ್ಳ ಸಂತೆಯಲ್ಲಿ ಮಾರಲು ತೊಡಗಿದರು. ಇದುವರೆಗೆ ಆ ಕಡೆಗೆ ಹಣಕ್ಕೆ ಬದಲು ಧಾನ್ಯವನ್ನು ಕೂಲಿ ಕೊಡುತ್ತಿದ್ದರು. ಈಗ ಧಾನ್ಯದ ಬದಲು ಹಣ ಕೊಡಲಾರಂಭಿಸಿದರು. ಹಣವನ್ನು ತೆಗೆದುಕೊಂಡು ಏನು ಮಾಡಬೇಕು ?

ದೇಶದ ಇತರ ಭಾಗಗಳಲ್ಲಿ ಏರ್ಪಟ್ಟಂತೆ ಕೇತನಹಳ್ಳಿಯಲ್ಲಿಯೂ, ಬಡ ಬಗ್ಗರಿಗೆ ಪಡಿತರ ಹಂಚಲು ಒಂದು 'ರೇಷನ್ ಡಿಪೋ' ಆರಂಭವಾಯಿತು. ಅದಕ್ಕೆ ಪಟೇಲ್ ಗೋವಿಂದಪ್ಪನೇ ಮೇಲ್ವಿಚಾರಕ. ಅವನು ಮೇಲ್ವಿಚಾರಕ ನಾದುದು ಉಗ್ರಾಣಕ್ಕೆ ಹೆಗ್ಗಣವನ್ನು ಬಿಟ್ಟಂತಾಯಿತು. ಅವನು ಬಡವರ ಹೊಟ್ಟೆಯ ಮೇಲೆ ಹೊಡೆದು ತನ್ನ ಹೊಟ್ಟೆಯನ್ನು ದೊಡ್ಡದು ಮಾಡಿಕೊಂಡ. ಸರ್ಕಾರದವರು ಕೊಡುತ್ತಿದ್ದ ಅಕ್ಕಿ, ರಾಗಿ, ಗೋಧಿ, ಸಕ್ಕರೆಗಳು ಕಳ್ಳಸಂತೆ ಯಲ್ಲಿ ಮಾರಾಟವಾಗಿ ಬಡಬಗ್ಗರಿಗೆ ಜೋಳ, ನವಣೆ, ಸಾಮೆಗಳು ಸಿಕ್ಕುತ್ತಿತ್ತು. ಶಾರದೆ ಈ ಅನ್ಯಾಯವನ್ನು ನೋಡುವಷ್ಟು ದಿನ ನೋಡಿ, ಕಡೆಗೆ ಅಮಲ್ದಾರ ರಲ್ಲಿ ದೂರು ಹೊತ್ತು ಪಟೇಲ ಗೋವಿಂದಪ್ಪನ ಕೈಯಿಂದ 'ಡಿಪೋ' ತಪ್ಪಿಸಿ ದಳು. ಇದರಿಂದ ಗೋವಿಂದಪ್ಪನಿಗೆ ಶಾರದೆಯ ಮೇಲೆ ಬೆಟ್ಟದಷ್ಟು ಅಸಮಾ ಧಾನ ಉಂಟಾಯಿತು.

ಇದೇ ವೇಳೆಗೆ ಕೇತನಹಳ್ಳಿಯಲ್ಲಿ ಕಾಲರಾ ವ್ಯಾಧಿ ಕಾಣಿಸಿಕೊಂಡಿತ್ತು. ಯಾರೋ ಮಾದೇಶ್ವರನ ಜಾತ್ರೆಗೆ ಹೋಗಿದ್ದವರು ಆ ವ್ಯಾಧಿಯನ್ನು ಊರಿಗೆ ಕರೆ ತಂದಿದ್ದರು. ಅದಕ್ಕೆ ಮೊದಲು ಬಲಿಯಾದವರು ಕೇತನಹಳ್ಳಿಯ ಆದಿ ಕರ್ಣಾಟಕರು.

ಕೇತನಹಳ್ಳಿಯಲ್ಲಿ ಒಕ್ಕಲಿಗರೇ ಹೆಚ್ಚಾಗಿದ್ದರೂ, ಊರಿನ ಹರಿಜನಕೇರಿ ಯಲ್ಲಿ ಇಪ್ಪತ್ತು ಆದಿ ಕರ್ಣಾಟಕ ಸಂಸಾರಗಳು ಕೂಲಿನಾಲಿ ಮಾಡಿಕೊಂಡು ಹೊಟ್ಟೆ ಹೊರೆಯುತ್ತಾ ಜೀವಿಸುತ್ತಿದ್ದರು. ಅವರಿಗೆ ಧಾನ್ಯದ ಕೂಲಿ ಸಿಕ್ಕುತ್ತಿ ದ್ದಾಗ ಅವರು ಆರೋಗ್ಯವಾಗಿಯೇ ಇದ್ದರು. ಆದರೆ ಹಣ ಕೂಲಿ ಸಿಕ್ಕಿದಾಗ ಡಿಪೋವಲ್ಲಿ ಸಿಕ್ಕುತ್ತಿದ್ದ ಗೋಧಿ ಹಿಟ್ಟು ಮುಸುಕಿನ ಜೋಳಗಳನ್ನು ಹಸಿ ಬಿಸಿ

ಯಾಗಿ ತಿಂದು ಅನೇಕ ಚರ್ಮವ್ಯಾಧಿಗಳನ್ನು ತಂದುಕೊಂಡಿದ್ದರು.

ಮೊದಲೇ ಹಳ್ಳಿಯ ಜನ ಸ್ನಾನ ಮಾಡುವುದು ಹಬ್ಬ ಹುಣ್ಣಿಮೆ ಗಳಲ್ಲಿ. ತಿಂಗಳಾದರೂ ಹಾಕಿದ ಬಟ್ಟೆ ಬದಲಿಸರು. ಇಂತಹ ಸ್ಥಿತಿಯಲ್ಲಿ, ಕಜ್ಜಿ, ತುರಿ, ಆಮಶಂಕೆಗಳು ಕಾಣಿಸಿಕೊಂಡುದರಲ್ಲಿ ಅಚ್ಚರಿಯಿಲ್ಲ.

ಊರಿನಲ್ಲಿ ಆಸ್ಪತ್ರೆಯಿದ್ದರೂ ಹಳ್ಳಿಯವರು ಅದರ ಉಪಯೋಗ ಪಡೆ ಯುತ್ತಿರಲಿಲ್ಲ. ಯಾಕೆಂದರೆ ಹಳ್ಳಿಯವರ ಅಭಿಪ್ರಾಯದಲ್ಲಿ ಆಸ್ಪತ್ರೆಯಿರು ವುದು ದುಡ್ಡಿದ್ದವರಿಗೆ. ಅಲ್ಲದೆ ಆಸ್ಪತ್ರೆಗೆ ಹೋದರೆ ಕಾಹಿಲೆಯನ್ನು ಗುಣ ಪಡಿಸುವುದರ ಬದಲು ರೋಗಿಯನ್ನು ಸಾಯಿಸಿ ಬಿಡುತ್ತಾರೆ ಎನ್ನುವ ಭೀತಿ ಬೇರೆ ಅವರಲ್ಲಿ ಮನೆಮಾಡಿಕೊಂಡಿತ್ತು. ಹಿಂದೆ ಎಂದೋ ಇದ್ದ ಡಾಕ್ಟರನ ಕಾಲದಲ್ಲಿ ಹಾಗೆಯೇ ಆಗಿತ್ತು. ಕಣ್ಣು ನೋವಿಗೆ ಔಷಧಿ ಹಾಕಿಸಿಕೊಳ್ಳಲು ಬಂದ ಒಬ್ಬಾತ ಡಾಕ್ಟರನ ಅಚಾತುರ್ಯದಿಂದ ಕಣ್ಣು ಕಳೆದುಕೊಂಡು ಆಜೀವ ಪರ್ಯಂತ ಕುರುಡನಾಗಬೇಕಾಯಿತು. ಇನ್ನೊಬ್ಬಾತ ಹೊಟ್ಟೆ ನೋವಿಗೆ ಆಪರೇಷನ್ ಮಾಡಿಸಿಕೊಂಡು, ಪ್ರಾಣವನ್ನೇ ಬಿಟ್ಟಿದ್ದ. ಹಳ್ಳಿಗರನ್ನು ಗಾಬರಿ ಗೊಳಿಸಲು ಇದೇ ಸಾಕಾಯಿತು. ಹಳ್ಳಿಯ ಜನ ಆಸ್ಪತ್ರೆಯ ಕಡೆ ತಲೆಯಿಡು ತ್ತಿರಲಿಲ್ಲ. ಆದರೆ ಈಚೆಗೆ ಬಂದಿದ್ದ ಡಾಕ್ಟರು, ಹಳ್ಳಿಯವರನ್ನು ಪ್ರೀತಿಯಿಂದ ಮಾತನಾಡಿಸಿ, ಅವರ ಕಷ್ಟ ಸುಖಗಳನ್ನು ವಿಚಾರಿಸುತ್ತಿದ್ದುದರಿಂದ ಆಸ್ಪತ್ರೆಯ ಕಡೆ ಒಬ್ಬಿಬ್ಬರು ಸುಳಿಯುತ್ತಿದ್ದರು. ಊರಿನಲ್ಲಿ ಸಾರ್ವತ್ರಿಕವಾಗಿ ಹರಡುತ್ತಿದ್ದ ತುರಿ ಕಜ್ಜಿಗಳಿಂದಾಗಿ, ಎಂದೂ ಆಸ್ಪತ್ರೆಯ ಮುಖ ಕಾಣದಿದ್ದವರೂ, ಆಸ್ಪತ್ರೆಗೆ ಬರುವಂತಾಗಿತ್ತು.

ಆದಿಕರ್ಣಾಟಕರ ಕೇರಿಯಲ್ಲಿ ಕಾಲರಾ ಆರಂಭವಾಗಿರುವ ಸುದ್ದಿಯನ್ನು ಕೇಳಿಯೂ ಊರಿನವರು ಏನೂ ಮಾಡದೆ ತಟಸ್ಥರಾಗಿ ಸುಮ್ಮನಿದ್ದರು. ಅವರ ದೃಷ್ಟಿಯಲ್ಲಿ ಹರಿಜನರು ಮನುಷ್ಯರೇ ಅಲ್ಲ. ಇಂದು ಹರಿಜನರಿಗೆ ಬಂದ ರೋಗ ನಾಳೆ ತಮಗೂ ಅಂಟಬಹುದೆಂದು ಅವರ ಮಂದ ಬುದ್ಧಿಗೆ ಹೊಳೆ ದರೆ ತಾನೇ?

ಹರಿಜನರ ಕೇರಿಯಲ್ಲಿ ಒಂದೆರಡು ಸಾವಾದರೂ ಜನ ನಿಶ್ಚಿಂತೆಯಿಂದ ಇರುವುದನ್ನು ಕಂಡು, ಶಾರದೆ ಕನಲಿ, ಹರಿಜನರ ಸೇವೆಗೆ ಕಂಕಣತೊಟ್ಟಳು. ಅವಳು ಪ್ರತಿಯೊಬ್ಬ ಹರಿಜನನ ಮನೆಗೆ ಹೋಗಿ, ಫ್ರೆಂಚ್ ರಾಕ್ಸ್‌ನಿಂದ

ತಾನು ಕೊಂಡು ತಂದಿದ್ದ ಪ್ರೊಟಾಸಿಯಂ ಪರಮಾಂಗನೇಟ್ ಕೊಟ್ಟು, ಬಿಸಿ ನೀರಿನೊಂದಿಗೆ ಉಪಯೋಗಿಸಲು ಹೇಳಿದಳು. ಅಲ್ಲದೆ ಅವರ ಮನೆಗಳ ಸಮೀಪದಲ್ಲಿದ್ದ ಗೊಬ್ಬರದ ಗುಂಡಿಗಳನ್ನೂ, ಅವರು ಉಪಯೋಗಿಸುತ್ತಿದ್ದ ಭಾವಿಯಲ್ಲಿದ್ದ ಕಸ ಕಡ್ಡಿಗಳನ್ನೂ ತೆಗೆಸಿ ಹಾಕಿಸಿ, ಎಲ್ಲರಿಗೂ ಇನಾಕ್ಯುಲೇಟ್ ಮಾಡಿಸಿ, ಕಾಲರಾ ವ್ಯಾಧಿ ಇತರ ಕಡೆ ಹರಡುವುದನ್ನು ತಪ್ಪಿಸಿದಳು. ಇಂತು ಶಾರದೆ ಊರಿನ ಜನಕ್ಕೆ ಭಾಗ್ಯದೇವತೆಯಾದಳು.

## ೧೧

ಕಿಟ್ಟಣ್ಣನ ಸ್ಥಿತಿ ಕಡೆಗೂ ಕಾಲ್ಚೆಂಡಿನ ಗತಿಯೇ ಆಯಿತು. ಅವನ ಜೀವನದಲ್ಲಿ ಸ್ಥಿರತೆಗೆ ಅವಕಾಶವೇ ಇಲ್ಲವೇನೋ ! ಅದೇನು ಅವನ ದೌರ್ಭಾಗ್ಯವೋ ಅವನಿಗೆ ಸಿಗುತ್ತಿದ್ದ ಚಾಕರಿಗಳೆಲ್ಲವೂ ತಾತ್ಕಾಲಿಕವಾದ್ವೇ. ಇನ್ನೇನು ಭಯವಿಲ್ಲ. ನೆಲ ಭದ್ರವಾಗಿದೆ. ಕಾಲೂರಿ ನಿಲ್ಲಬಹುದು ಎಂದು ಕಾಲಿಟ್ಟೊಡನೆಯೇ, ನೆಲ ಕುಸಿದು ದೇಹ ಮುಗ್ಗರಿಸಿ ಬೀಳುವುದು. ಆಗ ಮತ್ತೆ ಮೊದಲಿನಿಂದ ನಡಿಗೆ ಆರಂಭಿಸಬೇಕು. ಕಿಟ್ಟಣ್ಣನ ಬದುಕೂ ಹೀಗೆಯೇ ಆಯಿತು. ಅವನು ಕೆಲಸ ಮಾಡುತ್ತಿದ್ದುದು ಹಂಗಾಮಿಯಾಗಿ, ಅವನ ಜಾಗಕ್ಕೆ ಖಾಯಂ ಆಗಿ ಮಾಸ್ತರು ಬಂದೊಡನೆಯೇ ಕಿಟ್ಟಣ್ಣ ಮನೆಗೆ ಕಳುಹಿಸಲ್ಪಟ್ಟ. ರಿಲೀವರ್ ಬಂದ ದಿನ ಕಿಟ್ಟಣ್ಣ ಶಾಲೆಯಿಂದ ಮನೆಗೆ ಬಂದು, ತಲೆಯ ಮೇಲೆ ಕೈಹೊತ್ತು ಕುಳಿತುಕೊಂಡಾಗ, ಶಾರದೆ ಏನಾಯಿತೆಂದು ಪ್ರಶ್ನಿಸಿದಳು. ಕಿಟ್ಟಣ್ಣ 'ರಿಲೀವ್' ಆರ್ಡರು ಕೈಗಿತ್ತ. ಅದನ್ನು ಓದಿಕೊಂಡು ಶಾರದೆ ನಿಟ್ಟುಸಿರು ಬಿಟ್ಟಳು. ಮುಂದೇನು ? ಎನ್ನುವ ಪ್ರಶ್ನೆ ಅವಳ ಮುಂದೆ ಸುಳಿಯಿತು. 'ದೇವರಿದ್ದಾನೆ' ಎಂದು ಹೇಳಿದ ಕಿಟ್ಟಣ್ಣ.

ಆ ಸಂಜೆ ಮನೆಯಲ್ಲಿ ತುಂಬಾ ಬೇಸರವಾದುದರಿಂದ, ದಂಪತಿಗಳಿಬ್ಬರೂ ಸ್ಟೇಷನ್ ಮಾಸ್ತರ ಮನೆಗೆ ಬಂದರು. ದಂಪತಿಗಳ ಬಾಡಿದ ಮುಖವನ್ನು ಕಂಡೇ ಸ್ಟೇಷನ್ ಮಾಸ್ತರ ಮನೆಯವರು, ಏನೋ ನಡೆದಿದೆಯೆಂದು ಊಹಿಸಿ,

ಆ ಬಗ್ಗೆ ಪ್ರಶ್ನಿಸಿದರು. ಶಾರದೆ ನಡೆದ ಕಥೆಯನ್ನು ನಾಲ್ಕು ಮಾತಿನಲ್ಲಿ ಹೇಳಿ, 'ನಮಗಿನ್ನೂ ಗ್ರಹಚಾರ ಕಾಲ ಕಳೆದಿಲ್ಲಮ್ಮಾ' ಎಂದು ನಿಟ್ಟುಸಿರು ಬಿಟ್ಟಳು. ಅದೇ ವೇಳೆಗೆ ಅಲ್ಲಿಗೆ ಫಲಾಹಾರಕ್ಕೆಂದು ಬಂದ ಸ್ಟೇಷನ್ ಮಾಸ್ತರು ಅವರ ಮಾತಿನಲ್ಲಿ ಸೇರಿದರು. ಅವರಿಗೆ ಕಿಟ್ಟಣ್ಣನು ರಿಲೀವ್ ಆದ ವಿಷಯ ಕೇಳಿ ಮನ ನೊಂದಿತು.

"ಮುಂದೇನು ಮಾಡಬೇಕೆಂದಿದ್ದೀರಿ?" ಎಂದು ಪ್ರಶ್ನಿಸಿದರು.

"ಏನು ಮಾಡಬೇಕೆಂದು ತೋಚುವುದೇ ಇಲ್ಲ" ಎಂದ ಕಿಟ್ಟಣ್ಣ.

"ನಿಮಗೆ ದೂರ ಹೋಗಲು ಇಷ್ಟವಿದೆಯೆ?"

"ಅಂದರೆ?"

"ಬೊಂಬಾಯಿಯ ತನಕ...."

"ಕೆಲಸ ಸಿಗುವುದೊಂದು ಖಾತರಿಯಾದರೆ ಸಹರಾ ಅರಣ್ಯಕ್ಕೆ ಹೋಗಲೂ ಸಿದ್ಧ" ಎಂದ ಕಿಟ್ಟಣ್ಣ ವಿಷಾದವಾಗಿ ನಗುತ್ತ.

"ಆಗಲಿ.ನಮ್ಮ ಹುಡುಗನ ಜೊತೆಯಲ್ಲಿ ಮಾತನಾಡಿ, ನಿಮಗೆ ತಿಳಿಸುತ್ತೇನೆ" ಎಂದು ಹೇಳಿ ಮಾತು ಮುಗಿಸಿದರು.

ಅವರು ಆದಿನ ಬೊಂಬಾಯಿಯಿಂದ ಬಂದಿದ್ದ ತಮ್ಮ ಅಳಿಯನೊಡನೆ, ಕಿಟ್ಟಣ್ಣನ ವಿಷಯವನ್ನು ಪ್ರಸ್ತಾಪಿಸಿದರು. ಸ್ಟೇಷನ್ ಮಾಸ್ತರರ ಅಳಿಯ ಮೋಹನರಾಯರು ಬೊಂಬಾಯಿಯಲ್ಲಿ "ಸಿಂಸನ್ ಕಾರು" ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದರು. ಅವರ ಕಂಪನಿಯಲ್ಲಿ ಮೋಹನರಾಯರ ಮಾತಿಗೆ ಬಹಳ ಬೆಲೆಯಿತ್ತು. ಅವರ ಆಫೀಸಿಗೆ ಹೊಸದಾಗಿ ಕೆಲವು ನೌಕರರನ್ನು ತೆಗೆದುಕೊಳ್ಳಬೇಕೆಂದಿದ್ದರು. ಅದನ್ನು ತಿಳಿದಿದ್ದ ಮೋಹನರಾಯರು, ಕಿಟ್ಟಣ್ಣ ತನ್ನೊಂದಿಗೆ ಬರುವುದಾದರೆ ತನ್ನ ಕಂಪನಿಯಲ್ಲೇ ಕೆಲಸ ಕೊಡಿಸಲು ಪ್ರಯತ್ನಿಸುವುದಾಗಿ ಆಶ್ವಾಸನವಿತ್ತರು. ಅವರ ಮಾತಿನಂತೆ ಕಿಟ್ಟಣ್ಣನೂ, ಮೋಹನರಾಯರ ಜೊತೆಯಲ್ಲಿ ಬೊಂಬಾಯಿಗೆ ಹೋಗುವುದು ನಿಶ್ಚಯವಾಯಿತು.

ಕಿಟ್ಟಣ್ಣ ಬೊಂಬಾಯಿಗೆ ಹೋದ ನಾಲ್ಕೇ ದಿನಕ್ಕೆ ಮೋಹನರಾಯರ ಪ್ರಯತ್ನದಿಂದ ತನಗೆ ಕೆಲಸ ಸಿಕ್ಕಿರುವುದಾಗಿ ಶಾರದೆಗೆ ಕಾಗದ ಬರೆದ. ಸ್ಟೇಷನ್ ಮಾಸ್ತರ ಮನೆಯವರು, ಶಾರದೆಯನ್ನು ಕಿಟ್ಟಣ್ಣ ಬೊಂಬಾಯಿಗೆ

ಕರೆದುಕೊಂಡು ಹೋಗುವ ತನಕ ತಮ್ಮ ಮನೆಯಲ್ಲಿಯೇ ಇರಬೇಕೆಂದು ಆಗ್ರಹ ಪಡಿಸಿ, ತಮ್ಮಲ್ಲಿಯೇ ಇರಿಸಿಕೊಂಡಿದ್ದರು.

ಕಿಟ್ಟಣ್ಣನಿಗೆ ಕೆಲಸವೇನೋ ತೊಂದರೆಯಿಲ್ಲದೆ ಸಿಕ್ಕಿತು. ಆದರೆ ವಾಸಕ್ಕೆ ಮನೆ ಸಿಕ್ಕುವುದು ಪ್ರಯಾಸಕ್ಕೆ ಇಟ್ಟುಕೊಂಡಿತು. ಮೋಹನರಾಯರೂ ಕಿಟ್ಟಣ್ಣನೂ ಸಂತತವಾಗಿ, ಎಂಟು ದಿನ ಅಲೆದ ಮೇಲೆ ಗಿರಿವಾಂಪ್‌ನಲ್ಲಿ, ಮೂವತ್ತು ರೂಪಾಯಿ ಬಾಡಿಗೆಗೆ ಎರಡು ಕೊಠಡಿಯಿರುವ ಸಣ್ಣ ಮನೆಯೊಂದು ಸಿಕ್ಕಿತು. ಮನೆ ಸಿಕ್ಕಿದ ಸುದ್ದಿಯನ್ನು ಶಾರದೆಗೆ ಕಿಟ್ಟಣ್ಣ ತಂತಿಯ ಮೂಲಕ ತಿಳಿಸಿದ. ಅವನಿಗೆ ಅಷ್ಟು ಹಿಗ್ಗಾಗಿತ್ತು.

ಕಿಟ್ಟಣ್ಣ ಮನೆ ಸಿಕ್ಕಿದ ಮಾರನೆಯ ದಿನವೇ ಸಂಸಾರವನ್ನು ಕರೆತರಲು ಫ್ರೆಂಚ್ ರಾಕ್ಸ್‌ಗೆ ಬಂದ. ಕಿಟ್ಟಣ್ಣ ಶಾರದೆಯರನ್ನು ಬೊಂಬಾಯಿಗೆ ಕಳುಹಿಸಿ ಕೊಡುವಾಗ ಸ್ಟೇಷನ್ ಮಾಸ್ತರ ಮನೆಯಲ್ಲಿ, ಮತ್ತೊಮ್ಮೆ ಅಳಿಯ ಮಗಳನ್ನು ಬೊಂಬಾಯಿಗೆ ಕಳುಹಿಸಿ ಕೊಡುವ ಸಂಭ್ರಮವೇ ಆಯಿತು. ಅವರು ಶಾರದೆಗೆ ಎರೆದು, ಔತನ ಮಾಡಿ, ಬಾಗಿನ ಕೊಟ್ಟು, ಬೊಂಬಾಯಿಗೆ ಕಳುಹಿಸಿ ಕೊಟ್ಟರು. ಆ ಜನರ ಸೌಜನ್ಯ, ಪ್ರೀತಿ, ವಿಶ್ವಾಸಗಳನ್ನು ಕಂಡು, ಕಿಟ್ಟಣ್ಣ ಶಾರದೆಯರು ಮೂಕರೇ ಆದರು. ಶಾರದೆಗಂತೂ ಇದೆಲ್ಲವೂ ಒಂದು ಸೋಜಿಗವೇ ಆಯಿತು. ತಾವು ಹೋದೆಡೆಯಲ್ಲೆಲ್ಲಾ ಚಿನ್ನದಂತಹ ಜನರೇ ತಮಗೆ ಸಿಕ್ಕುತ್ತಾರಲ್ಲ, ಇದು ತಮ್ಮ ಪುಣ್ಯ ವಿಶೇಷವೇನೋ ಎಂದು ಕೊಂಡಳು. ಹಾಲು ಹಾಲಿನೊಂದಿಗೆ ಬೆರೆಯುವುದೇ ಹೊರತು, ಎಣ್ಣೆಯೊಂದಿಗೆ ಬೆರೆಯುವುದಿಲ್ಲವೆಂಬುದು ಶಾರದೆಗೆ ತಿಳಿಯಲಿಲ್ಲ. ಕೊಂಕು ಕಾಣದ ಅವರ ನಡೆನುಡಿಗಳು ಅವರ ಸಂಪರ್ಕ ಹೊಂದಿದ ಎಲ್ಲರನ್ನೂ ಸೂಜಿಗಲ್ಲಿನಂತೆ ಆಕರ್ಷಿಸುತ್ತಿದ್ದುದರಲ್ಲಿ ಅಚ್ಚರಿ ಏನು ?

ಸ್ಟೇಷನ್‌ಗೆ ಮೋಹನರಾಯರು ಕಾರು ತೆಗೆದುಕೊಂಡು ಬಂದಿದ್ದರು. ಅವರ ಕಾರಿನಲ್ಲಿ ಅವರ ಮನೆಗೆ ಹೋದರು. ಮೋಹನರಾಯರ ಪತ್ನಿ ಸುನಂದೆ ಶಾರದೆಯನ್ನು ಅಕ್ಕನಂತೆ ಭಾವಿಸಿ, ಬೊಂಬಾಯಿಯ ಸಂಸಾರ ಕುದುರಿಸಿಕೊಳ್ಳುವ ತನಕ, ತಮ್ಮ ಮನೆಯಲ್ಲಿಯೇ ಇರಲು ಎಷ್ಟೋ ಒತ್ತಾಯ ಮಾಡಿದಳು. ಆದರೆ ಈ ರೇಷನ್ ದುರ್ದಿನಗಳಲ್ಲಿ ಅವರಿಗೆ ತೊಂದರೆ

ಕೊಡಲು, ಶಾರದೆ ಇಷ್ಟ ಪಡದೆ, ಬೊಂಬಾಯಿಗೆ ಬಂದ ಒಂದೆರಡು ದಿನಕ್ಕೆ ಹೊಸ ಮನೆಯ ಗೃಹಪ್ರವೇಶ ಮಾಡಿಬಿಟ್ಟಳು.

ಈಗ ಕಿಟ್ಟಣ್ಣ ದಂಪತಿಗಳಿಗೆ ಉಸಿರಾಡಲು ಅವಕಾಶ ಸಿಕ್ಕಿತ್ತು. ಜೀವನ ಒಂದು ಕುದುರು ಪಾಟಿಗೆ ಬಂದಿತ್ತು. ಸತ್ಪುರುಷರು ಯಾವಾಗಲೂ ತಮ್ಮ ಸುಖದಲ್ಲಿ ಇತರರನ್ನು ನೆನೆಯುತ್ತಾರಂತೆ. ಕಿಟ್ಟಣ್ಣ ಶಾರದೆಯರಿಗೆ ತಮ್ಮ ಸುಖದಲ್ಲಿ ಸುಮಿತ್ರೆಯ ನೆನಪಾಯಿತು. ಅವಳನ್ನು ಒಮ್ಮೆ ಬೊಂಬಾಯಿಗೆ ಕರೆಸಿಕೊಂಡು, ಉಪಚರಿಸಿ ಕಳಿಸುವ ಹಂಬಲವಾಯಿತು. ಆದಕ್ಕೆ ತಕ್ಕಂತೆ ದೇಶದ ಪರಿಸ್ಥಿತಿಯೂ ಜನರಲ್ಲಿ ಹೊಸ ಉತ್ಸಾಹವನ್ನು ತಂದಿತ್ತು.

ಬಹುಕಾಲದಿಂದಲೂ ಉರಿಯುತ್ತಿದ್ದ ಮಹಾ ಯುದ್ಧದ ಬೆಂಕಿ, ಒಂದೆರಡು ತಿಂಗಳ ಹಿಂದೆ, ಮಿತ್ರರಾಷ್ಟ್ರಗಳ ವಿಜಯದೊಂದಿಗೆ ಆರಿ ಯುದ್ಧದ ಕಾವು, ಬೇಗೆ ಇನ್ನೂ ನಂದಿಲ್ಲದಿದ್ದರೂ, ಜನ ಬರಲಿರುವ ಸುಖದ ದಿನಗಳನ್ನು ನೆನೆದು ತಾತ್ಕಾಲಿಕ ಪರಿಸ್ಥಿತಿಯನ್ನು ಮರೆಯಲೆತ್ನಿಸುತ್ತಿದ್ದರು. ಬರಲಿರುವ ಸುಖದ ದಿನಗಳು ಕೇವಲ ಸ್ವಪ್ನಪ್ರಾಯವೆನ್ನುವುದು ಅವರಿಗೆ ತಿಳಿಯದು. ಯುದ್ಧ ಕಾಲದಲ್ಲಿ ಪಟ್ಟ ಕಷ್ಟಪರಂಪರೆಗಳ ನೂರ್ಮಡಿಯಷ್ಟು ಕಷ್ಟ ಮುಂದೆ ತಮಗೆ ಕಾದಿದೆ ಎಂದು ಅವರಿಗೆ ತಿಳಿಯದು. ಬಲಪ್ರಯೋಗ ಮಾಡಿ, ಬಲಾತ್ಕಾರವಾಗಿ ಪಡೆದ ಜಯ, ಅಭಯದ ಸಂಕೇತವಾಗುವ ಬದಲು ಹೊಸ ಬಗೆಯ ಕಳವಳ ಶಂಕೆಗಳ ಮೂಲವಾಗುವುದೆನ್ನುವ ವಿಷಯ ಜನಸಾಮಾನ್ಯರಿಗೇನು ಗೊತ್ತು ?

ಶಾರದೆ ಬೊಂಬಾಯಿಗೆ ಹೋದಲಾಗಾಯಿತು ಸುಮಿತ್ರೆಗೆ ' ಬಾ, ಬಾ ' ಎಂದು ಬರೆಯುತ್ತಿದ್ದಳು. ಸುದರ್ಶನನಂತೂ ಒಂದೊಂದು ದಿನ ಅಕ್ಕನನ್ನು ನೆನೆಸಿಕೊಂಡು, " ಅಮ್ಮಾ........ ಅಕ್ಕ ಯಾವಾಗ ಬರ್‍ತಾಳಮ್ಮಾ? " ಎಂದು ಪ್ರಶ್ನಿಸುತ್ತಿದ್ದ.

ಒಂದು ದಿನ ಪಕ್ಕದ ಮನೆಗೆ ಯಾವಳೋ ಒಂದು ಹುಡುಗಿ ಬಂದಿದ್ದಳು. ಅವಳು ಕೊಂಚ ಸುಮಿತ್ರೆಯಂತೆಯೇ ಇದ್ದಳು. ಸುದರ್ಶನ ಅವಳನ್ನೇ ಅಕ್ಕನೆಂದು ತಿಳಿದು ಅವಳನ್ನು ಹಿಂಬಾಲಿಸಿ, ಮಹಡಿ ಇಳಿದು ರಸ್ತೆಗೂ ಬಂದುಬಿಟ್ಟಿದ್ದ. ಆಗ ಆ ಹುಡುಗಿ ಸುದರ್ಶನನ್ನು ಎತ್ತಿಕೊಂಡು ಕರೆತಂದು ಬಿಟ್ಟಿದ್ದಳು.

ಶಾರದೆ ಈ ವಿಷಯವನ್ನು ತಿಳಿಸಿ, ಸುಮಿತ್ರೆಗೆ ಬರೆದಾಗ, ಸುಮಿತ್ರೆಗೆ ಆ ದಿನವೆಲ್ಲಾ ಸುದರ್ಶನನ ಧ್ಯಾನವೇ ಆಯಿತು. ಸುಮಿತ್ರೆಯಂತೂ ರಜ ಎಂದು ಬಂದೀತು ಎಂದು ಒಂದು ಕಾಲಿನಲ್ಲಿ ನಿಂತಿದ್ದಳು. ಸರಿ, ಬೇಸಿಗೆಯ ರಜ ಬಂತು. ತಾನು ಬೊಂಬಾಯಿಗೆ ಹೋಗಲಿರುವ ಸುದ್ದಿಯನ್ನು ಸದಾಶಿವನಿಗೆ ತಿಳಿಸಿ, ಅವನ ಅನುಮತಿಯನ್ನು ತೆಗೆದುಕೊಂಡು ಬೊಂಬಾಯಿಯ ರೈಲು ಹತ್ತಿಯೇ ಬಿಟ್ಟಳು.

ಸ್ಟೇಷನ್‌ನಲ್ಲಿ ಸುದರ್ಶನ ಅಕ್ಕನನ್ನು ಕಂಡೊಡನೆಯೇ ಓಡಿ ಹೋಗಿ ಸುಮಿತ್ರೆಯನ್ನು ಅಪ್ಪಿ ಬಿಟ್ಟ. ಆ ನೋಟವನ್ನು ಕಂಡ ಶಾರದೆ, ಕಿಟ್ಟಣ್ಣ ಕ್ಷಣ ಕಾಲ ಗೊಂಬೆಯಂತೆ ನಿಂತುಬಿಟ್ಟಿದ್ದರು. ಸುಮಿತ್ರೆ ಬೆಂಗಳೂರಿನಿಂದ ತಮ್ಮನಿ ಗೆಂದು ತಂದಿದ್ದ ಆಟದ ಕೋವಿ, ಬೊಂಬೆ ಪುಸ್ತಕಗಳನ್ನು ಕೊಟ್ಟಳು. ಬುಟ್ಟಿ ಯನ್ನು ತೆಗೆದು ಬೆಂಗಳೂರು ಆನಂದ ಭವನದಲ್ಲಿ ಸದಾಶಿವ ಕೊಂಡುಕೊಟ್ಟಿದ್ದ ಹತ್ತೆಂಟು ಬಗೆಯ ಸಿಹಿ ತಿಂಡಿಗಳನ್ನು ಸುದರ್ಶನ ಸಾಕು ಎನ್ನುವತನಕ ತಿನ್ನಿಸಿ ದಳು. ಸ್ಟೇಷನ್‌ನಲ್ಲಿ ಇರುವ ಜನ ತಮ್ಮನನ್ನು ಮುದ್ದು ಮಾಡುವುದನ್ನು ಕಂಡು ಹಾಸ್ಯ ಮಾಡುತ್ತಾರೆ ಎಂದು ಸುಮಿತ್ರೆಯ ತಲೆಗೆ ಬರಲಿಲ್ಲ. ಅವಳ ಮನಸ್ಸು ಸ್ಟೇಷನ್‌ನಲ್ಲಿ ಇದ್ದರೆ ತಾನೆ ?

ಸುಮಿತ್ರೆಗೆ ಈ ಬಾರಿ ರಜವೆನ್ನುವುದು ಕ್ಷಣವಂತೆ ಕಳೆದು ಹೋಯಿತು. ತಮ್ಮನನ್ನು ಕಟ್ಟಿಕೊಂಡು ಬೊಂಬಾಯಿ ಸುತ್ತುವುದರಲ್ಲಿಯೇ ಅವಳ ಸಮಯ ವೆಲ್ಲ ಕಳೆದಿತ್ತು. ಶನಿವಾರ, ಭಾನುವಾರ ಬಂತೆಂದರೆ, ಮೋಹನರಾಯರ ಮನೆಗೆ ಹೋಗಿ ಬರುತ್ತಿದ್ದರು. ಯಾವುದಾದರೂ ಒಳ್ಳೆಯ ಚಿತ್ರ ಬಂದರೆ — ಎಲ್ಲರೂ ಕೂಡಿಯೇ ಹೋಗಿ ಬರುತ್ತಿದ್ದರು.

ಒಂದು ಸಂಜೆ ಕಿಟ್ಟಣ್ಣ, ಶಾರದ, ಸುಮಿತ್ರೆ, ಸುದರ್ಶನರು ಬೊಂಬಾ ಯಿಯ ಸಮುದ್ರ ದಂಡೆಯಲ್ಲಿ ವಾಯುವಿಹಾರ ಹೊರಟಿದ್ದರು. ಆ ದಿನ ರಜಾ ದಿನವಾದುದರಿಂದ ಬೀಚಿನಲ್ಲಿ ಎಂದಿಗಿಂತಲೂ ಹೆಚ್ಚಿನ ಗದ್ದಲವಿತ್ತು. ವಿಲಾಸಿ ಗಳೂ, ಕಾಲೇಜು ವಿದ್ಯಾರ್ಥಿ, ವಿದ್ಯಾರ್ಥಿನಿಯರೂ ಸಮುದ್ರ ದಂಡೆಯ ಸಂಪಾದ ಹವೆ ಸೇವನೆ ಮಾಡುತ್ತ ವಿಹರಿಸುತ್ತಿದ್ದರು. ಶಾರದೆ ಹೋಗಿ ಮರಳು ದಿಬ್ಬ ವೊಂದರ ಮೇಲೆ ಕುಳಿತುಕೊಂಡಳು. ಎದುರಿಗೆ ವಿಶಾಲವಾಗಿ ಹರಡಿದ ನೀಲ ಕಡಲು. ಆಗ ತಾನೇ ಅಸ್ತಂಗತನಾಗುತ್ತಿರುವ ದಿನಕರನ ಕೆಂಗಿರಣಗಳು

ಸಮುದ್ರದ ನೀರನ್ನು ಓಕಳಿಯನ್ನಾಗಿ ಮಾಡಿತು. ಸುದರ್ಶನ ಮುಳುಗುತ್ತಿದ್ದ ಸೂರ್ಯನನ್ನು ಬಾಯಿಬಿಟ್ಟು ನೋಡುತ್ತಾ ಕುಳಿತಿದ್ದ. ಅವನ ಕಣ್ಣಿಗೆ ಸೂರ್ಯನ ಕೆಂಗಿರಣದಲ್ಲಿ ನಿಗಿನಿಗಿ ಹೊಳೆಯುತ್ತಿದ್ದ ಯಾವುದೋ ಒಂದು ವಸ್ತು ಕಾಣಿಸಿತು.

"ಅದು ಏನಕ್ಕ?" ಎಂದು ಅದರ ಕಡೆ ಬೊಟ್ಟು ಮಾಡಿ ಸುಮಿತ್ರೆಯನ್ನು ಪ್ರಶ್ನಿಸಿದ.

"ಅದು ಸ್ಟೀಮರ್ ಸುದರ್ಶನ."

"ಸ್ಟೀಮರ್ ಅಂದರೆ ಏನು?"

"ನೀರಿನ ಮೇಲೆ ಹೋಗುವ ಹಡಗು."

ಈ ಮಾತನ್ನು ಕೇಳಿ ಸುದರ್ಶನ ಮತ್ತೇನನ್ನೋ ನೆನೆಸಿಕೊಂಡು ಹೇಳಿದ.

"ಆಕಾಶದಲ್ಲಿ ಹಾರೋ ಏರೋಪ್ಲೇನು ಇದ್ದ ಹಾಗೆ ಅದು ನೀರಿನ ಮೇಲೆ ಹೋಗೋ ಏರೋಪ್ಲೇನು!" ಎಂದು ಕೇಕೇ ಹಾಕಿದ.

ಸುದರ್ಶನ ಯುದ್ಧ ಕಾಲದಲ್ಲಿ ಏರೋಪ್ಲೇನನ್ನು ಕಂಡಿದ್ದ. ಅದರ ಬಗ್ಗೆ ಶಾರದೆಯಿಂದ ಸಾಕಷ್ಟು ವಿಷಯ ತಿಳಿದಿದ್ದ. ಹೀರೋಷಿಮಾ, ನಾಗಸಾಕಿಗಳ ಮೇಲೆ ಆಟಂ ಬಾಂಬು ಹಾಕಿದಾಗಲಂತೂ ಏರೋಪ್ಲೇನಿನ ಬಗ್ಗೆ ಸುದರ್ಶನನಿಗೆ ವಿಚಿತ್ರ ಭಾವನೆಗಳು ಬಂದು ಹೋಗಿದ್ದುವು. ಇಡೀ ಊರುಗಳನ್ನು ಧ್ವಂಸ ಮಾಡಬಲ್ಲ ಆಟಂ ಬಾಂಬನ್ನು ಹೊರಬಲ್ಲ ಏರೋಪ್ಲೇನ್ ಹೇಗಿರಬೇಕು? ಎಂದು ವಿಸ್ಮಯ ಪಟ್ಟಿದ್ದ. ಆಟಂ ಬಾಂಬಿನಿಂದ ಉಂಟಾದ ಸಾವು ನೋವುಗಳನ್ನು ಶಾರದೆಯ ಬಾಯಿಂದ ಕೇಳಿ ಐದು ವರ್ಷದ ಸುದರ್ಶನನು ಕೂಡಾ 'ಅಮೆರಿಕನರು ತುಂಬಾ ಕೆಟ್ಟವರಮ್ಮಾ' ಎಂದು ಉದ್ಗಾರ ತೆಗೆದಿದ್ದ. ಹೀಗಾಗಿ ಏರೋಪ್ಲೇನಿನ ವಿಷಯದಲ್ಲಿ ಅವನಿಗೆ ಎಷ್ಟು ಭಯವೋ ಅಷ್ಟೇ ಹೇವರಿಕೆ, ತಾತ್ಸಾರ ಉಂಟಾಗಿತ್ತು. ತಮ್ಮನ ವಿಚಿತ್ರ ಕಲ್ಪನೆಗಳನ್ನು ಕೇಳಿ ಸುಮಿತ್ರೆ ನಗದಿರಲಿಲ್ಲ.

"ಸುದರ್ಶನ ಸ್ಟೀಮರ್‌ನಲ್ಲಿ ಹೋಗೋಣ ಬರ್ತೀಯಾ?" ಎಂದು ಕೇಳಿದಳು.

" ಊಹೂಂ. ನಾನು ಬರೋಲ್ಲ. "

" ಯಾಕೋ ? "

" ಏರೋಪ್ಲೇನು ಬಾಂಬು ಹಾಕೋ ಹಾಗೆ, ಸ್ಟೀಮರೂ ಬಾಂಬು ಹಾಕುತ್ತೆ ! " ಈ ಮಾತನ್ನು ಕೇಳಿ ಎಲ್ಲರೂ ನಕ್ಕುಬಿಟ್ಟರು.

" ಹಾಗಂತ ಯಾರು ಹೇಳಿದರೋ ? "

" ಮೊನ್ನೆ ಸಿನೀಮಾದಲ್ಲಿ ನಾವು ನೋಡಿದೆವಲ್ಲ ! "

ಕೆಲವು ದಿನಗಳ ಹಿಂದೆ ಸುಮಿತ್ರೆ ಚಲನಚಿತ್ರ ನೋಡಲು ಹೋಗಿದ್ದಳು. ಜೊತೆಗೆ ಸುದರ್ಶನನೂ ಇದ್ದ. ಅದರಲ್ಲಿ ನೌಕಾಯುದ್ಧದ ಒಂದು ಡಾಕ್ಯುಮೆಂಟರಿ ಫಿಲಂ ತೋರಿಸಿದ್ದರು. ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಸುದರ್ಶನ ಆ ಮಾತು ಹೇಳಿದ್ದ.

" ಅದು ಬ್ಯಾಟಲ್‌ಶಿಪ್ ಅಂದರೆ ಯುದ್ಧದ ಹಡಗು ಸುದರ್ಶನ. "

" ಇದು ? "

" ಸ್ಟೀಮರ್ ಅಂದರೆ ಪ್ರಯಾಣಿಕರ ಹಡಗು. ನಾವು ಬಂದ ' ಟ್ರಾಂ ಕಾರು ' ಇದ್ದ ಹಾಗೆ ಇದೊಂದು ತರಹೆ " ಮೋಟಾರು " ಅದು ನೆಲದ ಮೇಲೆ ಹೋದರೆ ಇದು ನೀರಿನ ಮೇಲೆ ಹೋಗುತ್ತೆ " ಎಂದಳು ಸುಮಿತ್ರೆ.

ಆಗಲೇ ಸುದರ್ಶನ ಸ್ಟೀಮರಿನಲ್ಲಿ ಅಷ್ಟು ದೂರ ಹೋಗಿ ಬರಲು ಸಮ್ಮತಿಸಿದರು.

ನಾಲ್ವರೂ ವಿಹಾರಾರ್ಥವಾಗಿ ಪ್ರಯಾಣ ಮಾಡುವ ಪ್ರವಾಸಿಕರಿಗೆಂದೇ ಇದ್ದ ಸಣ್ಣ ಸ್ಟೀಮರಿನಲ್ಲಿ ಕುಳಿತುಕೊಂಡು ಸಮುದ್ರದಲ್ಲಿ ಕೆಲವು ಮೈಲಿಗಳ ತನಕ ಸುತ್ತಾಡಿದರು. ಸುದರ್ಶನನಿಗೆ ಸ್ಟೀಮರಿನ ಬಗ್ಗೆ ಇದ್ದ ಎಲ್ಲ ಹೆದರಿಕೆ ಮಾಯವಾಯಿತು. ಸ್ಟೀಮರು ಸ್ವಸ್ಥಾನ ಸೇರಲು ಬರುತ್ತಿದ್ದಾಗ, ಬಂದರಿನಲ್ಲಿ ಲಂಗರು ಹಾಕಿದ ದೆವ್ವದಂತಹ ಹಡಗಿನ ಬಳಿಯಲ್ಲೇ ಸಾಗಿ ಬಂತು. ಸುದರ್ಶನ ಪರ್ವತ ಸಾದೃಶವಾಗಿ ಇದ್ದ ಆ ಹಡಗನ್ನು ಬೆರಗುಗಣ್ಣಿನಿಂದ ನೋಡುತ್ತಾ,

" ಇದು ಎಷ್ಟು ದೊಡ್ಡ ಹಡಗು ಅಕ್ಕಾ " ಎಂದು ಹೇಳಿದ.

" ಹೂಂ. "

" ಇಂಗ್ಲೀಷಿನವರು ನಮ್ಮ ದೇಶಕ್ಕೆ ಬರೋದು ಇಂಥ ಹಡಗಿನಲ್ಲೆ ಅಕ್ಕ?"

" ಹೂಂ. "

" ಅವರ ದೇಶಕ್ಕೆ ಇಲ್ಲಿಂದ ಎಷ್ಟು ಮೈಲಿ ಅಕ್ಕ ? "

" ಆರು ಸಾವಿರ ಮೈಲಿ. "

" ಅಷ್ಟು ದೂರದಲ್ಲಿದ್ದುಕೊಂಡು ನಮ್ಮ ದೇಶಾನ ಆಳ್ತಾರಾ ? "

ಸುದರ್ಶನನಿಗೆ ಆಶ್ಚರ್ಯವಾಯಿತು.

" ಹೌದು ಸುದರ್ಶನ. "

" ನಮಗೇಕೆ ಅಕ್ಕ ಅವರ ಕೈಯಿಂದ ರಾಜ್ಯಾನ ಕಿತ್ತುಕೊಳ್ಳೋಕೆ ಆಗೋದಿಲ್ಲ ? "

" ಅವರ ಹತ್ತಿರ ಮದ್ದು ಗುಂಡು ಎಲ್ಲ ಇದೆ — ನಮ್ಮ ಹತ್ತಿರ ಏನಿದೆ ? "

" ಹಾಗಾದ್ರೆ ನಮಗೆ ಸ್ವಾತಂತ್ರ್ಯ ಬರೋದೇ ಇಲ್ಲ ಅನ್ನು ! "

" ಬರುತ್ತೆ ಸುದರ್ಶನ. ಆದರೆ ನಿಧಾನ ಅಷ್ಟೇ. "

" ಹೇಗೆ ಬರುತ್ತೆ ? "

" ಗಾಂಧೀಜಿ ತೋರಿಸಿರೋ ದಾರೀಲಿ ಹೋದರೆ. "

" ಗಾಂಧೀಜಿ ಮಾತು ಕೇಳಿದರೆ, ನಮ್ಮನ್ನು ಜೈಲಿಗೆ ಹಾಕ್ತಾರೆ. "

" ನಮಗೆ ಸ್ವರಾಜ್ಯ ಬೇಕಾದರೆ, ಅದೊಂದೇ ದಾರಿ. "

" ಜೈಲಿಗೆ ಹೋದರ ಸ್ವರಾಜ್ಯ ಬರುತ್ತ್ಯೆ?........ಸುಳ್ಳು " ಎಂದು ಹಾಸ್ಯ ಮಾಡಿ ನಕ್ಕು ಬಿಟ್ಟ ಸುದರ್ಶನ.

ಸುದರ್ಶನನ ಮಾತು– ನಗೆ, ಅಲ್ಲಿದ್ದ ಎಲ್ಲರನ್ನೂ ತಬ್ಬಿಬ್ಬು ಮಾಡಿತು. ಕೇವಲ ಐದಾರು ವರ್ಷದ ಮಗು ರಾಜಕೀಯ ವಿಷಯ ಮಾತನಾಡುವುದನ್ನು ಕೇಳಿ ಎಲ್ಲರಿಗೂ ಆಶ್ಚರ್ಯ. ಅವರಲ್ಲಿಯೂ ಸುದರ್ಶನ ಕೇಳಿದ ಪ್ರಶ್ನೆಗೆ ಸಮಂಜಸವಾದ ಉತ್ತರ ಹೇಳಲು ಅವರಾರೂ ಸಮರ್ಥರಾಗಲಿಲ್ಲ. ಮಗುವಿನ ಪುಟ್ಟ ತಲೆಯನ್ನು ರಾಜಕೀಯದಂತಹ ಗಹನ ವಿಷಯಗಳಿಂದ ತುಂಬಿಸಿ, ಅದಕ್ಕೆ ಶ್ರಮ ಕೊಡಬಾರದೆಂದು ಕಿಟ್ಟಣ್ಣ ಬೇರೊಂದು ವಿಷಯ ತೆಗೆದು, ಸುದರ್ಶನ ಆ ಮಾತನ್ನು ಮರೆಯುವಂತೆ ಮಾಡಿದ.

" ಸ್ಟೀಮರು " ದಡ ಸೇರಿತು. ಸುದರ್ಶನ ನೌಕಾವಿಹಾರದಿಂದಾದ ಆನಂದವಲ್ಲಿ ತಾನು ಚರ್ಚಿಸಿದ್ದ ಎಲ್ಲ ವಿಷಯಗಳನ್ನೂ ಮರೆತು ಬಿಟ್ಟ.

ಆದರೆ ಸುಮಿತ್ರೆಯಾಗಲೀ ಶಾರದೆಯಾಗಲೀ ಸುದರ್ಶನನ ಮಾತನ್ನು ಬಹು ಕಾಲ ಮರೆಯಲಾಗಲಿಲ್ಲ.

ಸುಮಿತ್ರೆಯ ರಜ ಪೂರೈಸುತ್ತಾ ಬಂದಿತ್ತು. ಶಾರದೆಗೆ ಸುಮಿತ್ರೆ ಬೊಂಬಾಯಿಯಲ್ಲಿ ಇರುವಂತೆಯೇ ಸದಾಶಿವನನ್ನು ಕರೆಸಿಕೊಳ್ಳಬೇಕೆಂಬ ಆಸೆ ಯುಂಟಾಯಿತು. ಹೋಗುವಾಗ ಸುಮಿತ್ರೆಯನ್ನು ಸಂಗಡಲೇ ಕರೆದೊಯ್ಯಲಿ ಎಂದು ಶಾರದೆ ಆಲೋಚಿಸಿ, ಕಿಟ್ಟಣ್ಣನ ಅಭಿಪ್ರಾಯ ಪಡೆದು ಕಾಗದ ಬರೆದಳು. ತಾನು ಬರೆದುದು ಸಾಲದೆಂಬಂತೆ ಸುಮಿತ್ರೆಯಿಂದ 'ಒಂದು ವಾರ ರಜ ತೆಗೆದುಕೊಂಡು ಬನ್ನಿ' ಎಂದು ಬರೆಸಿದಳು. ಆ ಕಾಗದವನ್ನೇ ಆಹ್ವಾನವೆಂದು ಭಾವಿಸಿ, ಸದಾಶಿವ ರಜಕ್ಕೆ ತರದೂದು ಮಾಡಿ, ಬೊಂಬಾಯಿಗೆ ಬಂದೇ ಬಿಟ್ಟ.

ಸದಾಶಿವನ ಪಾಲಿಗೆ ಸುಮಿತ್ರೆಯೊಡನೆ ಬೊಂಬಾಯಿಯಲ್ಲಿ ಅವನು ಕಳೆದ ದಿನಗಳು ಅವನ ಭಾಗದ ಮಧುಯಾತ್ರೆ. ತರುಣ ದಂಪತಿಗಳು ಸುದರ್ಶನನನ್ನು ಹಿಂದಿಟ್ಟುಕೊಂಡು, ನಾಟಕ, ಸಿನಿಮಾ, ಮ್ಯೂಸಿಯಂ ನೋಡಿದರು. ಟಾಜ್ ಮೊದಲಾದ ಭವ್ಯ ಉಪಹಾರ ಮಂದಿರಗಳ ತಿಂಡಿ ತಿನಸುಗಳ ಸವಿಯನ್ನೂ ಅನುಭವಿಸಿದರು. ಹ್ಯಾಂಗಿಂಗ್ ಗಾರ್ಡನಿನಲ್ಲಿ ಹಕ್ಕಿಗಳಂತೆ ಹಾರಿದರು. ಜುಹು ಸೀ ಬೀಚಿನಲ್ಲಿ ಕೈಯಲ್ಲಿ ಕೈಹಾಕಿಕೊಂಡು ಕುಲುಕುಲು ನಗುತ್ತ ಕಿನ್ನರ ಕಿನ್ನರಿಯರಂತೆ ವಿಹರಿಸಿದರು. ಬೊಂಬಾಯಿಯಲ್ಲಿ ನೋಡುವುದೆಲ್ಲಾ ಮುಗಿದ ಮೇಲೆ, ಬೊಂಬಾಯಿಗೆ ಸಮೀಪವಾಗಿದ್ದ ಎಲಿಫೆಂಟದ ಗುಹೆಗಳನ್ನೂ, ವಜ್ರೇಶ್ವರಿಯಲ್ಲಿನ ಬಿಸಿ ನೀರಿನ ಬುಗ್ಗೆಗಳನ್ನೂ ನೋಡಿ ಬಂದರು. ಮನೆಯಿಂದಲೇ ತಿಂಡಿ ತೀರ್ಥಗಳನ್ನು ಮಾಡಿಕೊಂಡು ಹೋಗಿದ್ದುದರಿಂದ ಪ್ರವಾಸದ ಸೊಗಸು ಇಮ್ಮಡಿಸಿತ್ತು. ಈ ವನಭೋಜನಗಳ ಸವಿನೆನಪು ಅಚ್ಚಳಿಯದೆ ಇರಲೆಂದು ಹೋದೆಡೆಯಲ್ಲೆಲ್ಲಾ ಫೋಟೋ ತೆಗೆದುಕೊಂಡ ಸದಾಶಿವ.

ಸದಾಶಿವನಿಗೆ ರಜ ಮುಗಿಯಿತು. ಅದರೊಂದಿಗೆ ಸುಮಿತ್ರೆಯ ರಜವೂ ಮುಗಿದು ಬಂದುದರಿಂದ ಗಂಡಹೆಂಡಿರು ಕೂಡಿಯೇ ಬೆಂಗಳೂರಿಗೆ ಹೊರಟರು. ಬೊಂಬಾಯಿಯನ್ನು ಇಷ್ಟು ಬೇಗ ಬಿಟ್ಟು ಹೊರಡಲು ಅವರಿಬ್ಬರಿಗೂ ಮನಸ್ಸಿಲ್ಲ. ಆದರೂ ನಿರ್ವಾಹವಿಲ್ಲ. ಸುದರ್ಶನ, ಸುಮಿತ್ರೆ ಊರಿಗೆ ಹೊರಡು

ವುದನ್ನು ಕಂಡು ಅಕ್ಕನೊಂದಿಗೆ ತಾನೂ ಹೊರಡುವುದಾಗಿ ಹಟಮಾಡಿದ.

ಇನ್ನೊಮ್ಮೆ ಹೋಗೋಣವೆಂದು ಎಷ್ಟು ಹೇಳಿದರೂ ಅವನು ಕೇಳ ಲಿಲ್ಲ. ಕಡೆಗೆ ಕಿಟ್ಟಣ್ಣ ಸುದರ್ಶನನೊಂದಿಗೆ ಹತ್ತೆಂಟು ಮೈಲಿಯ ತನಕ ರೈಲಿ ನಲ್ಲಿ ಪ್ರಯಾಣ ಮಾಡಬೇಕಾಯಿತು. ಸುದರ್ಶನ ಅಷ್ಟಕ್ಕೇ ತೃಪ್ತಿಹೊಂದಿದ. ಯಾವುದೋ ನಿಲ್ದಾಣದಲ್ಲಿ ಇಳಿದಾಗ ಅವನು ಗಲಾಟೆ ಮಾಡಲಿಲ್ಲ. ಸುದರ್ಶನ ರೈಲಿನಿಂದ ಇಳಿದರೂ ಅವನ ನೋಟವೆಲ್ಲಾ ಸುಮಿತ್ರೆಯ ಕಡೆಗೇ ಇತ್ತು. ಸುಮಿತ್ರೆಗಂತೂ ಸುದರ್ಶನನನ್ನು ಅಗಲಲಾರದೆ ಕಣ್ಣು ಹನಿಗೂಡಿತ್ತು

ರೈಲು ಕದಲಿತು. ಸುದರ್ಶನ " ಅಕ್ಕಾಽ.... " ಎಂದು ಅಕ್ಕನೆಡೆಗೆ ಕೈ ಚಾಚಿದ. ರೈಲು ಅಕ್ಕನನ್ನು ತಮ್ಮನ ಕಣ್ಣಿನಿಂದ ಮರೆ ಮಾಡಿತು—ಎಂದೆಂ ದಿಗೂ ಮರೆಮಾಡಿತು.

## ೧೨

ಸುದರ್ಶನ ಆ ದಿನ ಸುಮಿತ್ರೆಯನ್ನು ಪ್ರಶ್ನಿಸಿದ್ದ.

"ಜೈಲಿಗೆ ಹೋದರೆ ಸ್ವರಾಜ್ಯ ಬರುತ್ತದೆಯೇ ?"

ಆ ಗಳಿಗೆಯಲ್ಲಿ ಈ ಪ್ರಶ್ನೆಗೆ ಉತ್ತರ ಕೊಡಲು ಯಾರೂ ಸಮರ್ಥರಾಗ ದಿದ್ದರೂ, ದೇಶದಲ್ಲಿ ನಡೆಯುತ್ತಿದ್ದ ಘಟನಾ ಪರಂಪರೆಗಳು ಸ್ವರಾಜ್ಯ ಸಂಪಾದ ನೆಯ ದಿನವನ್ನು ಹತ್ತಿರಕ್ಕೆ ಬರಮಾಡಿದ್ದವು. ಬ್ರಿಟನ್ನಿನಲ್ಲಿ ಹೊಸದಾಗಿ ಬಂದಿದ್ದ ಲೇಬರ್ ಸರಕಾರ ಭಾರತದ ಜನತೆಯ ಅಭಿಲಾಷೆಯನ್ನು ಕಂಡು ಕೊಂಡು ಕೇಂದ್ರ ಹಾಗೂ ಪ್ರಾಂತಗಳಲ್ಲಿ ಹಲಕೆಲವು ಸ್ಥಾನಗಳನ್ನು ಜನ ನಾಯಕರಿಗೆ ಕೊಡುವುದರಮೂಲಕ ದೇಶೀಯರ ಅತೃಪ್ತಿಯನ್ನು ಹೋಗಲಾಡಿ ಸಲು ಇಚ್ಛಿಸಿದರು.

ಅದರ ಮೊದಲನೆಯ ಪ್ರಯೋಗವಾಗಿ, ವೇವೆಲ್ ಯೋಜನೆ ಪ್ರಕಟ ವಾಯಿತು. ತತ್ಫಲವಾಗಿ ಸಿಮ್ಲಾ ನಗರದಲ್ಲಿ ಭಾರತದ ಬೇರೆ ಬೇರೆ ಕೋಮಿನ ಮುಖಂಡರುಗಳು ಸೇರಿ ಒಂದು ತೀರ್ಮಾನಕ್ಕೆ ಬರಲು ಪ್ರಯತ್ನಪಟ್ಟರು.

ಆದರೆ ಕೆಲವು ದೇಶಮುಖಂಡರ ಸಂಕುಚಿತ ಮನೋಭಾವ, ಹಠಮಾರಿತನಗ ಳಿಂದ ಸಿಮ್ಲಾದ ಮಾತುಕತೆಗಳು ವಿಫಲವಾದವು. ಆದರೇನು? ಕೆಲವು ತಿಂಗಳು ಕಳೆದ ನಂತರ ಪಾರ್ಲಮೆಂಟರಿ ನಿಯೋಗವೊಂದು ಭರತಖಂಡಕ್ಕೆ ಭೇಟಿಯಿತ್ತು ನಾಯಕರೊಡನೆ ಸಮಾಲೋಚಿಸಿ ಭಾರತಕ್ಕೆ ಸ್ವಾತಂತ್ರ್ಯ ಕೊಡುವ ವಿಷಯ ನಿಶ್ಚಯಿಸಿದರು.

ಈ ನಿರ್ಧಾರದ ಅಂಗವಾಗಿ ಕೇಂದ್ರದಲ್ಲಿ ತಾತ್ಕಾಲಿಕ ಸರಕಾರ ಆರಂಭ ವಾಗಿ, ಆಡಳಿತದ ಸಮಸ್ತ ಜವಾಬ್ದಾರಿ, ದೇಶಭಕ್ತರೂ ಪ್ರಜಾನುರಾಗಿಗಳೂ ಆಗಿದ್ದ ಜನ ನಾಯಕರ ಮೇಲೆ ಬಿತ್ತು. ಅಲ್ಲದೆ ದೇಶಕ್ಕೆ ಅನುರೂಪವಾದ ರಾಜ್ಯಾಂಗವನ್ನು ರೂಪಿಸಿಕೊಳ್ಳಲು ರಾಜ್ಯಾಂಗ ಸಭೆಯೊಂದು ರಚಿತವಾಯಿತು. ಮುಸ್ಲಿಂ ಲೀಗಿನವರು ತಾತ್ಕಾಲಿಕ ಸರಕಾರದೊಂದಿಗೆ ಅಸಹಕರಿಸಿದರು. ರಾಜ್ಯಾಂಗ ಸಭೆಗೆ ಬರಲೊಪ್ಪದೆ ಅವರು ತಮಗೆ ಪಾಕಿಸ್ಥಾನ ಬೇಕೆಂದು ಹಠ ಹಿಡಿದರು. ಅವರ ಬೇಡಿಕೆಯನ್ನು ಮನ್ನಿಸಿ ಆಳರಸರು ಒಂದಾಗಿದ್ದ ಭರತ ಖಂಡವನ್ನು ಇಬ್ಭಾಗ ಮಾಡಲು ನಿಶ್ಚಯಿಸಿದರು.

ಅನೇಕ ಶತಮಾನಗಳಿಂದ ಅನೇಕ ಮನಸ್ತಾಪಗಳ ನಡುವೆ ಸ್ನೇಹದ ಚಿಗುರು ಬಾಡದಂತೆ ರಕ್ಷಿಸಿಕೊಂಡು ಬಂದಿದ್ದ ಹಿಂದೂ ಮುಸಲ್ಮಾನರು ರಾಜ ಕೀಯ ಮುಂದಾಳುಗಳ ಸ್ವಾರ್ಥ, ಹಠಮಾರಿತನ, ಛಲಗಳಿಂದಾಗಿ, ಎರಡು ಭಿನ್ನ ಭಿನ್ನ ಕೋಮುಗಳಾಗಿ ಸಿಡಿದು ಬೀಳುವಂತಾಯಿತು. ಯಾವುದು ಆಗ ಬಾರದೆಂದು ಗಾಂಧೀಜಿ ಬಯಸಿದ್ದರೋ ಅದು ನಡೆದೇ ಹೋಯಿತು. ಜನ ದಾಸ್ಯಕ್ಕಿಂತಲೂ ವಿಭಜನೆಯ ಮೂಲಕ ದೊರೆತ ಸ್ವಾತಂತ್ರ್ಯವನ್ನು ಪುರಸ್ಕರಿ ಸಿದರು. ಭರತಖಂಡಕ್ಕೆ ಸ್ವಾತಂತ್ರ್ಯವೇನೋ ಬಂತು. ಆದರೆ ಸ್ವಾತಂತ್ರ್ಯದ ಬೆಲೆ? ಒಂದಾಗಿದ್ದ ರಾಷ್ಟ್ರ ಎರಡಾಗಿ ಹಂಚಿ ಹೋಯಿತು. ಭಾರತಾಂಬೆಯ ದೇಹ ಇಬ್ಭಾಗವಾಗಿ ಸೀಳಲ್ಪಡುವಾಗ ರಕ್ತದ ಕೋಡಿ ಹರಿಯದೆ ಇದ್ದೀತೆ?

................

ಪಾಕೀಸ್ಥಾನ, ಹಿಂದೂಸ್ಥಾನಗಳು ನಿರ್ಮಾಣವಾದೊಡನೆಯೇ ಅದ ರೊಂದಿಗೆ ನೂರೆಂಟು ಸಮಸ್ಯೆಗಳು ಕಾಣಿಸಿಕೊಂಡವು. ವಿಭಜನೆ ಎಲ್ಲರೂ ತಿಳಿದಿದ್ದಂತೆ ಶಾಂತ ರೀತಿಯಲ್ಲಿ ನಡೆಯದೆ ಅನೇಕ ಅನರ್ಥ ಪರಂಪರೆಗಳ ಉಗ ಮಸ್ಥಾನವಾಯಿತು. ಇದುವರೆಗೆ ಅಣ್ಣತಮ್ಮಂದಿರಂತೆ ವಾಸಿಸುತ್ತಿದ್ದ ಹಿಂದು

ಮುಸಲ್ಮಾನರು ಇದ್ದಕ್ಕಿದ್ದಂತೆ ಒಬ್ಬರನ್ನೊಬ್ಬರು ಶತ್ರುಗಳಂತೆ ಕಾಣತೊಡಗಿದರು. ಪಾಕಿಸ್ಥಾನದ ಹಿಂದುಗಳಿಗೂ, ಹಿಂದೂಸ್ಥಾನದ ಮುಸಲ್ಮಾನರಿಗೂ ತಮ್ಮ ತಮ್ಮ ಸರಕಾರಗಳಲ್ಲಿ ನಂಬಿಕೆ ಸಾಲದೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಒಲಸೆ ಹೋದರು. ಈ ಅವಕಾಶವನ್ನು ಪುಂಡರು, ಗೂಂಡಾಗಳು, ಕೋಮುವಾರು ಮಧ್ಯದಿಂದ ಮತ್ತರಾಗಿ ಮಾಡಬಾರದ ಕೆಲಸಗಳಿಗೆ ಕೈಹಾಕಿದರು.

ಬಂಗಾಳ, ಪಂಜಾಬ್, ಬಿಹಾರ್ ಪ್ರಾಂತಗಳಲ್ಲಿ ಹಿಂದೂ ಮುಸಲ್ಮಾನರ ಕೊಲೆ, ಸುಲಿಗೆ, ದರೋಡೆ, ಮನೆಗಳಿಗೆ ಬೆಂಕಿಯಿಡುವುದು, ಹೆಂಗಸರನ್ನು ಅಪಹರಿಸುವುದು, ಅವರ ಮಾನಭಂಗ ಮಾಡುವುದು, ಬಲಾತ್ಕಾರವಾಗಿ ಜಾತಿ ಕೆಡಿಸಿ ತಮ್ಮ ಮತಕ್ಕೆ ಸೇರಿಸಿಕೊಳ್ಳುವುದೇ ಮೊದಲಾದ ದುಷ್ಕೃತ್ಯಗಳು ನಡೆದವು. ಜನ ಪ್ರಾಣರಕ್ಷಣೆಗಾಗಿ, ಮಾನರಕ್ಷಣೆಗಾಗಿ ಮನೆ, ಮಠ, ಆಸ್ತಿಪಾಸ್ತಿಗಳನ್ನು ತೊರೆದು ಬರಿಗೈಯಲ್ಲಿ ಬಂದು ಭಿಕ್ಷೆ ಬೇಡಿದರು.

ಈ ಯಾದವೀ ಕಲಹ ಕೇವಲ ಗಡಿ ಪ್ರಾಂತಗಳಿಗೆ ಮೀಸಲಾಗದೆ, ದೇಶಾದ್ಯಂತ ಕಾಳ್ಗಿಚ್ಚಿನಂತೆ ಹರಡಿತು. ಡೆಲ್ಲಿ, ಅಹಮದಾಬಾದ, ಕಲ್ಕತ್ತ, ಡಾಕಾ, ಬೊಂಬಾಯಿ, ಕಾಠೇವಾಡಗಳಲ್ಲಿ ಕೋಮುವಾರು ಘರ್ಷಣೆಗಳು ನಡೆದವು. ಸಾವಿರಾರು ಬಡಪಾಯಿಗಳು ಆಸುವನ್ನು ನೀಗಿದರು. ಬಂಗಾಳದ ನೌಖಾಲಿ, ತಿಪ್ಪೇರಾ ಜಿಲ್ಹೆಗಳಲ್ಲಿ, ಹಿಂದುಗಳನ್ನು ಮುಸಲ್ಮಾನರು ಪರಿಪರಿಯಾಗಿ ಹಿಂಸಿಸಿ ಕೊಂದರೆಂದು ಬಿಹಾರ ಪ್ರಾಂತದ ಪಾಟ್ಣ, ಮಾಂಘೀರ್, ಗಯಾ, ಪರಗಣ ಜಿಲ್ಹೆಗಳಲ್ಲಿ ಹಿಂದುಗಳು ಮುಸಲ್ಮಾನರನ್ನು ಅಟ್ಟಿಸಿಕೊಂಡು ಹೋಗಿ ಕೊಂದು, ತಮ್ಮ ಸೇಡು ತೀರಿಸಿಕೊಂಡರು. ಯಾರ ಮೇಲೆ ಯಾರು ಸೇಡು ತೀರಿಸಿಕೊಳ್ಳುವುದು?

ಬಂಗಾಳದಲ್ಲಿ, ಪಂಜಾಬದಲ್ಲಿ ಮುಸಲ್ಮಾನರು ಹಿಂದೂ ಹೆಂಗಸರ ಮೇಲೆ ಅತ್ಯಾಚಾರ ನಡೆಸಿದರೆಂದು ಬಿಹಾರಿನಲ್ಲಿ, ಬೊಂಬಾಯಿಯಲ್ಲಿ, ಅದರ ಸೇಡು ತೀರಿಸಿಕೊಳ್ಳುವುದು ಯಾವ ನ್ಯಾಯ....? ಇದಕ್ಕಿಂತಲೂ ಅವಿವೇಕ ಬೇಕೆ? ಎಂದು ಶಾರದೆ ತನ್ನಲ್ಲಿಯೇ ಮಿಡುಕಿದಳು. ದೇಶಾದ್ಯಂತ, ಹೆಂಗಸರ ಮೇಲೆ ನಡೆಸುತ್ತಿದ್ದ ದೌರ್ಜನ್ಯ ಕೃತ್ಯಗಳನ್ನು ಕೇಳಿ, ಈ ಸೌಭಾಗ್ಯಕ್ಕೆ ಸ್ವಾತಂತ್ರ್ಯ ಪಡೆಯಬೇಕಾಯಿತೇ ಎಂದು ಅವಳು ದುಃಖಿಸಿದಳು.

ಬೊಂಬಾಯಿಯಲ್ಲಂತೂ, ಹಿಂದೂ ಮುಸ್ಲಿಂ ಜಗಳ ನಿತ್ಯದ ಕಥೆಯಾಯಿತು. ಆ ಮಹಾ ಪಟ್ಟಣದ ಯಾವುದಾದರೊಂದು ಭಾಗದಲ್ಲಿ ಒಬ್ಬರಿಗೊಬ್ಬರು ಚೂರಿ ಹಾಕುವುದು, ಮಾನಭಂಗ ಮಾಡುವುದು, ಕೊಲೆ, ಸುಲಿಗೆ, ಲೂಟಿಗಳು ನಡದೇ ಇತ್ತು. ಸರಕಾರದವರು ಗಲಭೆಗಳನ್ನು ನಿಲ್ಲಿಸಲು ಗಲಭೆ ಪ್ರದೇಶಗಳಲ್ಲಿ, ಶಸ್ತ್ರಸಜ್ಜಿತ ಪೋಲೀಸು ಪಹರೆ ಇಟ್ಟರು. ಕರ್ಫ್ಯೂ ಆಜ್ಞೆ ಜಾರಿಗೆ ತಂದರು. ಅನೇಕ ಶಾಂತಿ ದಳಗಳನ್ನು ರಚಿಸಿ, ನಗರದಲ್ಲೆಲ್ಲಾ ಶಾಂತಿ ಸ್ಥಾಪನೆಗಾಗಿ ಪ್ರಾರ್ಥಿಸಿದರು. ಹೀಗಿದ್ದರೂ, ನಗರದಲ್ಲಿ ಕೊಲೆ, ಸುಲಿಗೆಗಳು ಮೊದಲಿನಂತೆ ನಡೆದೇ ಇತ್ತು.

ಶಾರದೆಗೆ ಈ ವಿಷಯ ಆಶ್ಚರ್ಯವನ್ನುಂಟು ಮಾಡಿತು. ಸರಕಾರ ಹಾಗೂ ಹಿಂದೂ ಮಹಮ್ಮದೀಯ ಮುಖಂಡರು ದಿನ ಬೆಳಗಾದರೆ ಹಿಂದೂ ಮುಸ್ಲಿಂ ಗಲಭೆ ನಿಲ್ಲಬೇಕೆಂದು, ಪ್ರಾರ್ಥನೆಗಳ ಮೇಲೆ ಪ್ರಾರ್ಥನೆ ಮಾಡುತ್ತಿದ್ದರೂ, ನಗರದಲ್ಲಿ ಶಾಂತಿ ಸ್ಥಾಪನೆಯಾಗಲಿಲ್ಲ. ಕಾರಣವೇನು ?

ಶಾರದೆ ಈ ವಿಷಯ ಆಲೋಚಿಸಿದಷ್ಟು ಗಾಢವಾಯಿತು. ಬಹುಶಃ ಶಾಂತಿ ಸ್ಥಾಪನೆಗಾಗಿ ಹೇಳಿಕೆ ಕೊಡುವ ಕಾಂಗ್ರೆಸ್, ಲೀಗ್ ಹಾಗೂ ಹಿಂದು ಳಿದ ಪಂಗಡಗಳ ನಾಯಕರುಗಳಿಗೆ, ಗಲಭೆಕಾರರ ಮೇಲೆ ಯಾವ ಪ್ರಭಾವ, ವರ್ಚಸ್ಸು ಇಲ್ಲವೇನೋ! ಹಾಗಿಲ್ಲವಾದರೆ ಪೋಲೀಸು ಅಧಿಕಾರಿಗಳು ಗಲಭೆಗಳನ್ನು ಅಡಗಿಸಲು ಅಸಮರ್ಥರಿರಬೇಕು. ಇಲ್ಲಾ ಅವರು ಲಂಚಕೋರರಿರಬೇಕು. ಸರಕಾರದ ಹುದ್ದೆಯಲ್ಲಿದ್ದೂ, ಹೃದಯದಲ್ಲಿ ಕೋಮುವಾರು ವಿಷ ಭಾವನೆಯನ್ನು ಬೆಳೆಸಿಕೊಂಡು ಕರೆ ಬಂದಾಗ ತಮ್ಮ ಕರ್ತವ್ಯದಲ್ಲಿ ಹಿಮ್ಮೆಟ್ಟುವುದರ ಮೂಲಕ ಇನ್ನೊಂದು ಕೋಮಿನವರ ಮೇಲೆ, ತಮ್ಮ ಸಿಟ್ಟನ್ನು ತೀರಿಸಿಕೊಳ್ಳುತ್ತಾರೋ ಏನೋ ?

ಜನತಾ ಸರಕಾರದ ಅಧಿಕಾರಿಗಳು ಇಷ್ಟು ಪತಿತರಾಗಿದ್ದಾರೆಂದು ಬಗೆಯಲು ಶಾರದೆಯ ಮನಸ್ಸು ಒಡಂಬಡಲಿಲ್ಲ. ಅವಳಿಗೆ ಕೋಮುವಾರು ಗಲಭೆಗಳಿಗೆ ಇವೆಲ್ಲಕ್ಕೂ ಮಿಗಿಲಾದ ಬೇರೊಂದು ಕಾರಣವಿರಬೇಕೆನ್ನಿಸಿತು. ದೇಶದ ಆರ್ಥಿಕ ದುಃಸ್ಥಿತಿಯೇ ಕೋಮುವಾರು ಗಲಭೆಗಳ ಹಿನ್ನೆಲೆಯಾಗಿರಬಾರದೇಕೆ ?

ದೇಶದಲ್ಲಿ, ಅದರಲ್ಲಿಯೂ, ಬೊಂಬಾಯಿ ಮೊದಲಾದ ನಗರಗಳಲ್ಲಿ, ಆರ್ಥಿಕಸಮಸ್ಯೆ ನೂರು ಶಾಖೆಗಳಾಗಿ ಒಡೆದಿವೆ. ನಿರುದ್ಯೋಗಿತನ, ವಸತಿ ಸೌಕರ್ಯದ ಅಭಾವ, ಆಹಾರ ಅಭಾವ, ಆಹಾರೋಪ ವಸ್ತುಗಳ ಮಿತಿಮೀರಿದ ಬೆಲೆ, ಕಳ್ಳ ಸಂತೆ, ಬಡವ ಶ್ರೀಮಂತರೆನ್ನುವ ವರ್ಗ ಭೇದ, ಜನತೆಯ ನೈತಿಕ ಜೀವನದಲ್ಲಿ ಮಹಾ ಯುದ್ಧದ ಪೆಸೆಯಿಂದ ಉಂಟಾಗಿರುವ ಅಧಃಪತನ, ಅಜ್ಞಾನಿಗಳೂ, ತಿಳುವಳಿಕೆಯಿಲ್ಲದವರೂ ಆದ ಕಾರ್ಮಿಕರ ಮೇಲೆ ಇರುವ ಕೋಮು ವಾರು ಅಗ್ನಿಭಕ್ಷಕರ ಪ್ರಭಾವ, ವಿವಿಧ ರಾಜಕೀಯ ಸಂಗಡಗಳ ಮನಸ್ತಾಪ, ಅಧಿಕಾರದಲ್ಲಿರುವ ಪಾರ್ಟಿಯನ್ನು ನೆಲಕ್ಕುರುಳಿಸಲು ಮಾಡುವ ಕುತಂತ್ರ, ಕಿರುಕುಳಗಳೇ ಕೋಮುವಾರು ಜಗಳಗಳ ಬೀಜರೂಪವಾಗಿರಬಾರದೇಕೆ ? ಎಂದೆನೆಸಿತು.

ಹೀಗಿದ್ದ ಮೇಲೆ ಸರಕಾರ ಮಾಡುವ ಶಾಸನಗಳಿಂದ, ಬಲಪ್ರಯೋಗದಿಂದ ಶಾಂತಿ ಸ್ಥಾಪನೆಯಾಗಲಾರದು. ಶಾಂತಿ ಸ್ಥಾಪನೆಯಾಗಬೇಕಾದರೆ, ರಚನಾತ್ಮಕ ಕಾರ್ಯಕ್ರಮುಗಳಿಂದ ಮಾತ್ರವೇ ಸಾಧ್ಯ. ಹಿಂದೂ ಮುಸಲ್ಮಾನರಲ್ಲಿ, ಮೈತ್ರಿ ಭಾವ ಉಂಟು ಮಾಡಲು, ರಾಜಕೀಯದಿಂದ ಹೊರಗಿರುವ ಕೋಮುವಾರು ವಿಷಯದಿಂದ ದೂರವಿರುವ, ನಿಸ್ವಾರ್ಥ ವ್ಯಕ್ತಿಗಳು ಬೇಕು. ಈ ಪವಿತ್ರ ಕೆಲಸದಲ್ಲಿ, ತನ್ನಂತಹವಳಿಗೂ ಪಾತ್ರವಿದೆ ಎಂದುಕೊಂಡು ಶಾರದೆ ಶಾಂತಿ ಸ್ಥಾಪನೆಗಾಗಿ ಟೊಂಕ ಕಟ್ಟಿದಳು.

ಸರಕಾರದವರು ಈ ಮೊದಲೇ ಪ್ರತಿಯೊಂದು ಬಡಾವಣೆಯಲ್ಲಿಯೂ ಒಂದೊಂದು ಶಾಂತಿರಕ್ಷಣ ಸಮಿತಿಗಳನ್ನು ಏರ್ಪಡಿಸಿದ್ದರು. ಒಂದೊಂದಕ್ಕೂ ಶಾಂತಿ ಪ್ರಚಾರಕ್ಕಾಗಿ, ವಾಹನ ಸೌಲಭ್ಯ ಹಾಗೂ ಗಾಯಾಳುಗಳಿಗೆ ಔಷಧೋಪಚಾರ ಮಾಡಲು ಪ್ರಥಮ ಚಿಕಿತ್ಸೆ ಸೌಕರ್ಯಗಳನ್ನು ಕಲ್ಪಿಸಿದ್ದರು. ಸಮಿತಿಯ ಸದಸ್ಯರು ಗಲಭೆಯ ಪ್ರದೇಶಗಳಲ್ಲಿ, ಕೋಮುವಾರು ಐಕ್ಯತೆಯ ಬಗ್ಗೆ ಭಾಷಣ ಮಾಡಿ, ಆ ಮೂಲಕ ಗಲಭೆಗಾರರ ಮನೋಭಾವ ಬದಲಾಯಿಸಲು ಪ್ರಯತ್ನಿಸುತ್ತಿದ್ದರು.

ಶಾರದೆ ನಗರದ ಶಾಂತಿರಕ್ಷಣ ದಳದ ಅಧಿಕಾರಿಗಳನ್ನು ಭೇಟಿ ಮಾಡಿ ಶಾಂತಿ ದಳದ ಸದಸ್ಯೆಯಾಗಿ ಸೇರಿಕೊಂಡಳು.

ಶಾಂತಿ ದಳಕ್ಕೆ ಸೇರಿಕೊಂಡ ಮೇಲೆ, ಶಾರದೆಯ ಗಮನ ಮೊದಲು

ಹರಿದುದೆಂದರೆ, ಬೊಂಬಾಯಿಯ ಕೊಳಚೆ ಪ್ರದೇಶಗಳ ಕಡೆಗೆ, ಬೊಂಬಾಯಿಯ ನೂರೆಂಟು ಗಿರಣಿಗಳಲ್ಲಿ ಕೆಲಸ ಮಾಡುತ್ತಿದ್ದ ಕೂಲಿಕಾರರಿಗೆ ಇರಲು ಸರಿಯಾದ ಮನೆಗಳಿಲ್ಲದೆ, ಊಟ ಮಾಡಲು ಸಾಕಷ್ಟು ಆಹಾರವಿಲ್ಲದೆ, ಪಶು ಪ್ರಾಣಿಗಳಂತೆ ಜೀವಿಸುತ್ತಿದ್ದರು. ನಗರ ಸಭೆಯ ದೃಷ್ಟಿ ಎಲ್ಲವೂ, ಶ್ರೀಮಂತರು ವಾಸಿಸುವ ಬಡಾವಣೆಗಳ ಶುಚಿ, ಅಂದಚೆಂದಗಳಿಗೆ ಮೀಸಲಾಗಿರುವಾಗ ಬೊಂಬಾಯಿಯ ಗಲ್ಲಿಗಳಲ್ಲಿ, ಕೊಚ್ಚೆಯ ಕ್ರಿಮಿಗಳಂತೆ ಜೀವನ ಸಾಗಿಸುತ್ತಿರುವ ಆ ದರಿದ್ರರ ಕಡೆಗೆ ಹೇಗೆ ಹರಿದೀತು? ಆ ಕೂಲಿಕಾರರೋ ದಿನದ ಕೆಲಸದಿಂದ ಬಳಲಿ ಮನೆಗೆ ಬಂದರೆ, ಸರಿಯಾದ ಆಹಾರವಿಲ್ಲದೆ, ಕುಡಿತ, ಅಫೀಮಿನ ಸೇವನೆ ಮೊದಲಾದ ದುರ್ವ್ಯಸನಗಳಿಗೆ ಬಲಿಯಾಗಿ, . ಸಣ್ಣಪುಟ್ಟ ಕಾರಣಗಳಿಗೆಲ್ಲಾ, ಜನರ ಮೇಲೆ ಆಕ್ರಮಣ ಮನೋಭಾವ ತೋರಿಸುವರು. ಇಂಥ ಜನರನ್ನು ಉದ್ರೇಕಗೊಳಿಸುವುದು ಒಂದು ಕಷ್ಟವೇ?

ಶಾರದೆ ಕಾರ್ಮಿಕ ವರ್ಗದ ಸ್ಥಿತಿಗತಿಗಳನ್ನು ಕೂಲಂಕಷವಾಗಿ ತಿಳಿದುಕೊಳ್ಳಲು ಅನೇಕ ಕಾರ್ಮಿಕ ಸಂಘಗಳಿಗೆ ಭೇಟಿ ಕೊಟ್ಟಳು. ಕಾರ್ಮಿಕರ ಜೀವನದ ಮಟ್ಟವನ್ನು ಕಂಡು ಕೂಲಿಕಾರರು ಗಿರಣಿಗಳಿಗೆ ಶರಣು ಬರುವ ಬದಲು, ತಾಯಿ ವಸುಂಧರೆಗೆ ಶರಣು ಬಂದಿದ್ದರೆ, ಅವರ ಜೀವನ ಎಷ್ಟೋ ಮೇಲಾಗಿರುತ್ತಿತ್ತು ಎಂದುಕೊಂಡಳು. ಅವಳೆಂದೂ ಆ ಬಗೆಯ ಬಡತನ, ಹೊಲಸು ಜೀವನ ಕಂಡಿರಲಿಲ್ಲ. ಸರಕಾರದ ಹಾಗೂ ಮಿಲ್ ಮಾಲೀಕರ ದೃಷ್ಟಿಯಲ್ಲಿ ಕೂಲಿಕಾರರು ಮನುಷ್ಯರೇ? ಯಂತ್ರದ ಗುಲಾಮರಾಗಿ, ಅತ್ಯುತ್ಪಾದನೆಯ ಮಾರಣ ಹೋಮದಲ್ಲಿ ಮನುಷ್ಯತ್ವವನ್ನೇ ಬಲಿ ಕೊಡುತ್ತಿರುವ ಕೂಲಿಕಾರರು ಮನುಷ್ಯರೇ? ಅದೇ ಸಂದೇಹ.

ಕೂಲಿಕಾರರ ಬಡತನಕ್ಕೆ ಸರಕಾರ ಅನುಸರಿಸಿದ ನೀತಿ—ಅನಾದರ ಒಂದು ಪಾಲಾದರೆ, ಶ್ರೀಮಂತ ವರ್ಗದವರ ಧೋರಣೆ ಎರಡು ಪಾಲು. ತಾವು ಕೂಲಿಕಾರರ ಬೆವರಿನಿಂದ ಶ್ರೀಮಂತರಾಗಿರುವರೆಂಬುದನ್ನು ಅರಿತಿದ್ದರೂ, ಅವರಿಗೆ ಕೂಲಿಕಾರರೆಂದರೆ ಕಸಕ್ಕಿಂತ ಕಡೆ! ಅವರು ಹೆಚ್ಚು ಕೂಲಿ ಕೇಳಿದರೆ ಕೆಲಸದಿಂದ ವಜಾ ಮಾಡುವರು. ಹತ್ತು ಜನ ಕೂಲಿಕಾರರು ಒಟ್ಟುಗೂಡಿ ಕೇಳಿದರೆ, 'ಲಾಕ್ ಔಟ್' ಬೊಂಬಾಯಿಯಂತಹ ನಗರಗಳಲ್ಲಿ ದುಡಿಯದೆ, ಒಂದು ದಿನ ನೂಕುವುದೆಂದರೆ ಸುಮ್ಮನಾಯಿತೇ? ಕಾರ್ಮಿಕರು ಮಿಲ್

ಮಾಲೀಕರು ಕೊಡುವಷ್ಟು ಕೂಲಿಯೇ ಕೊಡಲೆಂದು ಮತ್ತೆ ಕೆಲಸಕ್ಕೆ ಹಿಂದಿರುಗುತ್ತಾರೆ. ಆಗ ಮಿಲ್ ಮಾಲೀಕರು ಹೇಳಿದ್ದೇ ವೇದವಾಕ್ಯ !

ಶಾರದೆ ಮಿಲ್ ಮಾಲೀಕರು ಕೂಲಿಕಾರರ ತಿಕ್ಕಾಟವನ್ನು ಸೂಕ್ಷ್ಮವಾಗಿ ಅವಲೋಕಿಸಿ, ಕಾರ್ಮಿಕರ ನ್ಯಾಯವಾದ ಬೇಡಿಕೆಗಳು ಈಡೇರದೇ ಇರಲು ಅವರಲ್ಲಿಯೇ ಇರುವ ಮನಸ್ತಾಪ, ಅಂತಃಕಲಹಗಳೇ ಕಾರಣವೆಂದು, ಕೂಲಿಕಾರರ ಸಂಘಟನೆಯ ಅವಶ್ಯಕತೆಯನ್ನು ಕುರಿತು ಪ್ರಚಾರಮಾಡಿದಳು.

ಈ ಎಲ್ಲ ಕೆಲಸಗಳಲ್ಲಿ ಶಾರದೆಗೆ ಹೇಳಿಕೊಳ್ಳುವ ಯಶಸ್ಸು, ಜಯ ಸಿಗದಿದ್ದರೂ, ತನ್ನ ಕೆಲಸದ ಬಗ್ಗೆ ಅವಳಿಗೇ ಆತ್ಮತೃಪ್ತಿಯಿತ್ತು.

ಶಾರದೆಯಂತಹ ನಿಸ್ವಾರ್ಥ ವ್ಯಕ್ತಿಗಳ ದುಡಿಮೆಯ ಫಲವೋ ಎನ್ನುವಂತೆ, ಕೆಲವು ದಿನ ನಗರದಲ್ಲಿ ಯಾವ ಗಲಭೆ ನಡೆಯಲಿಲ್ಲ. ಆದರೆ ದೇಶದ ಯಾವುದೋ ಮೂಲೆಯಲ್ಲಿ ಉದ್ರಿಕ್ತರಾದ ಮುಸಲ್ಮಾನರ ಗುಂಪೊಂದು ಊರಿನ ಹೈಸ್ಕೂಲಿನ ಮೇಲೆ ಧಾಳಿ ಇಟ್ಟಿತಂತೆ. ಪುಂಡರು, ಶಾಲೆಯ ಹೆಣ್ಣುಮಕ್ಕಳನ್ನು ರಕ್ಷಿಸಲು ಹೋದ ಉಪಾಧ್ಯಾಯನ ತಲೆಯನ್ನು ಕತ್ತರಿಸಿ ಹಾಕಿದರಂತೆ. ಈ ಸುದ್ದಿ ಪೇಪರಿನಲ್ಲಿ ಪ್ರಕಟವಾಯಿತು. ಸರಿ. ಬೊಂಬಾಯಿಯಲ್ಲಿಯೂ ಅದರ ಪ್ರತಿಕ್ರಿಯೆ ಕಾಣಿಸಿಕೊಂಡಿತು. ನಗರದ ನಾನಾಕಡೆ, ಶಾಂತ ಪರಿಸ್ಥಿತಿ ಕದಡಿ, ಕೋಮುವಾರು ಘರ್ಷಣೆಗಳಾಗುವ ಸೂಚನೆ ಕಾಣಿಸಿತು........ ಆದರೆ ಬಡಿದಾಟಕ್ಕೊಂದು ಕುಂಟು ನೆಪ ಬೇಕಲ್ಲ ?

ಪರೇಲದಲ್ಲಿ ಪಠಾಣನೊಬ್ಬನು ಚಮ್ಮಾರನೊಬ್ಬನಿಗೆ ಚಪ್ಪಲಿ ಸರಿಮಾಡಿದ ಕೂಲಿ ಕೊಡಲಿಲ್ಲವಂತೆ. ಚಮ್ಮಾರ ಕೂಲಿ ಕೇಳಿದಾಗ ಅವನಿಗೆ ಚಾಕುವಿನ ಇರಿತ ಸಿಕ್ಕಿತಂತೆ! ಸರಿ. ಹಿಂದುಗಳನ್ನು ಕೆರಳಿಸಲು ಇಷ್ಟೇ ಸಾಕಾಯಿತು. ಹಿಂದುಗಳು ಗುಂಪು ಕಟ್ಟಿಕೊಂಡು ಪಠಾಣನನ್ನು ಆ ಸ್ಥಳದಲ್ಲಿಯೇ ಪೂರೈಸಿದರು. ಈ ಸುದ್ದಿಯನ್ನು ಕೇಳಿದ ಮುಸಲ್ಮಾನರು ಆಯುಧಪಾಣಿಗಳಾಗಿ ಯುದ್ಧಕ್ಕೆ ಬಂದರು. ಹಿಂದೂಗಳೂ ಅದಕ್ಕೆ ಸನ್ನದ್ಧರಾಗಿಯೇ ಇದ್ದರು. ಹೋರಾಟಕ್ಕೆ ಆರಂಭವಾಯಿತು. ಹಿಂದುಗಳು ಅಧಿಕ ಸಂಖ್ಯೆಯಲ್ಲಿ ಇದ್ದುದರಿಂದ ಮುಸಲ್ಮಾನರು ಹಿಂದುಗಳ ಕೈಲಿ ಪೆಟ್ಟು ತಿಂದು ಕಾಲಿಗೆ ಬುದ್ಧಿ ಹೇಳಿದರು. ಪೋಲೀಸಿನವರು ಆ ಸ್ಥಳಕ್ಕೆ ಬರುವ ವೇಳೆಗೆ, ಹಿಂದೂಗಳೂ ಆ ಸ್ಥಳದಿಂದ ಮಾಯವಾಗಿದ್ದರು. ಅಲ್ಲಿ ಇದ್ದವರೆಂದರೆ ಬಡಿದಾಟದಲ್ಲಿ ಪ್ರಜ್ಞೆ ತಪ್ಪಿ ನೆಲಕ್ಕೆ

ಉರುಳಿದವರು ತೀವ್ರ ಗಾಯ ಹೊಂದಿರುವರು. ಅವರನ್ನು ಆಸ್ಪತ್ರೆಗಳಿಗೆ ಸಾಗಿಸಿ ಆ ಸ್ಥಳದಲ್ಲಿ ಕರ್ಫ್ಯೂ ಆಜ್ಞೆ ಹಾಕಲಾಯಿತು.

ಪರೇಲದಲ್ಲಿ ಕೋಮುವಾರು ಘರ್ಷಣೆಗಳಾದ ಸುದ್ದಿ ಕ್ಷಣಮಾತ್ರದಲ್ಲಿ ಎಲ್ಲೆಡೆಗೂ ಹಬ್ಬಿತು. ಕೋಮುವಾರು ಜಗಳಕ್ಕೆ ಕಾರಣವಿಲ್ಲದಿದ್ದ ಬಡಾವಣೆ ಗಳಲ್ಲಿಯೂ, ಕೋಮುವಾರು ಬಡಿದಾಟಗಳಾದವು. ಹಿಂದೂ ಮುಸಲ್ಮಾನ ಪುಂಡರು ಕೈಗೆ ಸಿಕ್ಕಿದವರನ್ನು ಚೂರಿಯಿಂದ ಇರಿದರು. ಮುಖ, ಮೋತಿ ಎನ್ನದೆ ಬಡಿದರು. ತಮಗೆ ಬೇಕಾದವರ ಮನೆಗಳನ್ನು ಲೂಟಿಮಾಡಿದರು.

ಅದೇನು ಗ್ರಹಚಾರವೋ—ಆ ದಿನ ಕಿಟ್ಟಣ್ಣ ಸಂಜೆಯಾಗುತ್ತಲೇ ಮನೆಗೆ ಬಂದುಬಿಡುತ್ತಿದ್ದವನು ಮನೆಗೆ ಹಿಂದಿರುಗುವಾಗ ರಾತ್ರಿ ಎಂಟರ ಸಮಯ ವಾಗಿತ್ತು. ಕಿಟ್ಟಣ್ಣ ಲಗುಬಗೆಯಿಂದ ಮನೆಯ ಹಾದಿ ಹಿಡಿದ. ದಾರಿಯಲ್ಲಿ ಬರುತ್ತಿರುವಾಗ ಹಠಾತ್ತನೆ ಓಣಿಯ ಒಂದು ದಿಕ್ಕಿನಿಂದ 'ಪಾಕೀಸ್ಥಾನ ಜಿಂದಾಬಾದ್, ಅಲ್ಲಾಹೋ ಅಕ್ಬರ' ಎನ್ನುವ ಜಯಘೋಷಣೆ ಕೇಳಿ ಬಂತು. ಕಿಟ್ಟಣ್ಣನಿಗೆ ಅದು ಮುಸಲ್ಮಾನರ ಗುಂಪೆಂದು ತಕ್ಷಣ ತಿಳಿಯಿತು. ಅವರ ಜೈಕಾರಗಳ ಕಾರಣವೂ ಗೊತ್ತಾಯಿತು. ಒನ್ಮೆ ಸೋತು ಹಿಮ್ಮೆಟ್ಟಿದ್ದ ಮುಸಲ್ಮಾರು ಈಗ ಅಧಿಕ ಸಂಖ್ಯೆಯಲ್ಲಿ ಆಯುಧಪಾಣಿಗಳಾಗಿ, ಹಿಂದುಗಳ ಮೇಲೆ ಏರಿ ಹೋಗುವ ಆರ್ಭಟ ಅದು. ಇಂಥ ಗುಂಪಿನ ಕೈಲಿ ಸಿಕ್ಕಿಕೊಂಡರೆ ತನ್ನ ಹಣೆಯ ಬರಹ ನೆಟ್ಟಗೆ ಆಗಲಿಕ್ಕಿಲ್ಲವೆಂದು ಅವನು ಕಾಲಿಗೆ ಬುದ್ಧಿ ಹೇಳಿ ಬೇಗ ಬೇಗನೆ ಹೆಜ್ಜೆಹಾಕಿದ. ಇದೇ ವೇಳೆಗೆ ಎದುರು ದಿಕ್ಕಿನಿಂದ ಹಿಂದುಗಳ ಗುಂಪೊಂದು ಜಯಕಾರ ಮಾಡುತ್ತಾ ಆಯುಧ ಪಾಣಿಗಳಾಗಿ ಓಡಿಬರುತ್ತಿ ದ್ದರು. ಅವರನ್ನು ಕಂಡು ಕಿಟ್ಟಣ್ಣನಿಗೆ ಹೋದ ಜೀವ ಮರಳಿ ಬಂದಂತಾ ಯಿತು. 'ಇನ್ನು ಭಯವಿಲ್ಲ. ತನ್ನ ರಕ್ಷಣೆಗೆ ಹಿಂದುಗಳಿದ್ದಾರೆ' ಎಂದು ಕೊಂಡು ಹಿಂದಿರುಗಿ ನೋಡುವಾಗ ಕಿಟ್ಟಣ್ಣ ಮುಸಲ್ಮಾನರ ಕಣ್ಣಿಗೆ ಬಿದ್ದ. ಅವರು 'ಹೊಡೆಯಿರಿ! ಬಡಿಯಿರಿ!' ಎಂದು ಕೂಗಿಕೊಳ್ಳುತ್ತಾ ಕಿಟ್ಟಣ್ಣನನ್ನು ಬೆನ್ನಟ್ಟಿದರು. ಕಿಟ್ಟಣ್ಣ ನಾಗಲೋಟದಲ್ಲಿ ಓಡಿದ—ಜೀವದ ಹಂಗು ತೊರೆದು ಓಡಿದ. ಇದೇ ವೇಳೆಗೆ ಎದುರು ದಿಕ್ಕಿನಿಂದ ಬರುತ್ತಿದ್ದ ಹಿಂದುಗಳೂ ಓಡುತ್ತ ಬಂದು ಮುಸಲ್ಮಾನರ ಮೇಲೆ ಬಿದ್ದರು. ಕಿಟ್ಟಣ್ಣ ಎರಡು ಗುಂಪಿನ ನಡುವೆ ಸಿಕ್ಕಿಕೊಂಡು ಬಿಟ್ಟ. ಮದ್ದಾನೆಯ ಕಾಲುತುಳಿತಕ್ಕೆ ಸಿಕ್ಕಿದ ಇರುವೆಯಂತಾ

ಗಿತ್ತು ಅವನ ಸ್ಥಿತಿ. ಕಿಟ್ಟಣ್ಣನಿಗೆ ತಾನು ಜನರ ಗುಂಪಿನಲ್ಲಿ ಸಿಕ್ಕಿಕೊಂಡ ದ್ದೊಂದು ಗೊತ್ತು. ಮುಂದಾದುದು ಅವನಿಗೆ ತಿಳಿಯಲಿಲ್ಲ. ಅವನಿಗೆ ಪ್ರಜ್ಞೆ ಬಂದು ಎಚ್ಚತ್ತಾಗ, ಅವನು ಸಾರ್ವಜನಿಕ ಆಸ್ಪತ್ರೆಯಲ್ಲಿ ಬ್ಯಾಂಡೇಜುಗಳ ಮುದ್ದೆಯಾಗಿ ಮಲಗಿದ್ದ.

ಕಿಟ್ಟಣ್ಣ ಎಚ್ಚೆತ್ತ ಸುದ್ದಿಯನ್ನು ಕೇಳಿ, ಡಾಕ್ಟರು ಓಡಿಬಂದು ಅವನನ್ನು ಅಲುಗಿಸಿ, ಎದೆಮುಟ್ಟಿ ನೋಡಿದರು. ಮೈ ಅಲುಗಿದುದರಿಂದ ಕಿಟ್ಟಣ್ಣನಿಗೆ ನೋವಾಗಿ ಅವನು ನರಳುವ ಧ್ವನಿಯನ್ನು ಹೊರಡಿಸಿದ. ಅದನ್ನು ಆಲಿಸಿ ಡಾಕ್ಟರಿಗೆ ತುಂಬಾ ಸಂತೋಷವಾಯಿತು. ಅವರಿಗೆ ಕಿಟ್ಟಣ್ಣ ಬದುಕುವನೆಂದು ಖಂಡಿತ ನಂಬಿಕೆಯಿರಲಿಲ್ಲ. ಕಿಟ್ಟಣ್ಣನನ್ನು ಗಲಭೆ ನಡೆದ ಜಾಗದಿಂದ ಆಸ್ಪತ್ರೆಗೆ ತಂದು ಅವನ ಗಾಯಗಳನ್ನು ತೊಳೆದು ಔಷಧಿ ಹಾಕಿ, ಪಟ್ಟಿಕಟ್ಟಿ ಮಂಚದ ಮೇಲೆ ಮಲಗಿಸಿ, ಆರೆಂಟು ತಾಸುಗಳಾದರೂ, ಕಿಟ್ಟಣ್ಣನಿಗೆ ಪ್ರಜ್ಞೆ ಬಂದಿರಲಿಲ್ಲ. ಎಲ್ಲರೂ ಕಿಟ್ಟಣ್ಣನ ಆಸೆ ಪೂರೈಸಿತೆಂದು ತಿಳಿದಿದ್ದರು. ಪಾಪ ಅವನ ಮನೆಯವರಿಗೆ ಸುದ್ದಿಯನ್ನು ಕೊಡಲು ಅವನು ಇಂತಹ ಮನೆಯವನು ಎಂದು ತಿಳಿಸುವ ಯಾವ ಬರಹ ಅವನ ಮೈಮೇಲೆ ಇರಲಿಲ್ಲ. ಹೀಗಾಗಿ ಡಾಕ್ಟರಾದಿಯಾಗಿ ಎಲ್ಲರೂ ಕಿಟ್ಟಣ್ಣನ ಬಗ್ಗೆ ಆಸಕ್ತಿ ಹೊಂದಿದ್ದರು—ಅವನು ಎಚ್ಚೆತ್ತರೆ ಅವನ ಮನೆಯ ವಿಳಾಸ ತಿಳಿದುಕೊಂಡು ಮನೆಯವರಿಗೆ ಸುದ್ದಿ ಕೊಡುವ ಆಸೆಯಿಂದ.

ಡಾಕ್ಟರು ಕಿಟ್ಟಣ್ಣನನ್ನು ಅಲುಗಿಸಿದರು. ಕಿಟ್ಟಣ್ಣನಿಗೆ ಮೈ ಕೈ ಎಲ್ಲಾ ಬೆಂಕಿಯಲ್ಲಿ ಬೇಯುತ್ತಿರುವಂತೆ ತೋರುತ್ತಿತ್ತು. ದೇಹದ ಪ್ರತಿಯೊಂದು ಭಾಗ ದಲ್ಲಿಯೂ, ಸಹಿಸಲಾಗದ, ಕಿತ್ತು ತಿನ್ನುವ ನೋವು. ಕಿಟ್ಟಣ್ಣ ಕಣ್ಣು ಬಿಡಲು ನೋಡಿದ ಸಾಧ್ಯವಾಗಲಿಲ್ಲ. ಹಣೆಯಲ್ಲಿ ಮೂರು ನಾಲ್ಕು ಕಡೆ ತೀವ್ರಗಾಯ ಗಳಾಗಿದ್ದುದರಿಂದ ಕಣ್ಣಿನ ಪ್ರದೇಶವನ್ನು ಬ್ಯಾಂಡೇಜು ಪಟ್ಟಿಯಿಂದ ಮರೆ ಮಾಡಿದ್ದರು. ಅವನು ಕೈಯಿಂದ ಮುಖವನ್ನು ಮುಟ್ಟಿಕೊಳ್ಳಲು ನೋಡಿದ. ಕೈ ಭಾರವಾಗಿದ್ದುದರಿಂದ ಎತ್ತಲಾಗಲಿಲ್ಲ. ಕೈಗೆ ದೊಣ್ಣೆಯೊಂದರ ಪೆಟ್ಟು ಬಲವಾಗಿ ಬಿದ್ದು ಮೂಳೆ ಮುರಿದಿತ್ತು. ಪಕ್ಕಕ್ಕೆ ಹೊರಳಿದ 'ಅಯ್ಯೋ' ಎಂದು ಚೀರಿದ. ಬೆನ್ನಿನಲ್ಲಿ ಅಂಗೈ ಅಗಲದ ಗಾಯ, ಯಾವನೋ ಚೂರಿ ಹಾಕಿದ್ದುದರಿಂದ ಉಂಟಾಗಿತ್ತು. ಚಾಚಿದ ಕಾಲನ್ನು ಕದಲಿಸಲು ಅವನಿಂದ

ಸಾಧ್ಯವಾಗಲಿಲ್ಲ. ಅವು ಜನರ ಕಾಲು ತುಳಿತಕ್ಕೆ ಸಿಕ್ಕಿ ಜಜ್ಜಿ ಹೋಗಿದ್ದವು. ಕಾಲು ಬೆರಳುಗಳು ಒಂದೆರಡು ಕಡೆ ಸ್ಥಳಾಂತರಿಸಿ ಬಿಟ್ಟಿದ್ದವು. ಹೀಗೆ ಅಡಿಯಿಂದ ಮುಡಿಯ ತನಕ ಗಾಯಗೊಂಡಿದ್ದ ಕಿಟ್ಟಣ್ಣ, ಮನುಷ್ಯನ ಆಕೃತಿಯನ್ನು ಕಳೆದುಕೊಂಡು ಬಟ್ಟೆಯ ಮುದ್ದೆಯಂತೆ ಕಾಣುತ್ತಿದ್ದ.

ಡಾಕ್ಟರು ಮೃದುವಾಗಿ ಕಿಟ್ಟಣ್ಣನನ್ನು ತಟ್ಟಿ ನೋವು ಹೇಗಿದೆ ಎಂದು ಕೇಳಿದರು. ಅನಂತರ ಕಿಟ್ಟಣ್ಣನ ಮನೆಯ ವಿಳಾಸ ಕೇಳಿ ತಿಳಿದುಕೊಂಡು ಮನೆಯವರಿಗೆ ಚೀಟಿ ಬರೆದು ಕಳುಹಿಸಿದರು.

ಆಳು ಚೀಟಿಯನ್ನು ತಂದಾಗ ಶಾರದೆ ಸುದರ್ಶನನಿಗೆ ಬಟ್ಟೆಹಾಕಿ ಸ್ಕೂಲಿಗೆ ಕಳುಹಿಸಿಕೊಡುವ ಸಿದ್ಧತೆಯಲ್ಲಿದ್ದಳು. ಅವಳು ಕಾಗದವನ್ನು ಕಂಡು ಗೊಂಬೆಯಂತೆ ಕುಳಿತುಬಿಟ್ಟಳು. ಮುಖ ನಿಸ್ತೇಜವಾಯಿತು. ಕೂಡಲೇ ಆಸ್ಪತ್ರೆಗೆ ಹೋಗಬಯಸಿದಳು. ತಾಯಿಯ ಮಾರ್ಪಾಡನ್ನು ಕಂಡು 'ಏನಮ್ಮ ಆ ಕಾಗದ' ಎಂದು ಪ್ರಶ್ನಿಸಿದ ಸುದರ್ಶನ. "ಏನೂ ಇಲ್ಲ ಮಗು—ನೀನು ಸ್ಕೂಲಿಗೆ ಹೋಗು" ಎಂದು ಅವನನ್ನು ಸ್ಕೂಲಿಗೆ ಕಳುಹಿಸಿ, ಆಳಿನೊಡನೆ ಜನರಲ್ ಆಸ್ಪತ್ರೆಗೆ ಓಡಿದಳು.

ಕಿಟ್ಟಣ್ಣ ಹಿಂದಣ ರಾತ್ರಿ ಮನೆಗೆ ಬಾರದಿದ್ದುದರಿಂದ ಶಾರದೆಗೆ ತುಂಬಾ ಕಳವಳಕ್ಕಿಟ್ಟುಕೊಂಡಿತ್ತು ನಗರದಲ್ಲಿ ಕೋಮುವಾರು ಬಡಿದಾಟಗಳು ನಡೆದ ಸಂಗತಿಯನ್ನು ಅವಳು ಕೇಳಿದ್ದಳು. ಕಿಟ್ಟಣ್ಣ ಅವುಗಳಿಗೆ ಸಿಕ್ಕಿಕೊಂಡು ಬಿಟ್ಟಿದ್ದಾನೋ ಏನೋ ಎನ್ನುವ ವಿಚಾರ ಶಾರದೆಗೆ ಸಾವಿರ ಬಾರಿ ಬಂದಿತ್ತು. ಆದರೆ ಅದನ್ನು ದೂರ ತಳ್ಳಿದ್ದಳು. ಎಂತಹ ಕೆಟ್ಟ ಯೋಚನೆ ತನ್ನದು. ಮೋಹನರಾಯರ ಮನೆಗೆ ಹೋಗಿರಬಹುದು. ಅಲ್ಲೇ ಕತ್ತಲಾದುದರಿಂದ ನಗರದಲ್ಲಿ ಕರ್ಫ್ಯೂ ಇದ್ದುದರಿಂದ ಅವರ ಮನೆಯಲ್ಲಿ ಇದ್ದು ಬಿಟ್ಟಿದ್ದಾರೋ ಏನೋ. ಹಾಗೆ ಇದ್ದು ಬಿಟ್ಟಿದ್ದರೆ ಪಕ್ಕದ ಮನೆಯಲ್ಲಿ ಇದ್ದ ಫೋನಿನಲ್ಲಾದರೂ ತಿಳಿಸುತ್ತಿದ್ದರು. ಆದರೆ ಹಾಗೆ ತಿಳಿಸಲಿಲ್ಲ........ಏನು ಕಾರಣವೋ ಏನೋ ಎಂದುಕೊಂಡು ಇಡೀ ರಾತ್ರಿಯನ್ನು ನಿದ್ರೆಯಿಲ್ಲದೆ ಕಳೆದಿದ್ದಳು. ಬೆಳಗಾಗೆದ್ದು ದೇವರ ಫೋಟೋ ನೋಡಲೆಂದು ಗೋಡೆಗೆ ತಗುಲಿ ಹಾಕಿದ್ದ ರಾಮದೇವರ ಫೋಟೋ ನೋಡಿದಾಗ ಆ ಫೋಟೋ ಆಗಲೇ ಆಯತಪ್ಪಿ ನೆಲಕ್ಕೆ ಬಿದ್ದು ಒಡೆಯಬೇಕೆ? ಏಕೋ ಅಪಶಕುನ ಎಂದುಕೊಂಡು ಅನ್ಯಮನಸ್ಕಳಾಗಿ

ಮಗನಿಗೆ ಕಾಫಿ ತಿಂಡಿ ಮಾಡಿಕೊಟ್ಟು ಶಾಲೆಗೆ ಕಳುಹಿಸುತ್ತಿದ್ದಾಗಲೇ ಆಳು ಬಂದುದು.

ಶಾರದೆ ಒಂದೇ ಉಸಿರಿನಲ್ಲಿ ಓಡಿಬಂದು ಕಿಟ್ಟಣ್ಣನ ಮಂಚದ ಬಳಿ ನಿಂತಳು. ಕಿಟ್ಟಣ್ಣನೆಲ್ಲಿ ಎಂದು ಅವಳ ಕಣ್ಣು ಸುತ್ತಲೂ ಹುಡುಕಿದವು. ಆದರೆ ತನ್ನ ಎದುರಿಗೆ ಮಲಗಿರುವ ಬ್ಯಾಂಡೇಜಿನ ಮುದ್ದೆಯೇ ಕಿಟ್ಟಣ್ಣನೆಂದು ಅವಳಿಗೆ ಹೇಗೆ ತಿಳಿದೀತು ? ಯಾರೋ ಕಿಟ್ಟಣ್ಣನಿರುವ ಕಡೆ ಕೈತೋರಿಸಿ ಹೇಳಿದರೂ ಅವಳ ಕಣ್ಣು ಅದನ್ನು ನಂಬದಾಯಿತು. ಅವಳ ಮನಸ್ಸು, ಊಹೂಂ. ದೃಢಾಂಗನೂ, ಆಜಾನುಬಾಹುವೂ ಆಗಿದ್ದ ಕಿಟ್ಟಣ್ಣನೇ ಈತ ? ಅದು ಕರಾಳ ಸತ್ಯ! ಶಾರದೆ ನಂಬಲಿ, ಬಿಡಲಿ. ಅವನೇ ಕಿಟ್ಟಣ್ಣ—ಹಿಂದೂ ಮುಸ್ಲಿಂ ದೊಂಬಿಯಲ್ಲಿ ಸಿಕ್ಕಿ ವಿರೂಪಗೊಂಡಿರುವ ಕಿಟ್ಟಣ್ಣ !

ಶಾರದೆ ಮಂಚದ ಬಳಿ ಬೆಪ್ಪಾಗಿ ನಿಂತು ಬಿಟ್ಟಳು. ಅವಳಿಗೆ ಮಾತೇ ಹೊರಡಲಿಲ್ಲ. ಕಣ್ಣುಗಳಲ್ಲಿ ಧಾರಾಕಾರವಾದ ಕಣ್ಣೀರು. ಶಾರದೆ ಗಂಡನ ದೇಹವನ್ನು ಮೃದುವಾಗಿ ಸವರಿದಳು. ಅವಳ ಕೈಗೆ ಹತ್ತಿದುದು ಕಿಟ್ಟಣ್ಣನ ದೇಹವಲ್ಲ ಗಾಯದ ಪಟ್ಟಿಗಳು! " ಅಯ್ಯೋ ಭಗವಂತ, ನಾವು ಮಾಡಿದ ಯಾವ ಅನ್ಯಾಯಕ್ಕೆ ನಮಗೆ ಈ ಶಿಕ್ಷೆ ? " ಎಂದು ಉದ್ಗಾರ ತೆಗೆದು ಅತ್ತಳು.

ಅವಳ ಅಳುವಿನಶಬ್ದ ಸೂಕ್ಷ್ಮವಾಗಿ ಕಿಟ್ಟಣ್ಣನ ಕಿವಿಗೆ ಬಿದ್ದು, ಧ್ವನಿಯಿಂದಲೇ ಬಂದವರನ್ನು ಗುರುತಿಸುತ್ತಾ ಕಿಟ್ಟಣ್ಣ, " ಶಾರದಾ " ಎಂದ.

ಶಾರದ ಕಣ್ಣಿಗೆ ಬಿದ್ದರಲ್ಲವೇ ? ಕಣ್ಣಿಗೆ ಬೀಳದ ಶಾರದೆಯನ್ನು ಅವನ ಕೈ ಅರಸಿತು. ಶಾರದೆ ಅವನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಮುಖದಲ್ಲಿ ಮುಚ್ಚಿಟ್ಟುಕೊಂಡಳು. ಅವನ ಕೈ ಬೆರಳುಗಳು ಶಾರದೆಯ ಅಶ್ರುಜಲದಿಂದ ತೇವವಾಯಿತು. ಆಗ ಕಿಟ್ಟಣ್ಣ ನಿಧಾನವಾಗಿ ಹೇಳಿದ. " ಶಾರದ—ಶಾರದ........ಯಾಕೆ ಅಳುವೆ ? ........ನನಗೇನಾಗಿದೆ ? ........ಅಳಬೇಡ " ಎಂದು ಅವಳ ಕಣ್ಣೀರನ್ನು ಒರೆಸಿದ.

ಈ ಮಾತನ್ನು ಕೇಳಿ ಶಾರದೆಗೆ ಇನ್ನಿಷ್ಟು ಅಳುವಂತಾಯಿತು.

"ನೀನು ಅಳಬಾರದು ಶಾರದ........ ತಿಳಿದವಳಾದ ನೀನು ಹುಚ್ಚಿಯಂತೆ ಅಳುವುದೇ ? ಮಗು ಸುದರ್ಶನ ಎಲ್ಲಿ ?"

"ಕರೆತರಲಿಲ್ಲ." ಎಂದಳು ಶಾರದೆ.

"ಒಳ್ಳೆಯ ಕೆಲಸ ಮಾಡಿದೆ. ಕರೆತಂದಿದ್ದರೆ ನನ್ನ ವಿಕಾರ ಸ್ವರೂಪ ವನ್ನು ಕಂಡೇ ಆ ಮಗು ಹೆದರಿಬಿಡುತ್ತಿದ್ದ. ಅವನು ಮೊದಲೇ ಸೂಕ್ಷ್ಮ. ಈ ನೋಟ ಅವನ ಮೇಲೆ ಕೆಟ್ಟ ಪರಿಣಾಮ ಉಂಟು ಮಾಡುತ್ತಿತ್ತು. ಕರತರದೆ ಇದ್ದುದು ಒಳ್ಳೆಯದೇ ಆಯಿತು. ನಾಳೆ ನನ್ನ ಗಾಯ ವಾಸಿಯಾದ ಮೇಲೆ ಅವನಿಗೆ ತೋರಿಸಿದರಾಯಿತು. ನನ್ನ ಈ ಪರಿಸ್ಥಿತಿಯಲ್ಲಿ ಅವನನ್ನು ಇಲ್ಲಿಗೆ ಕರೆತರಬೇಡ. ತಿಳಿಯಿತೇ ?"

"ಹಾಗೆಯೇ ಆಗಲಿ." ಎಂದಳು ಶಾರದೆ.

ಇಷ್ಟು ಮಾತನಾಡುವುದರೊಳಗೆ ಕಿಟ್ಟಣ್ಣನಿಗೆ ಸಾಕು ಸಾಕಾಯಿತು. ಮಾತನಾಡಲು ಅವನು ಪಡುವ ಕಷ್ಟವನ್ನು ಕಂಡು ಶಾರದೆ ಅವನ ಬಾಯಿಯ ಮೇಲೆ ತನ್ನ ಬೆರಳನ್ನು ಇಟ್ಟು 'ಹುಷ್' ಎಂದಳು. ಕ್ಷಣಕಾಲ ಮೌನ.

ಡಾಕ್ಟರು ಅಲ್ಲಿಗೆ ಬಂದರು. ಅವರು ಕಿಟ್ಟಣ್ಣನ ಬಗ್ಗೆ ತುಂಬಾ ಸಹಾನು ಭೂತಿಯಿಂದ ಮಾತನಾಡಿ, ಪ್ರಾಣಕ್ಕೆ ಭಯವಿಲ್ಲವೆಂದೂ, ರೋಗಿಗೆ ತುಂಬಾ ವಿಶ್ರಾಂತಿ ಬೇಕೆಂದೂ ಶಾರದೆಗೆ ಹೇಳಿ ಸಮಾಧಾನಪಡಿಸಿದರು.

ಶಾರದೆ ಕಳೆಗುಂದಿದ ಮೋರೆ ಹೊತ್ತು ಮನೆಗೆ ಬಂದಾಗ ಸುದರ್ಶನ ಶಾಲೆಯನ್ನು ಮುಗಿಸಿಕೊಂಡು ಮನೆಗೆ ಹಿಂತಿರುಗಿದ್ದ.

"ಅಮ್ಮಾ........ಅಮ್ಮ....ಲೆಖ್ಖದಲ್ಲಿ ನಾನೇ ನಮ್ಮ ಕ್ಲಾಸಿಗೆಲ್ಲ ಫಸ್ಟ ಅಂತೆ ಕಾಣಮ್ಮ" ಎಂದು ಸುದರ್ಶನ ತಾಯಿಗೆ ತನ್ನ ಸಂತೋಷ ಹೇಳಿಕೊಂಡ. ತಾಯಿ ಮೌನವಾಗಿ ಆಲಿಸಿ "ಒಳ್ಳೆಯದು ಮಗು !" ಎಂದಳು ನಿರುತ್ಸಾಹದಲ್ಲಿ. ಸುದರ್ಶನನಿಗೆ ತಾಯಿಯ ಇಂದಿನ ರೀತಿ ಏಕೋ ವಿಚಿತ್ರವಾಗಿ ತೋರಿತು. ಬೆಳಗ್ಗೆ ಯಾವನೋ ತಂದುಕೊಟ್ಟ ಚೀಟಿ ಕಂಡ ಲಾಗಾಯಿತು ತಾಯಿಯ ಮುಖದಲ್ಲಿ ಕಳೆಯೇ ಇಲ್ಲ........ ಏಕೆ ?........ ಬಹುಶಃ ಅಮ್ಮನಿಗೆ ಕಿಟ್ಟಣ್ಣನ ಚಿಂತೆಯೋ ಏನೋ.

"ಅಮ್ಮ, ಅಪ್ಪ ಬೆಳಗ್ಗೆ ಮನೆಗೆ ಬಂದಿದ್ದನೇನಮ್ಮ ?"

"ಹೂಂ. "

"ಆಫೀಸಿಗೆ ಹೋದನೇನಮ್ಮ ?"

"ಹೂಂ !"

"ರಾತ್ರಿ ಎಲ್ಲಿದ್ದನಂತಮ್ಮ ?"

"ಹೂಂ "

ತಾಯಿ ಅನ್ಯಮನಸ್ಕಳಾಗಿ ಎಲ್ಲದಕ್ಕೂ 'ಹೂಂ' ಗುಟ್ಟುವುದನ್ನು ಕಂಡು ಏನೋ ನಡೆಯಬಾರದ ಅಚಾತುರ್ಯ ನಡೆದಿದೆ ಎಂದು ಅವನಿಗೆ ಅನಿಸಿತು. ಏನು ನಡೆದಿರಬಹುದು ?

"ಅಮ್ಮ ನೀನು ಯಾಕಮ್ಮ ಇವತ್ತು ಒಂದು ತರಹ ಇದ್ದೀಯ? ಸರಿಯಾಗಿ ಮಾತೇ ಆಡೋಲ್ಲ !"

ತನ್ನ ಗುಟ್ಟು ಬಯಲಾಗುವುದೆಂದು ಹೆದರಿ ಶಾರದೆ ಮಗನೊಡನೆ ಬಾಯಿ ತುಂಬಾ ಮಾತನಾಡಿ ಅವನನ್ನು ಮುದ್ದುಮಾಡಿ, ಆಡಲು ಕಳುಹಿಸಿ, ತಾನು ಅಡಿಗೆಯ ಮನೆಗೆ ಹೊರಟಳು.

ಸಂಜೆ ಮನೆಯಿಂದ ಶಾರದೆ ಗಂಡನ ಸ್ಥಿತಿಯನ್ನು ತಿಳಿದು ಬರಲು ಹೊರಟಾಗ, ಎಂದೂ ಎಲ್ಲಿಗೆ ಎಂದು ಕೇಳದಿದ್ದ ಸುದರ್ಶನ ಪ್ರಶ್ನಿಸಿದ.

"ಎಲ್ಲಿಗಮ್ಮ.... ನಾನೂ ಬರ್ತೀನಿ."

"ಆಫೀಸಿಗೆ ಹೋಗ್ತಿದೇನೆ ಮಗು" ಎಂದಳು.

ಆಫೀಸು ಎಂದರೆ "ಕೂಲಿಕಾರರ ಸಂಘ". ತಾಯಿ ಅಲ್ಲಿಗೆ ಸಾಮಾನ್ಯವಾಗಿ ಹೋಗುತ್ತಿದ್ದುದರಿಂದ ಸುದರ್ಶನನಿಗೆ ಸಂಶಯ ಬರಲಿಲ್ಲ.

"ನೀನು ಆಟ ಆಡ್ತಾ ಇರು. ನಾನು ಜೇಗನೇ ಬಂದು ಬಿಡ್ತೇನೆ" ಎಂದವಳೇ ಹೊರಟುಬಿಟ್ಟಳು.

ಸಂಜೆಯ ಹೊತ್ತಿಗೆ ಕಿಟ್ಟಣ್ಣನ ಸ್ಥಿತಿ ಎಷ್ಟೋ ಉತ್ತಮವಾಗಿದ್ದುದರಿಂದ ಶಾರದೆಗೆ ತುಂಬಾ ಸಮಾಧಾನ.

ರಾತ್ರೆ ಮಾಮೂಲು ಹೊತ್ತಿಗೆ ಕಿಟ್ಟಣ್ಣ ಮನೆಗೆ ಬಾರದೆ ಇರುವುದನ್ನು ಕಂಡು ಸುದರ್ಶನ ಕೇಳಿದ.

"ಅಮ್ಮ, ಅಪ್ಪ ಇಷ್ಟು ಹೊತ್ತಾದರೂ ಏಕಮ್ಮ ಮನೆಗೆ ಬಂದಿಲ್ಲ ?"

"ಅಕ್ಕನ ಊರಿಗೆ ಹೋಗಿದ್ದಾರೆ ಮಗು."

"ಯಾವಾಗ ಹೋದ ? ನನಗೆ ಹೇಳಲೇ ಇಲ್ಲವಲ್ಲ !" ಸುದರ್ಶನನಿಗೆ ಆಶ್ಚರ್ಯವಾಯಿತು.

"ನಿನಗೆ ಹೇಳಲು ನೀನು ಮಧ್ಯಾಹ್ನ ಸ್ಕೂಲಿಗೆ ಹೋಗಿದ್ದಿ."

ಸುದರ್ಶನನಿಗೆ ತಾಯಿಯ ಮಾತಿನಲ್ಲಿ ನಂಬಿಕೆಹುಟ್ಟದಿದ್ದರೂ ಯಾಕೋ ಸುಮ್ಮನಾದ.

ಆ ರಾತ್ರಿ ಶಾರದೆಗೆ ಏನೆಂದರೂ ನಿದ್ರೆ ಹತ್ತಲಿಲ್ಲ. ಕಣ್ಣು ಮುಚ್ಚಿದರೆ ಅವಳಿಗೆ ಕೆಟ್ಟ ಕನಸುಗಳು.

ಮಾರನೆಯ ದಿನ ಬೆಳಿಗ್ಗೆ ಮೋಹನರಾಯರು ಕಿಟ್ಟಣ್ಣ ಆಫೀಸಿಗೆ ಏಕೆ ಬರಲಿಲ್ಲವೆಂದು ಫೋನು ಮಾಡಿ ಕೇಳಿದರು. ಶಾರದೆ ಫೋನಿನಲ್ಲೇ ನಡೆದಿರುವ ಸಂಗತಿ ತಿಳಿಸಿದಳು. ಮೋಹನರಾಯರು 'ಅಯ್ಯೋ ಹೀಗಾಯಿತೇ' ಎಂದು ಗಾಬರಿಯಾಗಿ ಮನೆಗೆ ಬಂದರು. ಶಾರದೆಯಿಂದ ಎಲ್ಲ ವಿಷಯವನ್ನು ವಿವರವಾಗಿ ತಿಳಿದು ಆಸ್ಪತ್ರೆಗೆ ಹೋಗಲು ಹೊರಟರು. ಶಾರದೆ ಕಾಫಿ ಕುಡಿದು ಹೋಗಬೇಕೆಂದು ಬಲವಂತ ಮಾಡಿದಳು. ಮೋಹನರಾಯರು ವಿಧಿಯಿಲ್ಲದೆ ನಿಂತರು. ಅತ್ತ ಶಾರದೆ ಕಾಫಿ ತಯಾರಿಕೆಯಲ್ಲಿ ತೊಡಗಿರುವಾಗ ಇತ್ತ ಮೋಹನರಾಯರು ಸುದರ್ಶನನೊಡನೆ ಹರಟೆಗೆ ತೊಡಗಿದರು.

ಸುದರ್ಶನನಿಗೆ ಮೋಹನರಾಯರಲ್ಲಿ ತುಂಬಾ ಸಲಿಗೆ. ಅವರನ್ನು ಮಾವನೆಂದು ಕರೆಯುತ್ತಿದ್ದ.

"ಮಾವ.... ಅಪ್ಪ ಎಲ್ಲಿ ಮಾವ? ನಿನ್ನೆಯಿಂದ ಮನೆಗೆ ಬಂದಿಲ್ಲ!" ಎಂದು ಪ್ರಶ್ನಿಸಿದ ಸುದರ್ಶನ.

"ನಿಮ್ಮ ತಂದೆ ಆಸ್ಪತ್ರೆಯಲ್ಲಿ ಇದ್ದಾರೆ ಮಗು!"

"ಏನು! ಆಸ್ಪತ್ರೆಯಲ್ಲಿಯೇ." ಸುದರ್ಶನನಿಗೆ ವಿಸ್ಮಯ.

"ಹೌದು ಮಗು."

"ಅಪ್ಪನಿಗೆ ಏನಾಗಿದೆ?" ಅವನ ಧ್ವನಿಯಲ್ಲಿ ಗಾಬರಿಯಿತ್ತು.

"ಮೊನ್ನಿನ ಹಿಂದೂ ಮುಸ್ಲಿಂ ದೊಂಬಿಯಲ್ಲಿ ಅವರಿಗೆ ಕೊಂಚ ಪೆಟ್ಟಾಗಿದೆ........ಅದಕ್ಕೆ"

"ಹಾಗಾದರೆ........" ಮುಂದೆ ಮಾತು ಬರಲಿಲ್ಲ.

"ಏನು ಮಗು?"

"ಹಾಗಾದರೆ ಅಪ್ಪ ಅಕ್ಕನ ಊರಿಗೆ ಹೋಗಿರೋದು ಸುಳ್ಳು!"

"ಹಾಗೆಂದು ಯಾರು ಹೇಳಿದರು?"

"ಅಮ್ಮ!"

ಈ ಮಾತು ಕೇಳಿ ಮೋಹನರಾಯರಿಗೆ ಶಾರದೆ ಕಿಟ್ಟಣ್ಣನ ಸುದ್ದಿಯನ್ನು ಸುದರ್ಶನನಿಂದ ಏಕೋ ಮುಚ್ಚಿಟ್ಟಿದ್ದಾಳೆಂದು ತಿಳಿಯಿತು. ಏಕೆ ಗೋಪ್ಯವಾಗಿ ಇರಿಸಿದ್ದಾಳು? ಎಂದು ಆಲೋಚಿಸುತ್ತಿರುವಾಗಲೇ ಶಾರದೆ ಕಾಫೀ ತಂದಿತ್ತಳು. ಅದನ್ನು ಕುಡಿದು ಮೋಹನರಾಯರು ಅಲ್ಲಿಂದ ಹೊರಟುಹೋದರು.

ಅವರು ಕಣ್ಮರೆಯಾದುದೇ ತಡ. ಸುದರ್ಶನ ತಾಯಿಯ ಎದುರಿಗೆ ಬಂದು ಪ್ರಶ್ನಿಸಿದ. "ಅಮ್ಮ ಅಪ್ಪನೆಲ್ಲಿ ?"

"ಆಗಲೇ ಹೇಳಿದೆನಲ್ಲ. ಅಕ್ಕನ ಊರಿಗೆ ಹೋಗಿದ್ದಾರೆ ಅಂತ !"

"ಸುಳ್ಳು !" ಎಂದ ಸುದರ್ಶನ ನಿಷ್ಠುರ ವಾಣಿಯಲ್ಲಿ.

"ಇಲ್ಲ ಮಗು !"

"ಅಪ್ಪ, ಅಕ್ಕನ ಊರಿಗೆ ಹೋದದ್ದು ಸುಳ್ಳು. ಅವರು ಆಸ್ಪತ್ರೆಯಲ್ಲಿದ್ದಾರೆ. ನನಗೆಲ್ಲಾ ಗೊತ್ತಾಗಿದೆ !" ಎಂದ.

ಈ ಮಾತುಗಳನ್ನು ಕೇಳಿ ಶಾರದೆಯ ಮುಖ ಬಿಳುಪಾಯಿತು. "ಇಲ್ಲ ಸುದರ್ಶನ...." ಇಷ್ಟು ಹೇಳಲು ಅವಳ ಮನಸ್ಸಿಗೆ ಸಾಕಾಗಿ ಹೋಯಿತು.

"ಏನು ಇಲ್ಲ? ಸುಳ್ಳು ಹೇಳಬಾರದು ಅಂತ ನೀನೇ ನನಗೆ ಹೇಳಿದ್ದೀ. ಈಗ ನೀನೇ ನನಗೆ ಸುಳ್ಳು ಹೇಳ್ತಿದ್ದೀಯಲ್ಲಾ." ಎಂದು ತಾಯಿಯನ್ನು ದುರುದುರನೆ ನೋಡಿದ. ಆ ನೋಟಕ್ಕೆ ಶಾರದೆ ತತ್ತರಿಸಿದಳು. ಅವನ ಮಾತು ಅವಳಿಗೆ ಚಾಟಿಯಿಂದ ಹೊಡೆದಂತಾಗಿತ್ತು.

"ಸುದರ್ಶನ !" ಎಂದು ಗಟ್ಟಿಯಾಗಿ ಕೂಗಿದಳು. ಸುದರ್ಶನನ ಪುಟ್ಟ ಬಾಯನ್ನು ಮುಚ್ಚುವ ಸಾಹಸ ಅವಳದು. ಆದರೆ ಸಾಧ್ಯವಾಗಲಿಲ್ಲ.

"ಆಸ್ಪತ್ರೆಲಿರೋ ಅಪ್ಪ ಅಕ್ಕನ ಊರಿಗೆ ಹೋದ ಅಂತ ಸುಳ್ಳು ಹೇಳ್ತೀಯಲ್ಲಮ್ಮಾ........ಯಾಕಮ್ಮ ನಂಗೆ ಸುಳ್ಳು ಹೇಳಬೇಕು ?" ಎಂದು ತಾಯಿಯನ್ನು ನಿರ್ದಾಕ್ಷಿಣ್ಯವಾಗಿ ಟೀಕಿಸಿದ.

ತಾಯಿ ತಣ್ಣಗಾದಳು.

"ಸುದರ್ಶನ, ತಪ್ಪಾಯಿತು ನನ್ನ ಕಂದ. ಹೌದು ನಾನು ನಿನಗೆ ಸುಳ್ಳು ಹೇಳಿದ್ದೆ........ಕ್ಷಮಿಸು !" ಎಂದು ಮಗುವಿನ ಪುಟ್ಟ ಕೈಗಳನ್ನು ಹಿಡಿದುಕೊಂಡು ಪ್ರಾರ್ಥಿಸಿದಳು.

ಸತ್ಯ ನುಡಿಯುವವರು ಯಾರಾದರೇನು ? ಸತ್ಯಕ್ಕೆ ಅಸತ್ಯ ಮಣಿಯಲೇ ಬೇಕು.

ಸುದರ್ಶನ ತಾಯಿ ಅಳುವುದನ್ನು ಕಂಡು ತಾನೂ ಅತ್ತ. ಕಡೆಗೆ "ಅಮ್ಮಾ ನಾನೊಂದು ಮಾತು ಕೇಳಲೇನಮ್ಮ ? " ಎಂದು ದೈನ್ಯವಾಗಿ ಪ್ರಾರ್ಥಿಸಿದ.

"ಕೇಳು ಮಗು !"

"ನೀನು ಆಗಲಿ ಅಂದರೆ !"

"ಹೂಂ"

"ನಾನೂ ಇವತ್ತು ನಿಂಜೊತೇಲಿ ಅಪ್ಪನ್ನ ನೋಡೋಕೆ ಆಸ್ಪತ್ರೆಗೆ ಬರುತ್ತೇನೆ."

"ಈಗ ಬೇಡ ಮಗು."

"ಯಾಕೆ?"

"ವಾಸಿಯಾದ ಮೇಲೆ ನೋಡುವೆಯಂತೆ."

"ಊಹೂಂ, ನಾನು ಅಪ್ಪನ್ನ ಈಗಲೇ ನೋಡಬೇಕು." ಎಂದು ಅಪ್ಪನನ್ನು ನೆನೆಸಿಕೊಂಡು ಅತ್ತ, ರಗಳೆ ಮಾಡಿದ. ಹಠ ಮಾಡಿದ. ಶಾರದೆಗೆ ತಾನು ಹೇಳಿದ ಸುಳ್ಳಿನ ಅರಿವಾಗಿ, ತಪ್ಪಿಗೆ ತಕ್ಕ ಶಿಕ್ಷೆಯಂತೆ ನಿರ್ವಾಹವಿಲ್ಲದೆ ಸುದರ್ಶನನನ್ನು ಆಸ್ಪತ್ರೆಗೆ ಆ ಸಂಜೆ ಕರೆದುಕೊಂಡು ಹೋದಳು.

ಸುದರ್ಶನ ಆಸ್ಪತ್ರೆಗೆ ಬರುವ ತನಕ ಮಾತನಾಡಲಿಲ್ಲ. ಆಸ್ಪತ್ರೆಗೆ ಬಂದ ಮೇಲೆ "ಅಮ್ಮ ಅಪ್ಪನೆಲ್ಲಿ ?" ಎಂದ.

ಶಾರದೆ ಕಿಟ್ಟಣ್ಣ ಮಲಗಿದ್ದ ಮಂಚ ತೋರಿಸಿದಳು.

"ಅಲ್ಲಿ ಮಲಗಿರೋರೆ ನಿಮ್ಮ ತಂದೆ ಮಗು !"

ಈ ಮಾತನ್ನು ಕೇಳಿ ಸುದರ್ಶನನಿಗೆ ಸಿಡಿಲು ಬಡಿದಂತಾಯಿತು.

"ಹಾಂ!" ಇದೇ ಸುದರ್ಶನನ ಬಾಯಿಂದ ಹೊರಟ ಶಬ್ದ.

ಅವನು ಬಾಯರಳಿಸಿ, ಕಣ್ಣರಳಿಸಿ, ಎವೆಯಿಕ್ಕದೆ ತಂದೆಯನ್ನುನೋಡಿದ. ಅಲ್ಲಿ ಮಲಗಿರುವವರು ಯಾರು ? ಕಿಟ್ಟಣ್ಣನೇ ?.......... ಸುದರ್ಶನನಿಗೆ ಸಂಶಯವಾಯಿತು.

"ಯಾಕೆ ಮಗು? ಹಾಗೆ ನೋಡುತ್ತೀ. ಅವರೇ ನಿಮ್ಮ ತಂದೆ! ತಲೆಗೆ ಕೊಂಚ ಗಾಯವಾಗಿದೆ. ಪಟ್ಟಿಗಳನ್ನು ಕಟ್ಟಿದ್ದಾರೆ!"

ಸುದರ್ಶನ ಮಾತೇ ಆಡಲಿಲ್ಲ.

ಕಿಟ್ಟಣ್ಣ ಶಾರದೆಯ ಮಾತುಕೇಳಿ ಎಚ್ಚೆತ್ತ. ಜೊತೆಗೆ ಯಾರೋ ಬಂದಂತಿದೆ ಎಂದುಕೊಂಡು 'ಯಾರು?' ಎಂದು ಪ್ರಶ್ನಿಸಿದ.

"ಅಪ್ಪಾ....ನಾನು....ಸುದರ್ಶನ!"

ಈ ಮಾತು ಕೇಳಿ ಕಿಟ್ಟಣ್ಣ ಸ್ತಂಭೀಭೂತನಾದ. ಅವನು ಸುದರ್ಶನನನ್ನು ನಿರೀಕ್ಷಿಸಿರಲಿಲ್ಲ.

ಸುದರ್ಶನ ತಂದೆಯ ಕೈಯಲ್ಲಿ ತನ್ನ ಕೈ ಕೊಟ್ಟನು.

ಕಡೆಗೂ ಸುದರ್ಶನ ತನ್ನ ಕರಾಳ ರೂಪವನ್ನು ನೋಡಿಯೇ ಬಿಟ್ಟ! ತಾನು ಈ ಸ್ಥಿತಿಯಲ್ಲಿ ಸುದರ್ಶನನ ದೃಷ್ಟಿಗೆ ಬೀಳಬಾರದೆಂದಿದ್ದರೂ ಸುದರ್ಶನ ತನ್ನನ್ನು ಕಂಡೇ ಬಿಟ್ಟ! ಹಾಗಾದರೆ ಮಗುವಿನ ಮೇಲೆ ಇದರ ಪರಿಣಾಮವೇನೋ........ಅವನ ಭಾವನೆಗಳೇನೋ........

ಕಿಟ್ಟಣ್ಣನಿಗೆ ಯಾಕೋ ಕೆಡುಕೆನಿಸಿತು. ಅವನು ಸುದರ್ಶನನ ಹೆದರಿಕೆಯನ್ನು, ಕಳವಳವನ್ನು ಕಳೆಯಲೆಂಬಂತೆ, "ಮಗು ಸುದರ್ಶನ, ನನಗೆ ಏನೂ ಆಗಿಲ್ಲ. ತಲೆಯಲ್ಲಿ ಎಲ್ಲೋ ಕೊಂಚ ಗಾಯವಾಗಿತ್ತು. ಪಟ್ಟಿ ಕಟ್ಟಿದ್ದಾರೆ. ಇನ್ನು ಒಂದೆರಡು ದಿನಗಳಲ್ಲಿ ಗಾಯ ವಾಸಿಯಾಗಿ ಬಿಡುತ್ತೆ..........." ಎಂದು ಹೇಳಿದ.

ಸುದರ್ಶನ ಮಾತನಾಡಲಿಲ್ಲ.

ಆ ರಾತ್ರಿ ಸುದರ್ಶನ, ಊಟಕ್ಕೆಎಬ್ಬಿಸಿದಾಗ ಹಸಿವಿಲ್ಲವೆಂದು ಹೇಳಿಬಿಟ್ಟ. ಶಾರದೆ ಬಲವಂತ ಮಾಡಿದ ಮೇಲೆ ಒಂದೆರಡು ತುತ್ತು ಅನ್ನ ಬಾಯಲ್ಲಿ ಇರಿಸಿಕೊಂಡು ಮಲಗಿದ.

ಹಾಸಿಗೆಯಲ್ಲಿ ಮಲಗಿ ಒಂದೆರಡು ಗಂಟೆಗಳಾದರೂ ಸುದರ್ಶನ ನಿದ್ರೆ ಸದೆ ಇರುವುದನ್ನು ಕಂಡು ಶಾರದೆ ದೀಪ ಹೊತ್ತಿಸಿ,

"ಸುದರ್ಶನ, ಏಕೆ ನಿದ್ರೆ ಮಾಡಲಿಲ್ಲ?" ಎಂದಳು.

"ಯಾಕೋ ಬರಲಿಲ್ಲ. ಅಮ್ಮ...."

"ಹೋಗಲಿ, ನಾನೊಂದು ಕಥೆ ಹೇಳ್ತೇನೆ ಮಲಗಿಕೋ..

"ಕಥೆ ಬೇಡಮ್ಮಾ"
"ಹಾಗಾದರೆ ಹಾಡು ಹೇಳಲೇ ?"
"ಹಾಡೂ ಬೇಡಮ್ಮಾ. "
"ಇನ್ನೇನು ಹೇಳಲಿ ?"
"ನಾನೊಂದು ಮಾತು ಕೇಳಲೇನಮ್ಮಾ?"
"ಏನದು ?"
"ಅಪ್ಪನಿಗೆ ಗಾಯ ನಿಜವಾಗಿಯೂ ವಾಸಿಯಾಗುತ್ತೇನಮ್ಮಾ ?"
"ಆಗುತ್ತೆ ಮಗು "
"ಮುಖ ಮೂತಿಗೆಲ್ಲಾ ಬಟ್ಟೆ ಸುತ್ತಿದ್ದಾರಲ್ಲ ಮತ್ತೆ ?"
"ಅಲ್ಲೆಲ್ಲಾ ಗಾಯವಾಗಿದೆ ಚಿನ್ನ"
"ಅಪ್ಪನಿಗೆ ಅದೆಷ್ಟು ನೋವೋಮ್ಮಾ!"
ತಾಯಿ ಮಾತನಾಡಲಿಲ್ಲ.
"ಅಮ್ಮಾ....ಅಪ್ಪನನ್ನು ಹೊಡೆದವರು ಯಾರಮ್ಮ?"
"ಯಾರೂ ಇಲ್ಲ ಮಗು"
"ಹಾಗಾದರೆ ಗಾಯ ಹೇಗೆ ಆಯಿತು ?"
"ಒಂದೂ ಮುಸಲ್ಮಾನರ ಜೋಂಬಿಯಲ್ಲಿ ಸಿಕ್ಕಿ ಬಿದ್ದರು ಮಗು !"
"ಮುಸಲ್ಮಾನರೆಲ್ಲಾ ಕೆಟ್ಟವರೇನಮ್ಮಾ ಹಾಗಾದರೆ?"
ತಾಯಿ ಸುಮ್ಮನಿದ್ದಳು.
"ನಮ್ಮ ಕ್ಲಾಸಿನಲ್ಲಿ ಹಮೀದ ಅಂತ ಒಬ್ಬ ಇದ್ದಾನಮ್ಮ. ಅವನು ತುಂಬಾ ಒಳ್ಳೆಯವನಮ್ಮಾ....ನನ್ನ ಕಂಡರೆ ಎಷ್ಟು ಪ್ರೀತಿ ಗೊತ್ತೆ ?"
"ಮುಸಲ್ಮಾನರೆಲ್ಲಾ ಕೆಟ್ಟವರಲ್ಲ ಮಗು !"
"ಹಾಗಾದರೆ ಅಪ್ಪನನ್ನು ಯಾಕೆ ಹೊಡೆದರು ? ಅಪ್ಪ ಅವರಿಗೆ ಏನು ಮಾಡಿದ್ದ ?"
"ಏನೂ ತಪ್ಪು ಮಾಡದಿದ್ದರೂ ಕೆಲವು ಸಲ ಶಿಕ್ಷೆಯಾಗುತ್ತೆ."
"ತಪ್ಪು ಮಾಡಿದವರಿಗಲ್ಲವೇನಮ್ಮಾ ಶಿಕ್ಷೆ?"
"ನಮ್ಮ ಜಗತ್ತಿನಲ್ಲಿ ನ್ಯಾಯ ಅನ್ಯಾಯ ಎಲ್ಲವೂ ಒಂದೇ ಮಗು."
"ಹಾಗಾದರೆ ಈ ಜಗತ್ತು ತುಂಬಾ ಕೆಟ್ಟದ್ದು ಅಲ್ಲವೇನಮ್ಮಾ!"

"ಹೌದು ಮಗು."

"ಇಂತಹ ಕೆಟ್ಟ ಜಗತ್ತಿನಲ್ಲಿ ನಾವು ಏಕೆ ಇರಬೇಕಮ್ಮ?"

ಈ ಪ್ರಶ್ನೆಯನ್ನು ಕೇಳಿ ಶಾರದೆ ಹೌಹಾರಿದಳು. ತಾನು ಮಾತಿನಲ್ಲಿ ಏನು ಹೇಳಿ ಬಿಟ್ಟೆನೊ ಎಂದು ಗಾಬರಿಯಾದಳು. ಮಗುವಿನ ತಲೆಯಲ್ಲಿ ಇಂತಹ ವಿಷಯಗಳನ್ನು ತುಂಬುವ ತಾನು ಎಂತಹವಳು ಎಂದುಕೊಳ್ಳುತ್ತಾ, ಸುದರ್ಶನನನ್ನು ಬಲವಂತವಾಗಿ ಮಲಗಿಸಿ, " ನಾಳೆ ಮಾತನಾಡೋಣ ಸುದ ರ್ಶನ....ಈಗ ಮಲಗಿಕೋ" ಎಂದು ದೀಪವಾರಿಸಿ ಮಲಗಿದಳು.

ಸುದರ್ಶನ ಕೊಂಚ ಹೊತ್ತು ಹಾಸಿಗೆಯಲ್ಲಿ ಹೊರಳುತ್ತಿದ್ದು ಕಡೆಗೆ ನಿದ್ರೆ ಹೋದ.

ಬೆಳಗಾಗ ಸುದರ್ಶನ ಏಳುವಾಗ ಅವನ ಮೈ ಕಾದು ಕೆಂಡವಾಗಿತ್ತು. ರಾತ್ರಿ ಎಲ್ಲಾ ಶಾರದೆ ಹೇಳಿದ್ದ ಗಹನ ವಿಚಾರಗಳು ಅವನ ಎಳೆಯ ತಲೆಯನ್ನು ತುಂಬಿತ್ತು. ಅವುಗಳ ಸತ್ಯಾಸತ್ಯತೆಯನ್ನು ಒರೆಯಿಟ್ಟು ನೋಡುವುದರಲ್ಲಿ ಆ ಮಗುವಿನ ಮನಸ್ಸಿಗೆ ಎಣಿಕೆಗೂ ಮೀರಿದ ಶ್ರಮ, ದಣಿವು ಉಂಟಾಗಿತ್ತು. ಅದೇ ಜ್ವರಕ್ಕೆ ಕಾರಣವಾಯಿತು. ಅವನು ಏನೇನೋ ಕನವರಿಸಿಕೊಳ್ಳು ತ್ತಿದ್ದ.

ಶಾರದೆ ಹಾಸಿಗೆಯಲ್ಲಿ ಬಳಲುತ್ತಿದ್ದ ಸುದರ್ಶನನ ತಲೆಯನ್ನು ಮುಟ್ಟಿ ನೋಡಿ ಗಾಬರಿಯಾದಳು. ಅವಳು ಸುದರ್ಶನನನ್ನು ಎತ್ತಿಕೊಂಡು ಆಸ್ಪತ್ರೆಗೆ ಓಡಿದಳು. ಸುದರ್ಶನನಿಗೆ ಜ್ವರದ ಉಷ್ಣಾಂಶ ಹೆಚ್ಚಾಗಿದ್ದುದರಿಂದ ಅವನನ್ನು ಆಸ್ಪತ್ರೆಯಲ್ಲೇ ಬಿಟ್ಟುಬರಬೇಕಾಯಿತು. ಶಾರದೆ ಮನೆಗೆ ಹೋಗದೆ ಜನರಲ್ ಆಸ್ಪತ್ರೆಗೆ ಹೋಗಿ ಗಂಡನನ್ನು ನೋಡಿಕೊಂಡು ಮತ್ತೆ ಸುದರ್ಶನನನ್ನು ನೋಡಲು ಬಂದಳು. ಡಾಕ್ಟರು ಶಾರದೆ ಬಂದುದನ್ನು ನೋಡಿ ಯಾಕೋ ಜೋಲು ಮೋರೆ ಮಾಡಿ ನಿಂತರು. ಅವರನ್ನು ಕಂಡೇ ಶಾರದೆಗೆ ಎದೆ ಹಾರಿತು. ಓಡಿ ಬಂದು ಮಗುವನ್ನು ಮುಟ್ಟಿ ನೋಡುತ್ತಾಳೆ—ಅದು ಮಂಜಿ ನಷ್ಟು ಶೀತಲವಾಗಿತ್ತು.

"ಅಯ್ಯೋ ಮಗು....ಏನು ಮಾಡಿಬಿಟ್ಟೆಯೋ........ " ಎಂದು ರೋದಿ ಸುತ್ತಾ ಮಗುವಿನ ಮುಖದ ಮೇಲೆ ತಲೆಯಿಟ್ಟು ಬಿಕ್ಕಿ ಬಿಕ್ಕಿ ಅತ್ತಳು. ಅಳು ತ್ತಲೇ ಇದ್ದಳು.

## ೧೩

ಏನು ನಡೆಯಬಾರದೆಂದು ಕಿಟ್ಟಣ್ಣ ಶಾರದೆ ಆಶಿಸಿದ್ದರೋ ಅದು ನಡೆದೇ ಹೋಯಿತು. ಮಗು ಸುದರ್ಶನ ಕಡೆಗೂ ತೀರಿಕೊಂಡೇ ಬಿಟ್ಟ. ಆ ಮಗುವಿನ ಸರಳ ಮನಸ್ಸಿಗೆ ಕಿಟ್ಟಣ್ಣನ ವಿಕಾರರೂಪ—ಮನುಷ್ಯಾಕೃತಿ ಎಂದು ಹೇಳುವುದೇ ಕಷ್ಟ—ಅದಕ್ಕೆ ಕಾರಣವಾದ ಹಿಂದೂ ಮುಸಲ್ಮಾನರ ಹೊಡೆದಾಟ ಇವುಗಳು ಯಾರೂ ನಿರೀಕ್ಷಿಸದೆ ಇದ್ದ ವಿಲಕ್ಷಣ ಪರಿಣಾಮ ಉಂಟು ಮಾಡಿದ್ದವು. ಬ್ಯಾಂಡೇಜಿನ ಮುದ್ದೆಯಾಗಿ ಮಲಗಿರುವ ತನ್ನ ತಂದೆ—ಪ್ರೀತಿಯ ತಂದೆ ಇನ್ನು ಮೊದಲಿನ ಮನುಷ್ಯನಾಗುವುದಿಲ್ಲ ಎನ್ನುವ ವಿಷಯ ಹೇಗೋ ಅವನ ಮನಸ್ಸಿಗೆ ತಿಳಿದು ಹೋಗಿ, ಅವು ಪ್ರಚಂಡವಾದ ಮನಃಕ್ಷೋಭೆಯನ್ನು ಉಂಟು ಮಾಡಿದ್ದವು.

ಕಿಟ್ಟಣ್ಣನಿದ್ದ ಭಯಾನಕ ಸ್ಥಿತಿ, ಆಸ್ಪತ್ರೆಯ ನೋವು ತುಂಬಿದ ಆವರಣ ಅವನಿಗೆ ಹೀಗೆಂದು ಹೇಳಲಾಗದ ಅವ್ಯಕ್ತ ವೇದನೆ ಕೊಟ್ಟಿತ್ತು. ತನ್ನ ಮೂಕ ವೇದನೆಯನ್ನು ಬಾಯಿಬಿಟ್ಟು ಹೇಳಲಾರದೆ ಅವನು ರಾತ್ರಿಯೆಲ್ಲಾ ಕೊರಗಿದ. ಆ ಮನೋವ್ಯಾಕುಲತೆಯನ್ನು ತಡೆಯಲಾರದೆ ಆ ಮಗುವಿನ ಮುಗ್ಧ ಮನಸ್ಸು ಸುಮ್ಮನೆ ಹೊಯ್ದಾಡಿತು. ಅದಕ್ಕೆ ತಕ್ಕಂತೆ ಶಾರದೆ ಬಾಯಿ ತಪ್ಪಿ ಹೇಳಿಬಿಟ್ಟಿದ್ದಳು—'ಜಗತ್ತಿನಲ್ಲಿ ನ್ಯಾಯಅನ್ಯಾಯಗಳು ಎಲ್ಲವೂ ಒಂದೇ'. ಹಿಂದೂ ಮುಸಲ್ಮಾನರ ಜಗಳದ ಕಾರಣವೇನೆಂಬುದು, ಅದರಲ್ಲಿಯೂ ನಿರಪರಾಧಿಯಾದ ತನ್ನ ತಂದೆಯನ್ನು ಮುಸಲ್ಮಾನರು ಘಾತಿಸಿದುದು ಏಕೆಂದು ಅವನೆಷ್ಟು ಪ್ರಯತ್ನಿಸಿದರೂ ಅದಕ್ಕೆ ಉತ್ತರ ಸಿಕ್ಕಲಿಲ್ಲ. ತನ್ನ ತಾಯಿ ಹೇಳುವಂತೆ ಬಹುಶಃ ಜಗತ್ತಿನಲ್ಲಿ ನ್ಯಾಯ ಅನ್ಯಾಯಗಳೆಲ್ಲವೂ ಒಂದೇ ಏನೋ. ಇದೇ ವಿಷಯವನ್ನು ಮತ್ತೆ ಮತ್ತೆ ಚಿಂತಿಸಿ, ಮನೋಕ್ಲೇಶದಿಂದ ಅವನ ಮನಸ್ಸು ಅಸ್ವಸ್ಥವಾಗಿ ಶರೀರದಲ್ಲಿ ಜ್ವರ ಕಾಣಿಸಿಕೊಂಡಿತು. ಜ್ವರದ ಬಾಧೆಯಲ್ಲಿ ಭಾವೋದ್ವೇಗವನ್ನು ತಡೆಯಲಾರದೆ, ಅವನ ದುರ್ಬಲ ಹೃದಯ ತತ್ತರಿಸಿ ಕಡೆಗೊಮ್ಮೆ ನಿಂತು ಹೋಗಿತ್ತು.

ಶಾರದೆಯ ರೋಧನ, ಆಕ್ರಂದನ ಆ ಮಹಡಿಯಲ್ಲಿ ವಾಸವಾಗಿದ್ದ

ಇತರ ಸಂಸಾರಗಳನ್ನೆಲ್ಲಾ ಅಲ್ಲಿಗೆ ಬರಮಾಡಿತು. ಎಲ್ಲರೂ ಸುದರ್ಶನನ ಸಾವಿಗೆ ಸಂತಾಪ ವ್ಯಕ್ತಪಡಿಸಿದರು.

ಎಲ್ಲರ ಕಿವಿಗೆ ಬಿದ್ದ ಈ ಸುದ್ದಿ ಆಸ್ಪತ್ರೆಯಲ್ಲಿ ನರಳುತ್ತಾ ಮಲಗಿದ್ದ ಕಿಟ್ಟಣ್ಣನಿಗೆ ತಿಳಿಯಲು ಕೊಂಚ ತಡವೇ ಆಯಿತು. ಮಗ ಮಡಿದ ಸುದ್ದಿಯನ್ನು ತಾನು ಗಂಡನಿಗೆ ಯಾವ ಬಾಯಿಂದ ಹೇಳಲಿ. ಅವರಿಗೆ ಯಾವ ಮೋರೆ ಹೊತ್ತು ತೋರಿಸಲಿ ಎಂದು ಶಾರದೆ ಕಿಟ್ಟಣ್ಣನಿಗೆ ಸುದರ್ಶನನ ಸುದ್ದಿ ಹೇಳಲು ತುಂಬಾ ಅಧೀರಳಾಗಿದ್ದಳು. ಅವಳಿಗೆ ಸುದರ್ಶನನ ಮರಣಕ್ಕೆ ಪರೋಕ್ಷವಾಗಿ ತಾನೇ ಕಾರಣಳೆಂದು ತಿಳಿದಿತ್ತು. ಕಿಟ್ಟಣ್ಣನ ಆಜ್ಞೆಯನ್ನು ಉಲ್ಲಂಘಿಸಿ ಅವನ ಅಭೀಷ್ಟಕ್ಕೆ ವಿರೋಧವಾಗಿ ಆ ದಿನ ಸುದರ್ಶನನನ್ನು ಆಸ್ಪತ್ರೆಗೆ ಕರೆತಂದದ್ದೇ ಅವಳ ಮಹಾಪರಾಧವಾಯಿತು. ಅವಳು ಆ ದಿನ ಮಗುವನ್ನು ಕರೆತರದಿದ್ದರೆ ಸುದರ್ಶನ ಹೀಗೆ ತೀರಿಕೊಳ್ಳುತ್ತಿದ್ದನೋ ಇಲ್ಲವೋ ಹೇಳುವುದು ಕಷ್ಟ. ಆದರೆ ಶಾರದೆಗೆ ಅದೇನು ಮಂಕು ಬಡಿಯಿತೋ ಅದಾವ ಶಕ್ತಿ ಅವಳನ್ನು ಆ ಕೆಲಸಕ್ಕೆ ಪ್ರೇರೇಪಿಸಿತೋ ಅಂತೂ ನಡೆಯಬಾರದ ಘಟನೆಗೆ ಅವಳು ಸಂಚಾಲಕಳಾದಳು. ಇಷ್ಟು ಮಾತ್ರವೇ ಅಲ್ಲ. ಆ ಮಗುವಿನ ತಲೆಯಲ್ಲಿ ಸಲ್ಲದ ಭೀಕರ ವಿಚಾರಗಳನ್ನು ತುಂಬಿ ತಾನೇ ಮಗುವಿನ ಸಾವಿಗೆ ನೆರವಾಗಿದ್ದಳು! 'ಹಾಯ್! ಎಂತಹ ಪಾಪಿ ಜನ್ಮ ತನ್ನದು' ಎಂದು ತನ್ನನ್ನೇ ಪರಿಪರಿಯಾಗಿ ದೂಷಿಸಿಕೊಳ್ಳುತ್ತಾ ಶಾರದೆ ಅಳುತ್ತಾ ಕುಳಿತವಳು ಏಳಲಿಲ್ಲ. ಸುದರ್ಶನನ ಸುದ್ದಿ ಮೋಹನರಾಯರಿಗೆ ಗೊತ್ತಾಗಿ, ಅವರು ಸುನಂದೆಯೊಡನೆ ಬಂದು ಶಾರದೆಯನ್ನು ಸಂತೈಸಿ, ಕಿಟ್ಟಣ್ಣನಿಗೆ ನಡೆದ ಘಟನೆಯನ್ನು ವಿಷಾದದಿಂದ ಹೇಳಿದರು, "ಸುದರ್ಶನ ಇನ್ನಿಲ್ಲ. ನಮ್ಮ ಕೈಬಿಟ್ಟು ನಡೆದುಬಿಟ್ಟ !"

ಈ ವಿಷಯ ಕೇಳಿ ಕಿಟ್ಟಣ್ಣ 'ಹಾಂ' ಅನ್ನಲಿಲ್ಲ. ಹೂಂ ಅನ್ನಲಿಲ್ಲ. ಅವನು ಕಲ್ಲಿನ ವಿಗ್ರಹವೇ ಆಗಿದ್ದ. ಆದರೆ ಕಣ್ಣಿನಲ್ಲಿ ಅವನಿಗೆ ತಿಳಿಯದಂತೆ ಕಣ್ಣೀರಿನ ಚಿಲುಮೆ ಉಕ್ಕುತ್ತಿತ್ತು. ಕಣ್ಣೀರನ್ನು ಒರೆಸಲು ಶಾರದೆ ಪ್ರಯತ್ನಿಸಿದಳು. ಕಿಟ್ಟಣ್ಣ ಶಾರದೆಯ ಕೈಯನ್ನು ದೂರ ತಳ್ಳಿ ಒದರಿದ.

"ಸುದರ್ಶನನ ಕೊಲೆಪಾತಕಿ ನೀನು! ದೂರ ಸರಿ !"

ಅವನ ಗರ್ಜನೆ ಕೇಳಿ ಅಲ್ಲಿದ್ದವರೆಲ್ಲ ಗಾಬರಿ ಬಿದ್ದರು. ಶಾರದೆಯಂತೂ ಗಡಗಡನೆ ನಡುಗುತ್ತಾ ಮೌನದ ಮೂರ್ತಿಯಾಗಿ ನಿಂತಿದ್ದಳು. ಕಿಟ್ಟಣ್ಣನೊಡನೆ

ಅವಳು ಕಳೆದ ಹತ್ತು ವರ್ಷದ ಜೀವನದಲ್ಲಿ ಕಿಟ್ಟಣ್ಣನ ಬಾಯಲ್ಲಿ ಇಷ್ಟು ಕರ್ಕಶವಾಗಿ ಬಂದದ್ದು ಇದೇ ಮೊದಲು. ಶಾರದೆಗೆ ಬದುಕಿಗಿಂತ ಸಾವೇ ಸುಖವಾಗಿ ಕಂಡಿತು. ಸುದರ್ಶನನ ಕೊಲೆಪಾತಕಿ ನೀನು! ನೀನು! ನೀನು! ನೀನು !!

ಯಾವ ದಿಕ್ಕಿಗೆ ತಿರುಗಿದರೂ ಇದೇ ಕಠೋರ ವಾಣಿ. ಶಾರದೆಗೆ ಹುಚ್ಚು ಹಿಡಿಯುವುದೊಂದು ಬಾಕಿ ! ಅಲ್ಲೇ ಇದ್ದಿದ್ದರೆ ಹುಚ್ಚು ಹಿಡಿಯುತ್ತಿತ್ತೋ ಏನೋ. ಮೋಹನರಾಯರ ಪತ್ನಿ ಸುನಂದೆ ಶಾರದೆಯನ್ನು ತನ್ನೊಡನೆ ಮನೆಗೆ ಕರೆದುಕೊಂಡು ಹೋದಳು.

ಇದು ಕಿಟ್ಟಣ್ಣನೊಡನೆ ಮಾತನಾಡುವ ವೇಳೆಯಲ್ಲವೆಂದು ಮೋಹನರಾಯರು ಹೆಚ್ಚಿನ ಮಾತಿಗೆ ಹೋಗದೆ ನಾಲ್ಕು ಮಾತಿನಲ್ಲೇ ಕಿಟ್ಟಣ್ಣನಿಗೆ ಸಮಾಧಾನ ಹೇಳಿ ಮನೆಗೆ ಹೊರಟರು. ಆ ದಿನವೆಲ್ಲ ಕಿಟ್ಟಣ್ಣನಿಗೆ ಮೈಮೇಲೆ ಪ್ರಜ್ಞೆಯೇ ಇರಲಿಲ್ಲ.

ಒಂದೆರಡು ದಿನ ಕಳೆಯಿತು. ಶಾರದೆ ಕಿಟ್ಟಣ್ಣನನ್ನು ನೋಡಲು ದಿನವಹಿ ಆಸ್ಪತ್ರೆಗೆ ಹೋಗುತ್ತಿದ್ದರೂ ಕಿಟ್ಟಣ್ಣನೊಡನೆ ಹೆಚ್ಚು ಮಾತನಾಡಲಿಲ್ಲ. ಕಿಟ್ಟಣ್ಣನನ್ನು ಕಂಡರೆ ಅವಳಿಗೆ ಭಯವಾಗುತ್ತಿತ್ತು. ಕಿಟ್ಟಣ್ಣನೂ ಶಾರದೆಯನ್ನು ಏನೆಂದು ಕೇಳುತ್ತಿರಲಿಲ್ಲ. ಈ ವೇಳೆಗೆ ಕಿಟ್ಟಣ್ಣನ ಹಣೆಯ ಗಾಯ ಮಾಗಿತ್ತು. ಡಾಕ್ಟರು ಕಣ್ಣಿಗೆ ಕಟ್ಟಿದ್ದ ಬ್ಯಾಂಡೇಜು ಪಟ್ಟಿಯನ್ನು ತೆಗೆದು ಹಾಕಿದ್ದರು. ಕಿಟ್ಟಣ್ಣ ಈಗ ಕಣ್ಣು ಬಿಟ್ಟು ಸುತ್ತಲೂ ನೋಡಬಹುದಾಗಿದ್ದರೂ ಅವನು ಸದಾ ಕಣ್ಣು ಮುಚ್ಚಿಕೊಂಡೇ ಇರುತ್ತಿದ್ದ. ಕತ್ತಲೆಗೆ ಅಭ್ಯಾಸವಾಗಿದ್ದ ಕಣ್ಣುಗಳಿಗೆ ಬೆಳಕನ್ನು ನೋಡಲು ಆಗುತ್ತಿರಲಿಲ್ಲವೋ ಅಥವಾ ಮಗನ ಸಾವಿಗೆ ಕಾರಣಳಾದ ಶಾರದೆಯ ಮುಖವನ್ನು ಅವನು ನೋಡಬಾರದೆಂದೋ. ಅಂತೂ ಅವನು ಸದಾ ಕಣ್ಣು ಮುಚ್ಚಿಕೊಂಡೇ ಇರುತ್ತಿದ್ದ.

ಸುದರ್ಶನ ತೀರಿಕೊಂಡ ನಾಲ್ಕನೆಯ ದಿನದ ಹೊತ್ತಿಗೆ, ಕಿಟ್ಟಣ್ಣನ ಶೋಕದ ಉಬ್ಬರ ಇಳಿಮುಖವಾಯಿತು. 'ಸುದರ್ಶನ ತನ್ನ ಮಗ ಹೇಗೋ ಹಾಗೆಯೇ ಶಾರದೆಯ ಮಗ. ತನಗೇ ಇಷ್ಟು ದುಃಖವಾಗಿರುವಾಗ ಇನ್ನು ಸಾಕಿದ ತಾಯಿಗೆ ಎಷ್ಟು ದುಃಖವಾಗಿರಬೇಡ ! ಅದನ್ನು ತಿಳಿಯದೆ ತಾನು ಶಾರದೆಯ ಮೇಲೆ ಅನ್ಯಥಾ ಮುನಿಸಿಕೊಂಡು ತಪ್ಪು ಮಾಡಿದೆ. ಸುದರ್ಶನ

ತೀರಿಕೊಳ್ಳಲು ಶಾರದೆ ಕಾರಣಳೇ? ಯಾರ ಸಾವಿಗೆ ಯಾರು ಕಾರಣ ಕರ್ತರು. ಶಾರದೆ ಬೇಕೆಂದೇ ಸುದರ್ಶನನನ್ನು ಆಸ್ಪತ್ರೆಗೆ ಕರೆತರಲಿಲ್ಲ. ಆದರೆ ಯಾವುದೋ ಒಂದು ಶಕ್ತಿ ಈ ಕೆಲಸ ಮಾಡಿಸಿತು. ಹೀಗೆಂದ ಮಾತ್ರಕ್ಕೇ ಶಾರದೆಯು ತಪ್ಪಿತಸ್ಥಳೇ? ಶಾರದೆ ಬ್ರಹ್ಮನಿಯಾಮಕವಾಗಿದ್ದ ಸುದರ್ಶನನ ಮರಣಕ್ಕೆ ಕೇವಲ ನಿಮಿತ್ತ ಮಾತ್ರ. ಅವಳನ್ನು ದೂರುವುದು ಸರಿಯಲ್ಲ. ಮೊದಲೇ ಪುತ್ರಶೋಕಗ್ರಸ್ತೆಯಾದ ಅವಳನ್ನು ತಾನು ಇನ್ನೂ ದುಃಖಿನಿಯನ್ನಾಗಿ ಮಾಡಿದೆ. ಅವಳನ್ನು ಸಮಾಧಾನ ಪಡಿಸಬೇಕು." ಎನ್ನುವ ವಿವೇಕವಾಣಿ ಕಿಟ್ಟಣ್ಣನಲ್ಲಿ ಉದಯವಾಗಿ, ಕಿಟ್ಟಣ್ಣ ತಾನಾಗಿಯೇ ಶಾರದೆಯನ್ನು ಮಾತನಾಡಿಸಿದ.

"ಶಾರದೆ, ನಾನು ಕೋಪದ ವೇಳೆಯಲ್ಲಿ ನಿನ್ನನ್ನು ಬೈದಿರಬಹುದು. ಅದನ್ನೆಲ್ಲಾ ನೀನು ಮರೆತು ನನ್ನನ್ನು ಕ್ಷಮಿಸು ಶಾರದೆ! ಸುದರ್ಶನನ ವಿಯೋಗದಿಂದ ನನಗಿಂತಲೂ ನಿನಗೆ ನೂರ್ಮಡಿ ವ್ಯಥೆಯಾಗಿದೆ. ನಾನು ಬಲ್ಲೆ. ನಾನು ತಿಳಿಯದೆ ಆಡಿರಬಹುದಾದ ಮಾತುಗಳನ್ನು ಕ್ಷಮಿಸು!" ಎಂದು ಕಿಟ್ಟಣ್ಣ ಕೇಳಿಕೊಂಡ.

ಗಂಡನ ಮಾತುಗಳನ್ನು ಕೇಳಿ ಶಾರದೆ "ಅಯ್ಯೋ ನನ್ನ ದೇವರೇ, ಕ್ಷಮಿಸಬೇಕಾದವರು ನೀವು!" ಎಂದು ಕಿಟ್ಟಣ್ಣನ ಕಾಲಿಗೆ ತಲೆಯಿಟ್ಟು ಅಳತೊಡಗಿದಳು.

"ಅಳಬೇಡ ಶಾರದೆ, ಸುದರ್ಶನ ಒಳ್ಳೆಯ ಜೀವ. ಅವನು ಶಾಪಗ್ರಸ್ತನಾಗಿ ಧರೆಯಲ್ಲಿ ಹುಟ್ಟಿದ ಯಾವನೋ ಮಹಾತ್ಮ! ಅವನು ನಮ್ಮ ಮಗನಾದನಲ್ಲಾ ಎಂದು ನಾವು ಹೆಮ್ಮೆ ಪಡಬೇಕು. ಅವನು ತಾನು ಇದ್ದಷ್ಟು ದಿನ ನಮ್ಮನ್ನು ಸಂತೋಷಪಡಿಸಿದ. ಹೂವಿನಂತಿದ್ದ ಅವನು ನಮ್ಮ ಕಣ್ಣಿನಿಂದ ಮರೆಯಾದರೂ ಅವನು ತನ್ನ ಸದ್ಗುಣಗಳ ಕಂಪನ್ನು ಹಿಂದುಳಿಸಿ ಹೋಗಿದ್ದಾನೆ. ಅವನಿಗಾಗಿ ನಾವು ಅಳಬಾರದು." ಎಂದು ಸಮಾಧಾನ ಪಡಿಸಿದ.

ಕಿಟ್ಟಣ್ಣನ ಮಾತುಗಳು ಶಾರದೆಯ ನೊಂದ ಜೀವಕ್ಕೆ ಶಾಂತಿಯನ್ನು ತಂದವು. ಇದೇ ವೇಳೆಗೆ ಮೈಸೂರಿನಿಂದ ಸುಮಿತ್ರೆ ಬರೆದಿದ್ದ ಪತ್ರ ಕೈಸೇರಿ ಅವಳ ದುಗುಡವನ್ನು ಎಷ್ಟೋ ಶಮನ ಮಾಡಿತು.

ಶಾರದೆ ಸುದರ್ಶನ ಗತಿಸಿದ ಮೇಲೆ ತನ್ನ ಹೊಟ್ಟೆಯ ದುಃಖವನ್ನೆಲ್ಲಾ ತೋಡಿಕೊಂಡು ಸುಮಿತ್ರೆಗೆ ಒಂದು ಪತ್ರ ಬರೆದಿದ್ದಳು.

ಶಾರದೆಯ ಪತ್ರ ಸುಮಿತ್ರೆಯ ಕೈಸೇರಿದಾಗ ಸುಮಿತ್ರೆ ಲೀಷರ್ ( ವಿರಾಮ ) ಪೀರಿಯಡ್‌ನಲ್ಲಿ ತನ್ನ ಗೆಳತಿಯರೊಡನೆ ಹರಟೆ ಹೊಡೆಯುತ್ತಿದ್ದಳು. ಮೆಡಿಕಲ್ ಕಾಲೇಜಿಗೆ ಅದೇ ಕಡೆಯ ವರ್ಷವಾಗಿದ್ದುದರಿಂದ ಎಲ್ಲಿಗೆ ಮೆಡಿಕಲ್ ಟೂರ್ ಹೋಗಬೇಕೆಂದು ಚರ್ಚಿಸುತ್ತಿದ್ದರು. ಯಾರೋ ಬೊಂಬಾಯಿಯ ಸುದ್ದಿ ತೆಗೆದರು. ಆಗ ಸುಮಿತ್ರೆ ತನ್ನ ಬೊಂಬಾಯಿಯ ಅನುಭವಗಳನ್ನು ನೆನೆಸಿಕೊಂಡು ಗೆಳತಿಯರೊಡನೆ ಅದೇ ವಿಷಯವನ್ನು ಹರಟುತ್ತಿದ್ದಳು. ಇದೇ ಹೊತ್ತಿನಲ್ಲಿ ಆ ಕಾಗದ ಬರಬೇಕೇ?

ಸುಮಿತ್ರೆ ಕಾಗದದ ಮೇಲಿದ್ದ ಬೊಂಬಾಯಿಯ ಮುದ್ರೆಯನ್ನು ಕಂಡು ಲಗುಬಗೆಯಿಂದ ಕವರನ್ನು ಹರಿದು ಕಾಗದ ಓದತೊಡಗಿದಳು.

"ಸುಮಿತ್ರೆ ಯಾರದೆ ಕಾಗದ ?" ಎಂದಳು ಒಬ್ಬ ಗೆಳತಿ.

ಸುಮಿತ್ರೆ ಉತ್ತರ ಕೊಡದೆ ಕಾಗದ ಓದುತ್ತಲೇ ಇದ್ದಳು.

"ಅವಳು ಹೇಳ್ತಾಳೇನೇ. ಅದು ಅವಳ 'ಹಸ್ಬೆಂಡ್ಸು' ಕಾಣೇ ಕಾಗದ. ಅದಕ್ಕೇ ಅವಳು ನಮಗಾರಿಗೂ ತೋರಿಸದೆ ಒಳಗೊಳಗೇ ಓದುತ್ತಿರುವುದು !"

ಸುಮಿತ್ರೆ ಕಾಗದ ಓದುವುದರಲ್ಲಿ ತನ್ಮಯಳಾಗಿದ್ದಳು.

"ಏನು ಬರೆದಿದ್ದಾರೆ—ನಿನ್ನ ಹಬ್ಬಿ ?"

ಯಾರೋ ಉತ್ತರ ಕೊಟ್ಟರು.

"ಇನ್ನೇನು ಬರೀತಾರೇ....ಡಾರ್ಲಿಂಗ್, ವಿರಹತಾಪ ತಡೆಯಲಾರೆ.... ನಿನ್ನ ಮುಖಾರವಿಂದವನ್ನು ಎಂದು ಚುಂಬಿಸುವೆನೋ ಎಂದು ಕಾತರನಾಗಿದ್ದೇನೆ ! ಇತ್ಯಾದಿ, ಇತ್ಯಾದಿ ವಿಷಯಗಳನ್ನು ತಾನೇ ಈಗಿನ ಕಾಲದ ಲುನಾಟಿಕ್ ಅಲ್ಲ ರೊಮಾಂಟಿಕ್ ಬೆಂಟ್ ಆಫ್ ಮೈಂಡ್ ಇರೋ ಗಂಡಂದಿರು ಬರೆಯೋದು ?"

ಸುಮಿತ್ರೆಗೆ ಗೆಳತಿಯರು ಚುಡಾಯಿಸುವುದು ಕಿವಿಗೆ ಬೀಳಲೇ ಇಲ್ಲ. ಅವಳು ಕಾಗದ ಓದುತ್ತಲೆ ಇದ್ದಳು. ಮಧ್ಯೆ ಮಧ್ಯೆ ಕಣ್ಣೀರನ್ನು ಒರೆಸಿಕೊಳ್ಳುತ್ತಲೇ ಇದ್ದಳು.

ಗೆಳತಿಯರು ಸುಮಿತ್ರೆ ತಮ್ಮ ವಿನೋದವನ್ನು ಗಮನಿಸದೆ ಕಣ್ಣೀರಿಡುತ್ತಾ ಪತ್ರ ಓದಿಕೊಳ್ಳುತ್ತಿರುವದನ್ನು ಕಂಡು ಅವರ ಉಲ್ಲಾಸ ಅಡಗಿತು.

" ಏನೇಸುಮಿತ್ರ ? ಯಾರಿಗೆ ಏನಾಗಿದೆಯೇ ? "

ಒಬ್ಬ ಗೆಳತಿ ಸುಮಿತ್ರೆಯನ್ನು ತಿವಿದು ಕೇಳಿದಳು.

" ನಮ್ಮ ಸುದರ್ಶನ ಸುದರ್ಶನ........ಶೀರಿ ಕೊಂಡನಂತೆ ! "

' ಏನು ! ಏನು !! ಎನು !!! ' ಒಂದೇ ಉಸಿರಿನಲ್ಲಿ ಎಲ್ಲರೂ ಕೇಳಿದರು.

ಸುಮಿತ್ರೆ ಕಣ್ಣೀರೊರಸಿಕೊಳ್ಳುತ್ತಾ ಗೆಳತಿಯರಿಗೆ ಕಾಗದ ಓದಿದಳು. ಗೆಳತಿಯರೆಲ್ಲರಿಗೂ ಸುದರ್ಶನನ ವಿಷಯ ಚೆನ್ನಾಗಿ ಗೊತ್ತಿತ್ತು. ಎಲ್ಲರೂ ಅವನ ಅಸಾಧಾರಣ ತಿಳುವಳಿಕೆಗಾಗಿ, ಬೆರಗಾಗಿದ್ದರು. ಕಾಗದದ ವಿಷಯ ಕೇಳಿ ಗೆಳತಿಯರ ಉಲ್ಲಾಸಿತ ಮುಖಗಳು ಕಪ್ಪಿಟ್ಟವು.

ಸುಮಿತ್ರೆ ಅಲ್ಲಿಂದ ನೇರ ಎದ್ದು ಹೋಗಿ ಮನಶ್ಶಾಸ್ತ್ರದ ಪ್ರೊಫೆಸರನ್ನು ಕಂಡು ಅವರಿಗೆ ನಡುಗುವ ಕೈಯಲ್ಲಿ ಪತ್ರಕೊಟ್ಟು " ನೀವು ಹೇಳಿದ್ದಂತೆ ನಮ್ಮ ಸುದರ್ಶನ ತೀರಿಕೊಂಡಿದ್ದಾನೆ ! " ಎಂದು ಹೇಳಿದಳು.

ಆ ದಿನ ಪ್ರೊಫೆಸರರು ಸುಮಿತ್ರೆಯ ತರಗತಿಯಲ್ಲಿ ಸುದರ್ಶನನ ವಿಷಯವನ್ನು ಪ್ರಸ್ತಾಪಿಸುತ್ತಾ ಹೇಳಿದರು. " ಕಡೆಗೆ ನನ್ನ ಮಾತೇ ಸತ್ಯವಾಯಿತು.... ಆ ದಿನ ಸುಮಿತ್ರೆಯ ತಮ್ಮ ಸುದರ್ಶನನ ಬುದ್ಧಿ ಪ್ರಾಡಿಮೆಯ ಬಗ್ಗೆ ಮಾತನಾಡುತ್ತ ಅವನು ಸುಖದಲ್ಲಿ ಬೆಳೆದನೆಂದರೆ ಜಗತ್ತಿನ ಮೇಧಾವಿಪುರುಷರಲ್ಲಿ ಒಬ್ಬ ನಾಗುತ್ತಾನೆ. ಕಷ್ಟದಲ್ಲಿ ಬೆಳೆದರೆ ಬಾಲ್ಯದಲ್ಲಿಯೇ ಹೃದ್ರೋಗಕ್ಕೆ" ತುತ್ತಾಗುತ್ತಾನೆ ಎಂದು ಹೇಳಿದ್ದ ಆ ನನ್ನ ಮಾತು ಅಕ್ಷರಶಃ ನಿಜವಾಯಿತು. ಎಂದು ತುಂಬಾ ಪರಿತಪಿಸಿದರು.

ಸುಮಿತ್ರೆ ಈ ಸುದ್ದಿಯನ್ನೆಲ್ಲಾ ಶಾರದೆಗೆ ವಿವರವಾಗಿ ತಿಳಿಸಿ ಬರೆದಳು. ಕಾಗದದೊಂದಿಗೆ ಎರಡು ವರ್ಷಗಳ ಹಿಂದೆ ಸದಾಶಿವನು ತೆಗೆದಿದ್ದ ಎಲಿಫೆಂಟಾಗುಹಾಂತರ್ದೇವಾಲಯಗಳ ಬಳಿ, ಹಾಗೂ ವಜ್ರೇಶ್ವರಿಯ ಬಿಸಿನೀರಿನ ಊಟೆಗಳ ಬಳಿ ನೀರಿನಲ್ಲಿ ಚೆಲ್ಲಾಟವಾಡುತ್ತಿದ್ದ ಸುದರ್ಶನನ ಹಲಕೆಲವು ಚಿತ್ರಗಳನ್ನು ದೊಡ್ಡದು ಮಾಡಿಸಿ ಕಳುಹಿಸಿಕೊಟ್ಟಿದ್ದಳು. ಅವುಗಳನ್ನು ನೋಡಿ ಶಾರದೆಗೆ ಸುದರ್ಶನನ ಬಾಲ್ಯದ ನೂರಾರು ಸಂಗತಿಗಳು ನೆನಪಿಗೆ ಬಂದವು. ಇಂತಹ ರತ್ನವನ್ನು ಕಾಪಾಡಿಕೊಂಡು ಬರುವ ಪುಣ್ಯ ತನಗಿಲ್ಲವೆಂದು

ಮರಮರನೆ ಮರುಗಿದಳು.

ಕಿಟ್ಟಣ್ಣನ ಗಾಯಗಳು ವಾಗಿ ಅವನು ಮನೆಗೆ ಬರಲು ತಿಂಗಳು ಹಿಡಿಯಿತು. ಮನೆಗೆ ಬಂದರೂ ಕಿಟ್ಟಣ್ಣ ಮೊದಲಿನಂತೆ ಆಗಲು ಕನಿಷ್ಟ ಪಕ್ಷ ತಿಂಗಳಾದರೂ ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಡಾಕ್ಟರು ಸೂಚಿಸಿದ್ದರು. ಮೋಹನರಾಯರೂ ಮನೆಗೆ ಬಂದು ಕೆಲಸದ ವಿಷಯದಲ್ಲಿ ಕಿಟ್ಟಣ್ಣ ಧಾವಂತ ಪಟ್ಟುಕೊಳ್ಳಬಾರದೆಂದೂ, ಆ ಕೆಲಸ ಹೋದರೂ ತಾವು ಇನ್ನೊಂದು ಕೆಲಸ ಕೊಡಿಸಿಕೊಡುವುದಾಗಿ ಧೈರ್ಯಹೇಳಿದರು. ಇಷ್ಟಾದರೂ ಕಿಟ್ಟಣ್ಣನಿಗೆ ಆಸ್ಪತ್ರೆಯಿಂದ ಮನೆಗೆ ಬಂದಮೇಲೆ ಮೊದಲಿನ ಉತ್ಸಾಹ, ಲವಲವಿಕೆ ಮನೆಯಲ್ಲಿ ಇಲ್ಲದಾಯಿತು. ಯಾಕೆಂದರೆ ಮನೆಯ ಯಾವ ಮೂಲೆಗೆ ತಿರುಗಿದರೂ, ಸುದರ್ಶನನ ನೆನಪು ತರುವ ನೂರೆಂಟು ವಸ್ತುಗಳು ದೃಗ್ಗೋಚರವಾಗುತ್ತಿತ್ತು. ಎಷ್ಟೆಂದರೂ ಆ ಮನೆ ಸುದರ್ಶನನ ಸಾವು ತಂದ ಮನೆ. ಆ ಮನೆಯಲ್ಲಿ ಇರುವ ತನಕ ಸುದರ್ಶನನ ನೆನಪು ಅವರಿಗೆ ಹೇಗೆ ಮರೆತೀತು ?

ಒಂದು ದಿನ ಕಿಟ್ಟಣ್ಣ ಗೋಡೆಗೆ ತಗುಲಿ ಹಾಕಿದ್ದ ಸುದರ್ಶನನ ಚಿತ್ರವನ್ನು ಗಂಟೆಗಟ್ಟಲೆ ಎವೆಯಿಕ್ಕದೆ ನೋಡುತ್ತಾ ಕುಳಿತುಬಿಟ್ಟ. ಅದನ್ನು ಕಂಡು ಶಾರದೆ, ಆ ಫೋಟೋವನ್ನು ಅಲ್ಲಿಂದ ತೆಗೆದು ಪೆಟ್ಟಿಗೆಯಲ್ಲಿರಿಸಿದಳು. ಸುದರ್ಶನನ ಚಿತ್ರ ಗೋಡೆಯಿಂದ ಮರೆಯಾದರೂ, ಕಿಟ್ಟಣ್ಣನ ಅಂತಃದೃಷ್ಟಿಯಿಂದ ಮರೆಯಾಗಲಿಲ್ಲ. ಅವನು ಕೆಲವು ದಿನಗಳಿಂದ ಏನನ್ನೋ ಯೋಚಿಸುತ್ತಾ ಮೌನಧರಿಸಿ ಕುಳಿತು ಬಿಡುತ್ತಿದ್ದ. ಮಾತನಾಡಿಸಿದರೆ ಮಾತಿಲ್ಲ. ಮಾತನಾಡಿದರೂ ಎಲ್ಲವೂ ಅಸಂಬದ್ಧ. ಏನೋ ಕೇಳಿದರೆ ಮತ್ತೇನೋ ಉತ್ತರ !

ಮತ್ತೆ ಕೆಲವು ದಿನಗಳು ಕಳೆದ ಮೇಲೆ ಕಿಟ್ಟಣ್ಣ ಆತ್ಮಗತ ಸಂಭಾಷಣೆಗೆ ಮೊದಲು ಮಾಡಿದ. ಎಲ್ಲವೂ ಹರಕು ಮುರುಕು ಮಾತುಕತೆ, ಅದೂ ಅಸ್ಪಷ್ಟ ಧ್ವನಿಯಲ್ಲಿ, ಅನೇಕ ವೇಳೆ ಮಾತಿನ ಬದಲು ಕೈಸನ್ನೆ, ಸಂಜ್ಞೆಗಳಿಂದಲೇ ಸಂಭಾಷಣೆ ಸಾಗುತ್ತಿತ್ತು. ಶಾರದೆಗೆ ಗಂಡನ ರೀತಿ ವಿಚಿತ್ರವಾಗಿ ಕಂಡಿತು. ಹಾಗೆಲ್ಲ ಮಾಡಬಾರದೆಂದು ಅವಳು ನಯವಾಗಿ ಹೇಳಿದಳು. ಗದರಿ ಹೇಳಿದಳು. ಕಡೆಗೆ ಸಿಟ್ಟುಮಾಡಿ ಹೇಳಿದಳು. ಈಚೀಚೆಗಂತೂ ಕಿಟ್ಟಣ್ಣನಿಗೆ ಶಾರದೆಯನ್ನು ಕಂಡರೆ ಏಕೋ ಹೆದರಿಕೆ ಉತ್ಪನ್ನವಾಗಿತ್ತು. ಅವಳು ಬಂದ

ಳೆಂದರೆ ಕಿಟ್ಟಣ್ಣನ ಆತ್ಮಗತಗಳು ನಿಂತು ಹೋಗುತ್ತಿದ್ದವು. ಅವಳು ಅಲ್ಲಿಂದ ಹೊರಟು ಹೋದರೆ ಮತ್ತೆ ಆರಂಭ!

ಇನ್ನು ಕೆಲವು ದಿನಗಳು ಕಳೆದ ಮೇಲೆ, ಕಿಟ್ಟಣ್ಣ ಯಾವುದಕ್ಕೋ ಹಂಬಲಿಸಿ, ಹಂಬಲಿಸಿ ಅರೆ ಹುಚ್ಚನೇ ಆದ. ಒಂದು ದಿನ ಕನಸಿನಲ್ಲಿ ಸುದರ್ಶನನ ರೂಪ ಕಂಡು ಎತ್ತಿಕೊಳ್ಳಲೆಂದು ನಿದ್ರೆಗಣ್ಣಿನಲ್ಲಿಯೇ ಹಾಸಿಗೆಯಿಂದ ಛಂಗನೆ ಎದ್ದು ಹೋಗಿ ಗೋಡೆಗೆ ತಲೆಯೊಡೆದುಕೊಂಡು ಮತ್ತೆ ಗಾಯಮಾಡಿಕೊಂಡ. ಅಲ್ಲಿಂದಾಚೆಗೆ ಶಾರದ ಕಿಟ್ಟಣ್ಣನನ್ನು ಕ್ಷಣಕಾಲ ಅಗಲಿ ಇರುತ್ತಿರಲಿಲ್ಲ. ಶಾರದೆಗೆ ಈ ಮನೆಯಲ್ಲಿ ಇನ್ನಷ್ಟು ದಿನ ಕಿಟ್ಟಣ್ಣನಿಗೆ ಸುದರ್ಶನನ ನೆನಪು ಬಾರಿಬಾರಿಗೆ ಬಂದು ಅವನ ಮನಸ್ಸು ಚಂಚಲಗೊಂಡು ಮುಂದೊಂದು ದಿನ ಅದೇ ಗಿಲಿಯಿಂದ ಕಿಟ್ಟಣ್ಣ ಹುಚ್ಚನಾದಾನೆಂಬ ಹೆದರಿಕೆಯುಂಟಾಗಿ, ಆದಷ್ಟು ಬೇಗ ಆ ಮನೆಯನ್ನು ಬಿಡಬೇಕೆಂದು ಪ್ರಯತ್ನಿಸಿದಳು. ಅವಳ ಆತುರಕ್ಕೆ ಮನೆ ಸಿಗಬೇಕಲ್ಲ? ........

ಏಕೋ ಕಿಟ್ಟಣ್ಣನ ಸ್ಥಿತಿ ದಿನದಿನಕ್ಕೆ ಕೆಡುತ್ತಲೇ ಹೋಯಿತು. ಅವನು ಸುದರ್ಶನನನ್ನು ಹಂಬಲಿಸಿ, ಹಂಬಲಿಸಿ, ಚಪಲಚಿತ್ತನಾದ. ಆಸ್ಪತ್ರೆಯಿಂದ ಮನೆಗೆ ಬಂದ ಹದಿನೈದು ದಿನಕ್ಕೆ ಆ ಕಿಟ್ಟಣ್ಣನೇ ಬೇರೆ, ಈ ಕಿಟ್ಟಣ್ಣನೇ ಬೇರೆ ಎನ್ನುವಷ್ಟು ಬದಲಾಗಿ ಬಿಟ್ಟಿದ್ದ. ಆ ದಿನ ಶಾರದೆಗೆ "ಹೂವಿನಂತಿದ್ದ ಸುದರ್ಶನ ನಮ್ಮ ಕಣ್ಣಿನಿಂದ ಮರೆಯಾದರೂ, ಅವನು ಸದ್ಗುಣಗಳ ಕಂಪನ್ನು ಹಿಂದೆ ಉಳಿಸಿ ಹೋಗಿದ್ದಾನೆ. ಅವನಿಗಾಗಿ ನಾವು ಅಳಬಾರದು!" ಎಂದು ಹೇಳಿದ್ದ ಕಿಟ್ಟಣ್ಣ, ಇಂದು ತನ್ನ ಮಾತಿನ ತದ್ವಿರುದ್ಧ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದ. ಶಾರದೆಗೇನೋ ಕಿಟ್ಟಣ್ಣ ಹೇಳಿದ್ದ ಆ ಮಾತುಗಳು ಚೆನ್ನಾಗಿ ನಾಟಿತ್ತು. ಅವಳು ಇಲ್ಲದ ಸುದರ್ಶನನಿಗಾಗಿ ಮರುಗುವುದನ್ನು ಬಿಟ್ಟಿದ್ದಳು. ಆದರೆ ಕಿಟ್ಟಣ್ಣ? ವೈದ್ಯನಿಗೆ ವ್ಯಾಧಿ ಬಂದಂತಾಗಿತ್ತು ಅವನ ಸ್ಥಿತಿ. ಅವನು ಯಾವುದೋ ಸಮಯ ಸ್ಫೂರ್ತಿಯಲ್ಲಿ ಆ ಎಲ್ಲ ವೇದಾಂತವನ್ನು ಹೇಳಿದ್ದರೂ ಅದರಲ್ಲಿದ್ದ ಅವನ ನಂಬಿಕೆ ಬರುಬರುತ್ತಾ ಕಡಿಮೆಯಾಗಿತ್ತು. ಕಿಟ್ಟಣ್ಣನ ವ್ಯಾಮೋಹ ಹೆಚ್ಚಿದಂತೆಲ್ಲಾ ಅವನ ವಿಚಾರದ ಕಣ್ಣಿಗೆ ಪರೆಬಿತ್ತು. ಕಡೆಗೊಂದುದಿನ ಕಿಟ್ಟಣ್ಣ ಕುರುಡನೇ ಆದ.

ಅವನಿಗೆ ಸುದರ್ಶನನ ವಿನಹ ಬೇರೆ ಮಾತಿಲ್ಲ. ಅದೇ ಅವನ ಜಪ,

ತಪ. ಕೆಲವು ಬಾರಿ ಯಾರ ಮೇಲೋ ಸಿಟ್ಟುಮಾಡಿಕೊಂಡು ಗದರುತ್ತಾನೆ. ಮರುಕ್ಷಣದಲ್ಲಿಯೇ ಎಳೆಯ ಮಗುವಿನಂತೆ ಅಳುತ್ತಾನೆ. ಉತ್ತರ ಕ್ಷಣದಲ್ಲಿಯೇ ಕಿಲಕಿಲನೆ ನಗು. ಕಿಟ್ಟಣ್ಣನ ಅಳು-ನಗು-ಸಿಟ್ಟು ಪ್ರೀತಿಗಳು ಶಾರದೆಯ ತಲೆಯಲ್ಲಿ ಕೆಟ್ಟವಿಚಾರ ತರಂಗಗಳನ್ನು ಎಬ್ಬಿಸುತ್ತಿತ್ತು. ಇವುಗಳು ಹೀಗೆಯೇ ನಡೆದರೆ—ಇವುಗಳ ಕೊನೆ ಎಲ್ಲಿ?

ಅದು ಆಗಸ್ಟು ತಿಂಗಳ ಎರಡನೆಯವಾರ—ಸ್ವಾತಂತ್ರೋದಯಕ್ಕೆ ಇನ್ನು ಕೇವಲ ಮೂರೇ ದಿನಗಳು ಉಳಿದಿವೆ. ಆ ಮೂರು ದಿನಗಳು ಕಳೆಯಿತೆಂದರೆ ಭಾರತದ ದಾಸ್ಯ ಶೃಖಂಲೆ ಕಳಚಿಬೀಳುವುದು. ಆ ದಿನ ಭಾರತದ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯ ಆರಂಭವಾಗುತ್ತದೆ. ಜನತೆ ರಾಷ್ಟ್ರ ಧ್ವಜದಡಿಯಲ್ಲಿ ಒಂದಾಗಿ ಭಾರತವಲ್ಲಿ ರಾಮರಾಜ್ಯ ನೆಲೆಗೊಳಿಸುತ್ತಾರೆ. ದೇಶದಲ್ಲಿ ಪ್ರಜಾಪ್ರಭುತ್ವವೇರ್ಪಟ್ಟು ಧನಿಕ ದರಿದ್ರರೆನ್ನುವ ವರ್ಗಭೇದ, ಬಿಳಿಯ ಕರಿಯನೆನ್ನುವ ವರ್ಣಭೇದ, ಗಂಡು ಹೆಣ್ಣಿನ ಲಿಂಗ ಭೇದವಳಿದು, ಸಕಲರಿಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯದಾನ; ಎಲ್ಲರಿಗೂ ಸಮಾನ ಅವಕಾಶ, ಸಮಾನಶಾಸನ; ನೀತಿಗೊಳಪಟ್ಟ ವಿಚಾರ; ವಾಕ್, ಶ್ರದ್ಧಾ, ಪೂಜಾ, ಧರ್ಮಾಚರಣೆ, ಉದ್ಯೋಗ, ಸಂಘ ಕ್ರಿಯಾ ಸ್ವಾತಂತ್ರ್ಯಗಳು ಲಭಿಸುತ್ತವೆ. ಅಲ್ಪಸಂಖ್ಯಾಕರಿಗೂ, ಹಿಂದುಳಿದ ಪಂಗಡಗಳಿಗೂ, ಗುಡ್ಡಗಾಡಿನ ಜನರಿಗೂ, ದಲಿತವರ್ಗಕ್ಕೂ, ಯೋಗ್ಯ ಹಿತರಕ್ಷಣೆ, ವ್ಯವಸ್ಥೆ ಏರ್ಪಡುವುದು. ಸತ್ಯ, ಅಹಿಂಸೆಗಳ ಬುನಾದಿಯ ಮೇಲೆ ನಿಂತ ರಾಜ್ಯ, ಸಂಪತ್ಸುಖಭಿವೃದ್ಧಿಯಿಂದ ಕೂಡಿ, ಜಗತ್ತಿಗೇ ಆದರ್ಶವಾಗುವುದು........

ಇಷ್ಟೆಲ್ಲಾ ಆಶೋತ್ತರಗಳಿಗೆ ಕಾರಣಭೂತವಾದ ಸ್ವಾತಂತ್ರ್ಯ ಬರಲಿರುವ ಆ ಪುಣ್ಯ ದಿನಕ್ಕಾಗಿ, ರಾಷ್ಟ್ರದ ಜನತೆ—ಎದುರು ಕಾಯುತ್ತಾ ಕುಳಿತಿದೆ. ಎಲ್ಲೆಲ್ಲೂ ಮಿತಿ ಮೀರಿದ ಹಿಗ್ಗು, ಆನಂದ, ಸಡಗರ, ಸಂತೋಷ! ಆದರೆ ಶಾರದೆಯ ಮನೆಯಲ್ಲಿ?

ಆ ಮೂರು ದಿನಗಳಂತೂ ಕಿಟ್ಟಣ್ಣನ ಸ್ಥಿತಿ ತೀರಾ ಹದಗೆಟ್ಟಿತ್ತು. ಸುಮಿತ್ರೆ ಏನೋ ಮೂರುದಿನ ಮುಂಚಿತವಾಗಿ ಶಾರದೆಗೆ ಸ್ವಾತಂತ್ರ್ಯೋತ್ಸವದ ಶುಭಾಶಯ ಕಳುಹಿಸಿ ಕಿಟ್ಟಣ್ಣನಿಗೆ ಭಗವಂತ ಆಯುರಾರೋಗ್ಯ ಕೊಡಲೆಂದು ಪ್ರಾರ್ಥಿಸಿದ್ದರೂ ಕಿಟ್ಟಣ್ಣನ ಸ್ಥಿತಿ ತುಂಬಾ ಚಿಂತಾಜನಕವಾಗಿತ್ತು.

ದೇಶಕ್ಕೆ ಸ್ವಾತಂತ್ರ್ಯ ಬಂದ ಆ ದಿನ ಕಿಟ್ಟಣ್ಣ ಬೀದಿಯಲ್ಲಿ ಮೆರವಣಿಗೆ ಹೋಗುತ್ತಿದ್ದವರು ಮಾಡುತ್ತಿದ್ದ ಜೈಕಾರಗಳಲ್ಲಿ ತಾನು ಕೂತೆಡೆಯಿಂದಲೇ ದನಿಗೂಡಿಸಿದ. ಕುಡಿಯಲೆಂದು ತಂದಿದ್ದ ಹಾಲನ್ನು ಶಾರದೆಯ ತಲೆಯ ಮೇಲೆ ಸುರಿದು, "ನೀನು ಸ್ವಾತಂತ್ರ್ಯದೇವಿ. ನಿನಗೆ ಅಭಿಷೇಕ ಮಾಡು ತ್ತಿದ್ದೇನೆ" ಎಂದು ತನ್ನ ಕೆಲಸಕ್ಕಾಗಿ ತಾನೇ ಆನಂದಿಸಿದ. ಅದಾದ ಮೇಲೆ ಕೊಂಚ ಹೊತ್ತು ನಿದ್ರೆಹೋಗಿ ಹಠಾತ್ತನೆ ಎದ್ದು ಕುಳಿತು 'ಗೋಳೋ' ಎಂದು ಅಳತೊಡಗಿದ. ಏಕೆಂದು ಶಾರದೆ ಕೇಳಿದಾಗ "ನನಗೆ ಬಾವುಟಬೇಕು. ಬಾವುಟ" ಎಂದು ರಗಳೆ ಮಾಡಿದ. ಇದನ್ನು ಕಂಡು ಶಾರದೆಗೆ ಅಳುವೂ ಬಂತು ನಗುವೂ ಬಂತು. ಎಲ್ಲೋ ಸುದರ್ಶನ ಮೈಮೇಲೆ ಬಂದಿರಬೇಕೆಂದು ಕೂಡಲೇ ಪೇಟೆಗೆ ಹೋಗಿ, ಗಂಡನಿಗೊಂದು ತ್ರಿವರ್ಣಧ್ವಜವನ್ನು ತಂದು ಕೊಟ್ಟಳು. ಕಿಟ್ಟಣ್ಣ ಅದನ್ನು ಕಣ್ಣಿಗೆ ಒತ್ತಿಕೊಂಡು ತಲೆಯಡಿಯಲ್ಲಿ ಇಟ್ಟು ಕೊಂಡು ಮಲಗಿದ.

ಆ ದಿನ ಶಾರದೆಯ ಪಕ್ಕದ ಮನೆಯವರು ಸ್ವಾತಂತ್ರ್ಯೋತ್ಸವದ ಕಾರಣ ವಾಗಿ ಮಾಡಿದ್ದ ವಿಶೇಷ ಅಡಿಗೆಗಳನ್ನು ತಂದುಕೊಟ್ಟರು. ಕಿಟ್ಟಣ್ಣನ ಮನಸ್ಸು ಸಾಯಂಕಾಲದ ಹೊತ್ತಿಗೆ ಸ್ಥಿಮಿತಕ್ಕೆ ಬಂದಿದ್ದುದರಿಂದ ಅವನೂ ಅವನ್ನು ಭುಂಜಿಸಿ, ಅನಂತರ ಹೆಂಡತಿಗೆ ಏನನ್ನಾದರೂ ಓದಲು ಹೇಳಿದ. ಶಾರದೆ ಕುಮಾರವ್ಯಾಸನ 'ವಿರಾಟ್‌ರೂಪದರ್ಶನ' ಓದಿದಳು. ಕಿಟ್ಟಣ್ಣನ ಮುಂದೆ ಭಗವಂತನೇ ಬಂದು ತನ್ನ ವಿರಾಟ ಸ್ವರೂಪ ಪ್ರಕಟ ಮಾಡಿದಂತೆ ಭಾಸ ವಾಯಿತು. ಅದಾದ ಮೇಲೆ ಶಾರದೆ ಪುರಂದರ ದಾಸರ ಹಾಗೂ, ತ್ಯಾಗ ರಾಜರ ಕೆಲವು ಕೀರ್ತನೆಗಳನ್ನೂ ಹಾಡಿ ಕಡೆಯದಾಗಿ "ವೈಷ್ಣವ ಜನತೋ" ಹಾಡಿದಳು. ಅದನ್ನು ಕೇಳುತ್ತಾ ಕೇಳುತ್ತಾ, ಆಯಾಸಗೊಂಡಿದ್ದ ಕಿಟ್ಟಣ್ಣ ಹಾಗೆಯೇ ನಿದ್ರೆ ಹೋಗಿಬಿಟ್ಟನು. ಶಾರದೆ ಕಿಟ್ಟಣ್ಣನಿಗೆ ಸರಿಯಾಗಿ ಹೊದಿಸಿ, ಅಡಿಗೆಯ ಮನೆಯ ಕೆಲಸಗಳನ್ನು ಮುಗಿಸಿ, ತಾನೂ ಹಾಸಿಗೆ ಹಾಸಿ ಮಲಗಿದಳು.

ಮಧ್ಯರಾತ್ರಿಯ ವೇಳೆಗೆ ದೆಹಲಿಯಲ್ಲಿ ನಡೆಯುವ ಕಾರ್ಯಕ್ರಮವನ್ನು ಕೇಳಲು ಶಾರದೆ ಎದ್ದಾಗ ಕಿಟ್ಟಣ್ಣ ಏಕೋ 'ಗೊರ್ ಗೊರ್' ಗುಟ್ಟುತ್ತಿದ್ದ. ಬೆಳಗಿನ ಜಾವದ ಹೊತ್ತಿಗೆ ಕಿಟ್ಟಣ್ಣನ ಗೊರ್ ಗೊರ್ ಗುಟ್ಟುವಿಕೆ ಸಂಪೂರ್ಣ

ವಾಗಿ ನಿಂತುಹೋಗಿತ್ತು. ಶಾರದೆಗೆ ಯಾಕೋ ಅನುಮಾನವಾಗಿ, ಎದ್ದು ಬಂದು ಗಂಡನನ್ನು ಅಲುಗಿಸಿದಳು. ಕಿಟ್ಟಣ್ಣ ಎಚ್ಚರಗೊಳ್ಳಲಿಲ್ಲ. ಅವಳಿಗೆ ಗಾಬರಿಯಾಗಿ ಎದೆಯನ್ನು ಮುಟ್ಟಿ ನೋಡಿದಳು. ಎದೆಯ ಗೂಡಿನ ಹಕ್ಕಿ ಹಾರಿಹೋಗಿತ್ತು !

ಶಾರದೆ ಸ್ತಂಭೀ ಭೂತಳಾಗಿ ನಿಂತುಬಿಟ್ಟಳು. ಅವಳು ಅಳಲಿಲ್ಲ. ಅಳುವ ಚೈತನ್ಯ ಅವಳಲ್ಲಿ ಇದ್ದರೆ ತಾನೇ ? ಅವಳ ಹೃದಯ ದಬದಬನೆ ಬಡಿದುಕೊಂಡಿತು. ಅದು ಒಡೆದು ಚೂರಾಗದಿರಲೆಂದು ಎದೆಯನ್ನು ಬಿಗಿ ಯಾಗಿ ಒತ್ತಿ ಹಿಡಿದಳು. ತಲೆ ಸುತ್ತಿಕೊಂಡು ಬಂತು. ನೆಲಕ್ಕೆ ಪ್ರಜ್ಞಾ ಶೂನ್ಯಳಾಗಿ ಬಿದ್ದುಬಿಟ್ಟಳು. ಅವಳ ಭಾಗಕ್ಕೆ ಎಲ್ಲವೂ ಶೂನ್ಯ. ಎಲ್ಲವೂ ಕತ್ತಲೆ. ಅವಳ ಬಾಳಿನ ಬೆಳಕು ನಂದಿ ಹೋದ ಮೇಲೆ ಕತ್ತಲೆಯಲ್ಲದೆ ಮತ್ತೇನು ?

ಹಾಲಿನವನು ಬಂದು ಹಾಲು ಕೊಡಲು ಬಾಗಿಲು ಬಡಿದ. ಶಾರದೆ ಹಾಲು ತೆಗೆದುಕೊಳ್ಳಲು ಬರಲಿಲ್ಲ. ಅವನು ಕೂಗುವಷ್ಟು ಕೂಗಿ ಸಾಕಾಗಿ ಹಿಂದಿರುಗಿ ಬಿಟ್ಟ. ಹಾಲಿನವನು ಅಷ್ಟು ಗಂಟಲು ಶೋಷಣೆ ಮಾಡಿ ಕೊಂಡಿದ್ದರೂ ಶಾರದೆ ಎದ್ದು ಹೊರಗೆ ಬಾರದೆ ಇದ್ದುದನ್ನು ಕಂಡು ನೆರೆಮನೆ ಯಾಕೆಗೆ ಯಾಕೋ ಭಯವಾಗಿ ಎದ್ದು ಹೋಗಿ ನೂರು ಬಾರಿ ಕೂಗಿದ ಮೇಲೆ ಶಾರದೆ ಎದ್ದು ಬಂದು ಬಾಗಿಲು ತೆಗೆದಳು. ಶಾರದೆಯನ್ನು ಕಂಡು ಆಕೆ ಬೆಚ್ಚದೆ ಇದ್ದುದು ಹೆಚ್ಚು. ಶಾರದೆಯ ಗಂಭೀರವಾದ ಮುಖ. ಕೆಂಪಾದ ಕಣ್ಣುಗಳು ಕೆದರಿದ ತಲೆ. ಎಂತಹವರಿಗೂ ಹೆದರಿಕೆ ಹುಟ್ಟಿಸುತ್ತಿದ್ದವು.

" ಶಾರದೆ ಏಕೆ ಹೀಗಿರುವೆ ? ಏನು ಸಂಗತಿ ? "

ಶಾರದೆ ಮಾತನಾಡದೆ ಗಂಡನ ಹಾಸಿಗೆಯ ಕಡೆ ಕೈ ತೋರಿಸಿದಳು.

" ನನ್ನ ದೇವರು....ನನ್ನ ದೇವರು....ನನ್ನ ಕೈಬಿಟ್ಟರು " ಮುಂದೆ ಮಾತೇ ಬರಲಿಲ್ಲ. ಆಕೆಯು ವಿಷಯವೇನೆಂದು ಅರಿತುಕೊಂಡು ಶಾರದೆಯನ್ನು ಸಮಾಧಾನಪಡಿಸಿ, ಮೋಹನರಾಯರ ಮನೆಗೆ ಫೋನು ಮಾಡಿದಳು. ಅಲ್ಲದೆ ಸುಮಿತ್ರೆಗೆ ಕೂಡಲೇ ಹೊರಟು ಬರುವಂತೆ ತಂತಿಕೊಟ್ಟಳು.

ಮೋಹನರಾಯರು ಓಡುತ್ತಾ ಬಂದರು. ಅವರ ಹಿಂದೆ ಸುನಂದೆ. ಬೊಂಬಾಯಿಯಲ್ಲಿ ತಮಗಿರುವ ಏಕೈಕ ಬಂಧುವಾದ ಆ ದಂಪತಿಗಳನ್ನು

ಕಂಡು ಶಾರದೆಯ ದುಃಖದ ಕಟ್ಟೆ ಕಿತ್ತುಹೋಗಿ 'ಹೋ' ಎಂದು ಅತ್ತಳು. ಸುನಂದೆ ಶಾರದೆಯನ್ನು ಎಡಬಿಡದೆ ಸಮಾಧಾನ ಪಡಿಸಿದಳು. ಮೋಹನ ರಾಯರು ಅಂತಿಮ ಕಾರ್ಯಗಳ ಕಡೆ ಗಮನ ಕೊಟ್ಟರು.

ಶಾರದೆಯ ಇಚ್ಛೆಯಂತೆ, ಸುಮಿತ್ರೆ ಸದಾಶಿವರು ಬಂದಾರೆಂದು. ಸಂಜೆಯತನಕ ಕಿಟ್ಟಣ್ಣನ ಕಳೇ ಬರುವನ್ನು ಮನೆಯಲ್ಲಿಯೇ ಇಟ್ಟಿದ್ದರು. ಸಂಜೆಯ ವೇಳೆಗೆ ಸದಾಶಿವ ಸುಮಿತ್ರೆಯರು ವಿಮಾನದಲ್ಲಿ ಬಂದು ಇಳಿದರು. ಈ ವೇಳೆಗಾಗಲೇ ಅವರು ಬರುವುದಿಲ್ಲವೆಂದು ಕಿಟ್ಟಣ್ಣನ ದೇಹವನ್ನು ಸ್ಮಶಾನಕ್ಕೆ ಸಾಗಿಸಿದ್ದರು. ಶಾರದೆ ತಾನೇ ಮಾರ್ಕೆಟ್ಟಿಗೆ ಹೋಗಿ, ಮನಸ್ಸು ಬಂದಷ್ಟು ಹೂಗಳನ್ನು ತಂದು ಕಿಟ್ಟಣ್ಣನಿಗೆ ಅಲಂಕರಿಸಿದ್ದಳು. ಕಿಟ್ಟಣ್ಣನ ಅಂತಿಮ ಯಾತ್ರೆ ಅಬ್ಬರವಿಲ್ಲದೆ ಸರಳವಾಗಿ ನಡೆಯಿತು. ಇದನ್ನು ನೋಡಿದ ಜನ " ಪುಣ್ಯಾತ್ಮ ದೇಶಸ್ವತಂತ್ರವಾದ ಮೇಲೆ ಸತ್ತಿದ್ದಾನೆ " ಎಂದುಕೊಂಡರು. ಮತ್ತೆ ಕೆಲವರು " ಹಬ್ಬದದಿನ ಎಂತಹ ಅಮಂಗಳ " ಎಂದುಕೊಂಡರು.

ಕಿಟ್ಟಣ್ಣ ದಹನ ಭೂಮಿಯಲ್ಲಿ ರಾಜ ಠೀವಿಯಿಂದ ಮಲಗಿದಂತಿತ್ತು. ಅವನು ಸತ್ತು ಇಪ್ಪತ್ತು ಗಂಟೆಗಳಾಗಿದ್ದರೂ ಅವನ ಮುಖದ ಕಳೆ ಬಾಡಿರಲಿಲ್ಲ. ಇನ್ನೇನು ಕಟ್ಟಿಗೆ ಪೇರಿಸುವ ಕೆಲಸಕ್ಕೆ ಆರಂಭವಾಗಬೇಕು ಎನ್ನುವಾಗ ಸುಮಿತ್ರೆ ಸದಾಶಿವರು ಕಾಣಿಸಿಕೊಂಡರು. ಅವರಿಗೆ ಕಿಟ್ಟಣ್ಣನ ಅಂತಿಮ ದರ್ಶನದ ಭಾಗ್ಯವಿತ್ತು. ಸುಮಿತ್ರೆ ಕಿಟ್ಟಣ್ಣನ ದೇಹದ ಮೇಲೆ ಹೂ ಹಾಕಿ ಅವನ ಪಾದಗಳಿಗೆ ನಮಸ್ಕರಿಸಿ, ಶಾರದೆಯನ್ನು ಅಪ್ಪಿಕೊಂಡು ಅಳುತ್ತಾ ನಿಂತುಬಿಟ್ಟಳು.

ಚಿತೆಯೊಡ್ಡುವ ಕೆಲಸ ಪೂರೈಸಿ ಪುರೋಹಿತರ ಮಂತ್ರಘೋಷ ದೊಡನೆ ಅಗ್ನಿ ಪ್ರತಿಷ್ಠಾಪನೆಯಾಯಿತು. ಒಣಗಿದ ಕಟ್ಟಿಗೆ ಕ್ಷಣಕಾಲದಲ್ಲಿ ಹೊತ್ತಿಕೊಂಡು ಬೆಂಕಿಯ ಉರಿನಾಲಿಗೆ ಆಕಾಶಕ್ಕೆ ಹಾರಿತು. ಜ್ವಾಲೆಯಿಂದ ಹೊರಟ ಕಿಡಿಗಳು ವಾಯು ಮಂಡಲದಲ್ಲಿ ಮಾಯವಾದುವು. ದಗದಗಿಸುತ್ತಿದ್ದ ಬೆಂಕಿಯಲ್ಲಿ ಅಲ್ಲಿದ್ದವರ ಮುಖ ಕೆಂಪಗೆ ಮಿನುಗುತ್ತಿತ್ತು.

ಶಾಸ್ತ್ರಿಗಳು ವೇದಮಂತ್ರ ಹೇಳಿದರು.

ಸತ್ಯಮುಗ್ರಸ್ಯ ಬೃಹತಃ ಸಂಸವಂತಿ ಸಂಸ್ರಾವಾಃ

ಸಂಯಂತಿ ರಸಿನೋ ರಸಾಃ ಪುನಾನೋ ಬ್ರಹ್ಮಣಾ.

ಹರ ಇಂದ್ರಾಯೋನ್ದೊ ಪರಿಸ್ರವಃ

( ಸತ್ಯಮಯನೂ ಸರ್ವಶಕ್ತನೂ ಆದ ಭಗವಂತನ ನಾನಾ ಐಶ್ವರ್ಯಗಳು ಹರಿಯುತ್ತಿವೆ. ಆನಂದದ ರಸ ಉಕ್ಕುತ್ತಿದೆ. ಎಲೈ ಜೀವವೇ, ನೀನು ಆ ಪ್ರಭುವನ್ನು ಸೇರಲು ಮುಂದೆ ನಡೆ........ )

ಯತ್ರ ಜ್ಯೋತಿ ರಜಸ್ರಂ ಯಸ್ಮಿನ್ ಲೋಕೇ ಸ್ವರ್ಹಿತಮ್

ತಸ್ಮಿನಾಂ ದೇಹಿ ಪವಮಾನಾವ್ಯತೇ ಲೋಕೇ ಅಕ್ಷಿತ

ಇಂದ್ರಾಯೋನ್ದೇ ಪರಿಸ್ರವಃ

( ಹೇ ಪರಮ ಪಾವನ ಪ್ರಭೋ, ಸದಾ ಪ್ರಕಾಶ, ಸುಖವಿರುವ ಅಮೃತ ಅಕ್ಷಯ ಲೋಕದಲ್ಲಿ ನನ್ನನ್ನು ಇರಿಸು. ಎಲೈ ಜೀವವೇ, ನೀನು ಆ ಶ್ರೀಮಂತ ಪ್ರಭುವನ್ನು ಸೇರಲು ಮುಂದೆ ನಡೆ. )

ಶಾಸ್ತ್ರಿಗಳ ಗಂಭೀರ ವಾಣಿಯಲ್ಲಿ ಬರುತ್ತಿದ್ದ ವೇದಮಂತ್ರಗಳು ಸ್ಮಶಾನದ ನೀರವತೆಯಲ್ಲಿ ಭವ್ಯವಾಗಿ ಕೇಳಿಸುತ್ತಿದ್ದವು. ಆಲಿಸಿದವರ ಹೃದಯಗಳಲ್ಲಿ ಸರ್ವಶಕ್ತನಾದ ಭಗವಂತನ ವಿಷಯದಲ್ಲಿ ಅನನ್ಯ ಭಕ್ತಿಭಾವ ಉಕ್ಕೇರಿತ್ತು.

ಶಾಸ್ತ್ರಿಗಳು ಮಂತ್ರ ಹೇಳುತ್ತಲೇ ಇದ್ದರು. ಕಿಟ್ಟಣ್ಣನ ದೇಹದ ಪಂಚಭೂತಗಳು ಕ್ರಮಕ್ರಮವಾಗಿ ಮಾರ್ಪಾಡು ಹೊಂದುತ್ತಾ ನಡೆದವು. ಅವನ ಶರೀರದ ಭೂಮಾತೆಯ ಅಂಶ ಪೃಥ್ವಿಯಲ್ಲಿಯೂ, 'ತಾತವಾಯು' ವಾಯುವಿನಲ್ಲಿಯೂ, ಮಿತ್ರ ತೇಜಸ್ಸು ತೇಜಸ್ಸಿನಲ್ಲಿಯೂ, ಬಂಧುಜಲ ಜಲದಲ್ಲಿಯೂ, ಸಹೋದರ ಆಕಾಶ ಆಕಾಶದಲ್ಲಿಯೂ ಕರಗಿ ಹೋಯಿತು.

ಶಾರದೆ ಶಿಲಾಮೂರ್ತಿಯಂತೆ ನಿಂತು ಭಸ್ಮೀಭೂತವಾಗುತ್ತಿರುವ ಚಿತೆಯನ್ನು ನೋಡುತ್ತಿದ್ದಳು. ಅವಳ ಅಂತಃಚಕ್ಷುವಿಗೆ ಕಿಟ್ಟಣ್ಣನು ಚಿತೆಯಿಂದ ಸಶರೀರನಾಗಿ ಮೇಲೆದ್ದು ಬಂದು ಹೀಗೆ ಹೇಳಿದಂತಾಯಿತು.

"ನಾನು ಸತ್ತಿರುವೆನೆಂದು ತಿಳಿದೆಯಾ ಶಾರದೆ. ನೋಡು ನಾನು ಸತ್ತಿರುವೆನೇನೋ........ನಾನು ಸತ್ತಿಲ್ಲ. ಹುಟ್ಟು-ಸಾವುಗಳು ನನ್ನ ದೇಹಕ್ಕೆ. ನನ್ನ ಆತ್ಮಕ್ಕಲ್ಲ. ಅದು ತನ್ನ ಗುರಿ ಮುಟ್ಟುವತನಕ ಶರೀರಗಳನ್ನು ಆಶ್ರಯಿಸುವುದು. ಆದ್ದರಿಂದ ನೀನು ನಾನು ಸತ್ತಿರುವೆನೆಂದು ರೋದಿಸಬಾರದು. "

ಹೂಂ ಹೌದು. ಕಿಟ್ಟಣ್ಣ ಸತ್ತಿಲ್ಲ. ಯಾರ ಸತ್ಕೀರ್ತಿಗೆ ಅಳಿವಿಲ್ಲವೋ ಅಂಥವನಿಗೆ ಸಾವೆಲ್ಲಿಯದು? ಶಾರದೆ ತನ್ನ ನಿಸ್ವಾರ್ಥ ಸೇವೆಯಿಂದ, ಜಗ

ತ್ಕಲ್ಯಾಣಕ್ಕಾಗಿ ತಪಸ್ಸು ಮಾಡಿದರೆ ಕಿಟ್ಟಣ್ಣನ ಕೀರ್ತಿ ಅಮರವಾಗುವುದು. ಹೀಗಿರುವಲ್ಲಿ ಕಿಟ್ಟಣ್ಣ ಸತ್ತಿರುವನೆಂಬ ಮಾತು ಸುಳ್ಳು.

ಇಂತು ನಂಬಿದ ಶಾರದೆ, ಸ್ಮಶಾನದಿಂದ ಹೊರಬೀಳುವಾಗ, ಹೊಸ ವ್ಯಕ್ತಿಯಾಗಿ ಹೊರಬಿದ್ದಳು. ಅವಳು ಆ ದಿನವೇ ತನ್ನ ಎಲ್ಲ ಭೋಗಕ್ಕೆ ತಿಲಾಂಜಲಿ ಕೊಟ್ಟುಬಿಟ್ಟಳು. ಈಗ ಶಾರದೆಯ ಬಾಳು ಶುದ್ಧ ಅಪರಂಜಿ. ಅದನ್ನು ಭಗವದರ್ಪಣ ಮಾಡಲು ಶಾರದೆ ಜನತಾ ಸೇವೆಯ ವ್ರತ ತೊಟ್ಟಳು. ತನ್ನದೆನ್ನುವ ಎಲ್ಲವನ್ನೂ ತೊರೆದಳು. ತನ್ನವರೆನ್ನುವ ಸಕುಂಚಿತ ಮೋಹ ಮಮತೆಗಳನ್ನು ಕಡಿದೊಗೆದು ಇಡೀ ಜಗತ್ತನ್ನು ತನ್ನದೆಂದುಕೊಂಡಳು. ಜಗತ್ತಿನ ದೀನರ, ನೊಂದವರ ಸೇವೆಗೆ ತನ್ನ ದೇಹವನ್ನು ಮುಡುಪಿಟ್ಟಳು. ಅವಳೊಬ್ಬ ಸನ್ಯಾಸಿನಿ. ಲೋಕವೇ ಅವಳ ಸಂಸಾರ. ನಿಸ್ವಾರ್ಥ ಸೇವೆಯೇ ಅವಳ ಜೀವನದ ಗುರಿ—ಬಾಳಿನ ತಪಸ್ಸು!

ಸುಮಿತ್ರೆ ಶಾರದೆಯನ್ನು ತನ್ನೊಡನೆ ಮೈಸೂರಿಗೆ ಬರಬೇಕೆಂದು ಎಷ್ಟೋ ಬಲವಂತ ಮಾಡಿದಳು. ಆದರೆ ಶಾರದೆ ಬರಲೊಪ್ಪಲಿಲ್ಲ.

"ಹಾಗಾದರೆ ಎಲ್ಲಿಗೆ ಹೋಗುತ್ತೀ? ಏನು ಮಾಡುತ್ತೀ?" ಎಂದು ಪ್ರಶ್ನಿಸಿದಳು ಸುಮಿತ್ರೆ.

ಶಾರದೆ ಆ ವಿಷಯವನ್ನು ಯೋಚಿಸಿ ನಿರ್ಧರಿಸಿಕೊಂಡಿದ್ದಳು.

ಅವಳ ಮನಸ್ಸು ಬಂಗಾಳದ ಕಡೆಗೆ ಹರಿದಿತ್ತು. ಅಲ್ಲಿ ಗಾಂಧೀಜಿಯವರು ಹಿಂದೂ ಮುಸಲ್ಮಾನರ ನಡುವೆ ಹುಟ್ಟಿಕೊಂಡಿದ್ದ ಹಾಲಾಹಲವನ್ನು ಹೋಗಲಾಡಿಸುವ ಪ್ರಯತ್ನದಲ್ಲಿ ಇದ್ದರು. ಭಾರತಕ್ಕೆ ಬಂಧವಿಮೋಚನೆ ದೊರೆತ ಆ ದಿನ, ಸ್ವಾತಂತ್ರ್ಯ ದೇವಿಯನ್ನು ಎದುರುಗೊಳ್ಳಲು ನಾಡಿನ ನಾಯಕರು ನವದೆಹಲಿಯಲ್ಲಿ ಸೇರಿದ್ದಾಗ ರಾಷ್ಟ್ರಪಿತನೂ, ನವಭಾರತ ಶಿಲ್ಪಿಯೂ ಆಗಿದ್ದ ಗಾಂಧೀಜಿ ಕಲ್ಕತ್ತೆಯಲ್ಲಿ ಹಿಂದೂ ಮುಸ್ಲಿಂ ಸಖ್ಯಕ್ಕಾಗಿ ದುಡಿಯುತ್ತಿದ್ದರು. ಗಾಂಧೀಜಿಗೆ ಸ್ವಾತಂತ್ರ್ಯೋತ್ಸವಕ್ಕಿಂತಲೂ ತಾವು ಕೈಗೊಂಡಿದ್ದ ಕೆಲಸ-ಪಾಪಿಗಳ ಪಾಪವನ್ನು ತೊಳೆಯುವ ಕೆಲಸ—ಮಹತ್ತರವಾಗಿ ಕಂಡಿತ್ತು. ಶಾರದೆ ತನ್ನ ಭವಿಷ್ಯವನ್ನು ಗಾಂಧೀಜಿ ಕೈಕೊಂಡಿದ್ದ ಹಿಂದೂ ಮುಸ್ಲಿಂ ಸಖ್ಯದ ಪವಿತ್ರ ಕಾರ್ಯದಲ್ಲಿ ಕಳೆಯಬೇಕೆಂದು ನಿರ್ಧರಿಸಿದಳು. ತನ್ನ ಪತಿಯು ಯಾವ ವಿಷವೃಕ್ಷದ ಫಲವನ್ನುಂಡು ತೀರಿಕೊಂಡನೋ

ಆ ವಿಷವೃಕ್ಷವನ್ನು ಬೇರುಸಹಿತ ನಿರ್ಮೂಲಗೊಳಿಸುವುದಕ್ಕಿಂತಲೂ ಪವಿತ್ರ ಕಾರ್ಯ ಉಂಟೇ?

ಶಾರದೆ ಗಾಂಧೀಜಿಯ ಬಳಿಗೆ ಹೋಗುವ ನಿರ್ಧಾರವನ್ನು ಕೇಳಿ ಸುಮಿತ್ರೆ ಅವಳನ್ನು ತಮ್ಮೊಡನೆ ಬರಲು ಬಲವಂತ ಪಡಿಸಲಿಲ್ಲ. ಶಾರದೆಯ ದೃಢ ಸಂಕಲ್ಪ, ಸತ್ಯ ಪ್ರತಿಜ್ಞೆಯ ಮುಂದೆ ತನ್ನ ಕೋರಿಕೆ ಕೈಗೂಡುವುದಿಲ್ಲ ವೆಂದು ಸುಮಿತ್ರೆಗೆ ತಿಳಿದಿತ್ತು. ಹೀಗಾಗಿ ಅವಳು ಹಠ ಮಾಡಲಿಲ್ಲ.

## ೧೪

ಶಾರದೆ ಎಲ್ಲರ ಬಂಧನವನ್ನು ತೊರೆದು ಸೇವಾ ದೀಕ್ಷೆಯ ಪಥದಲ್ಲಿ ಬಾಪುವಿನ ಹೆಜ್ಜೆಯನ್ನು ಅನುಸರಿಸಿ ಅತ್ತ ಹೊರಟು ಹೋದ ಮೇಲೆ, ಇತ್ತ ಭಾರವಾದ ಹೃದಯವನ್ನು ಹೊತ್ತು ಮೈಸೂರಿಗೆ ಮರಳಿದ ಸುಮಿತ್ರೆಯ ಜೀವನ ಅನೇಕ ದಿನಗಳ ವರೆಗೆ ಅಶಾಂತಿಯಿಂದ ಕೂಡಿತ್ತು. ಹೀಗೆಂದು ಹೇಳಲಾಗದ ಅವ್ಯಕ್ತ ನೋವು ಅವಳ ಹೃದಯವನ್ನು ಹಿಂಡುತ್ತಿತ್ತು. ಅವಳು ಅನೇಕ ದಿನಗಳ ವರೆಗೆ ಈತನಕ ನಡೆದ ಎಲ್ಲ ಘಟನೆಗಳನ್ನು ಮರಳಿ ಮರಳಿ ಜ್ಞಾಪಿಸಿಕೊಂಡು ದುಃಖಿಸುತ್ತಿದ್ದಳು.

ಅವಳಿಗೆ ತನ್ನ ಬಾಲ್ಯದ ಅನೇಕ ಸಂಗತಿಗಳು ನೆನಪಾಗುತ್ತಿತ್ತು. ಸುಮಿತ್ರೆಯನ್ನು ತನ್ನ ಎರಕದಲ್ಲಿ ರೂಪಿಸಿ, ಒಬ್ಬ ವ್ಯಕ್ತಿಯನ್ನಾಗಿ ಮಾಡಿದ ಶಾರದೆ ಸುಮಿತ್ರೆಯ ಪಾಲಿಗೆ ಮಹಾತ್ಮಳಾಗಿ ತೋರಿದ್ದಳು. ತನ್ನ ತಂದೆ ತಾಯಿಗಳು ತನ್ನನ್ನು ದೈವದ ಉಡಿಯಲ್ಲಿ ಹಾಕಿ ಹಳ್ಳಿ ಜೀವನವನ್ನು ಅರಸಿ ಹೊರಟು ಹೋದಾಗ ಶಾರದೆ ಅವಳ ಪಾಲಿನ ದೈವವಾಗಿ ಬಂದಿದ್ದಳು. ಅಷ್ಟುಮಾತ್ರವೇ ಅಲ್ಲ, ತನ್ನನ್ನು ಹೊಟ್ಟೆಯ ಮಗಳಿಗೂ ಅತಿಶಯವಾಗಿ ನೋಡಿಕೊಂಡು, ತನ್ನ ವಿದ್ಯಾಪ್ರಗತಿಗೆ ನೆರವಾದುದಲ್ಲದೆ, ತನಗೆ ಎಲ್ಲ ರೀತಿಯಲ್ಲಿ ಆದರ್ಶನೆನಿಸಿದ್ದ ಯೋಗ್ಯ ಪತಿಯ ಉಡಿಯಲ್ಲಿ ಹಾಕಿ ತನ್ನ ಕೆಲಸವನ್ನು ಮುಗಿಸಿದ್ದಳು.

ಸುಮಿತ್ರೆ ಮಡಿಕೇರಿಯ ಜೀವನ, ಮೈಸೂರಿನ ಜೀವನಗಳನ್ನು ನೆನಪು ಮಾಡಿಕೊಂಡು ಆ ದಿನಗಳು ಮತ್ತೆ ಬಾರವೇ ಎಂದು ಹಂಬಲಿಸಿದಳು. ಆದರೆ ಶಾರದೆಯ ತೋಳತೆಕ್ಕೆಯಲ್ಲಿ ಶಿಶುವಾಗಿ ಆಶ್ರಯ ಪಡುವ ಋಣ ಸುಮಿತ್ರೆಗೆ ಹೆಚ್ಚು ಕಾಲ ಇರಲಿಲ್ಲ. ಶಾರದೆ ಮೈಸೂರು ಬಿಟ್ಟು, ವಿಧಿ ಸೆಳೆದತ್ತ ನಡೆದ ಮೇಲೆ ಶಾರದೆಯನ್ನು ತನ್ನವಳಾಗಿ ಉಳಿಸಿಕೊಳ್ಳುವ ಭಾಗ್ಯ ತನಗಿಲ್ಲದುದಕ್ಕಾಗಿ ಅವಳು ತನ್ನ ಹೀನ ಅದೃಷ್ಟವನ್ನು ಅನೇಕ ಬಾರಿ ಹಳಿದುಕೊಂಡಿದ್ದಳು.

ಅವಳ ಪರೀಕ್ಷೆ ಮುಗಿದು, ವ್ಯಾಸಂಗ ಪೂರ್ಣಗೊಂಡಿದ್ದರೆ, ಅವಳು ಶಾರದೆಯ ಬೆನ್ನು ಹತ್ತುತ್ತಿದ್ದಳೋ ಏನೋ. ಆದರೆ ಅವಳಿನ್ನೂ ಮೆಡಿಕಲ್ ಕಾಲೇಜಿನಲ್ಲಿ ಕಡೆಯ ವರ್ಷದ ವಿದ್ಯಾರ್ಥಿನಿ. ಅದು ಮುಗಿಯದ ಹೊರತು ಅವಳ ಜೀವಿತೋದ್ದೇಶ ಸಾಧಿತವಾಗದು. ಅದನ್ನು ಮುಗಿಸಲೇ ಬೇಕಾಗಿತ್ತು. ಅದಕ್ಕಾಗಿ ಮತ್ತೆ ಮೈಸೂರಿಗೆ ಬಂದು, ಮತ್ತೆ ಹಾಸ್ಟೇಲಿಗೆ ಶರಣು ಬಂದು ತನ್ನ ವ್ಯಾಸಂಗಕ್ಕೆ ತೊಡಗಿದ್ದಳು.

ಈ ಬಾರಿಯ ಹಾಸ್ಟೆಲು ಜೀವನ, ಕಾಲೇಜಿನ ಜೀವನ ಸುಮಿತ್ರೆಯ ಪಾಲಿಗೆ ಎಲ್ಲ ರೀತಿಯ ಆಕರ್ಷಣೆ, ಸೊಗಸನ್ನು ಕಳೆದುಕೊಂಡಿತ್ತು. ಅವಳ ಬೇಸರಗೊಂಡಿದ್ದ ಮನಸ್ಸಿಗೆ ಯಾವುದೂ ಬೇಕಿರಲಿಲ್ಲ. ಯಾವುದರಲ್ಲಿಯೂ ಆಸಕ್ತಿಯಿರಲಿಲ್ಲ. ಎಲ್ಲವೂ ಯಾಂತ್ರಿಕ. ಓದಬೇಕು—ಓದುತ್ತಿದ್ದಳು. ಕಾಲೇಜಿಗೆ ಹೋಗಬೇಕು—ಹೋಗುತ್ತಿದ್ದಳು. ಅಷ್ಟೇ. ಅವಳು ಬಹುಮಟ್ಟಿಗೆ ತನ್ನ ವಿರಾಮವನ್ನೆಲ್ಲ ಕೋಣೆಯಲ್ಲಿ ಕುಳಿತು ಓದುವುದರಲ್ಲಿ ಕಳೆಯುತ್ತಿದ್ದಳು. ಓದುವುದು ಬೇಸರವಾಯಿತೆಂದರೆ ತನ್ನ ಗೆಳತಿಯರಾದ ಹಂಸ, ಲೀಲಾವತಿ ಇವರೊಂದಿಗೆ ಅದೂ ಇದೂ ಮಾತು ಕತೆ—ಇಲ್ಲ ಸಂಚಾರಗಳಲ್ಲಿ ಅವಳ ವಿರಾಮವೆಲ್ಲ ಮುಗಿದು ಹೋಗುತ್ತಿತ್ತು.

ಎಷ್ಟೋ ಬಾರಿ ಸಂಜೆ ಬೇರೆ ಯಾವ ಕೆಲಸವಿಲ್ಲದೆ ಹಾಸ್ಟೆಲಿನ ಆವರಣದ ಶಿಲಾಸನದ ಮೇಲೆ ಕುಳಿತುಕೊಂಡು ದಿಗಂತ ಮುಖಿಯಾಗಿ ಹಿಂದಿನ ನೆನಪುಗಳನ್ನೂ ಮುಂದಿನ ಹೊಂಗನಸುಗಳನ್ನೂ ಒಮ್ಮೆಲೆ ತೋಡಿಕೊಳ್ಳುತ್ತಾ ಮೈಮರೆಯುತ್ತಿದ್ದಳು. ಆಗ ಅವಳಿಗೆ ತಾನು ಕಿಟ್ಟಣ್ಣ ಶಾರದೆಯರೊಂದಿಗೆ ಇನ್ನೂ ಇರುವಂತೆ ಅನಿಸುತ್ತಿತ್ತು. ಆದರೆ ವಾಸ್ತವ ಸತ್ಯದ ಬಿಸಿಲು ಅವಳ

ಕನಸಿನ ಮಂಜನ್ನು ಕರಗಿಸಿದಾಗ ಅವಳ ಪಾಲಿಗೆ ಉಳಿಯುತ್ತಿದ್ದುದು ಕಠೋರ ವಾದ ಜಗತ್ತು—ಅದರ ನಿಷ್ಠುರವಾದ ಬಾಳು ಬದುಕು.

ಸುದರ್ಶನ, ಕಿಟ್ಟಣ್ಣ ಜೀವದಿಂದ ಇರುವ ತನಕ ಶಾರದೆಯ ಪಾಲಿಗೆ ತನ್ನದೆನ್ನುವ ಸಂಸಾರವಿತ್ತು. ಸುಮಿತ್ರೆಯ ಪಾಲಿಗೆ ಒಂದು ತವರು ಮನೆ ಇತ್ತು. ಆದರೆ ಅವರು ಸುಮಿತ್ರೆ ಇಲ್ಲವಾದ ಮೇಲೆ, ಶಾರದೆ ಬೃಹತ್ ಸಂಸಾರಿಯಾದ ಮೇಲೆ ಸುಮಿತ್ರೆಯ ಪಾಲಿಗೆ ತನ್ನದೆನ್ನುವ ಮನೆಯೇ ಇಲ್ಲವಾಯಿತು. ಅವಳಿಗೆ ತಾನು ಅನಾಥೆ ಎಂಬ ಭಾವನೆ ಬಾರಿಬಾರಿಗೂ ಬರುತ್ತಿತ್ತು.

ಸುಮಿತ್ರೆಗೆ ತನ್ನನ್ನು ಹೆತ್ತ ತಂದೆ ತಾಯಿಗಳ ಕಲ್ಪನೆ ಬರುತ್ತಲೇ ಇರಲಿಲ್ಲ. ತನ್ನ ಓದಿಗೆ, ಜ್ಞಾನಾರ್ಜನೆಗೆ ಭಂಗ ತರಲೆತ್ನಿಸಿದ ಆ ತಂದೆಯ ಮೇಲೆ ತುಂಬ ಸಿಟ್ಟಿತ್ತು. ಅವರು ತನ್ನ ಇಷ್ಟದ ವಿರುದ್ಧ ಮೋಸದ ಮದುವೆ ಮಾಡಿ, ತನ್ನ ಭವಿಷ್ಯದ ಬದುಕನ್ನು ಹಾಳು ಮಾಡಲೆತ್ನಿಸಿದ್ದೂ, ತನ್ನ ತಲೆಯ ಕೂದಲಿಗೆ ಸಂಚಕಾರ ತರಲೆತ್ನಿಸಿ, ಸಾಯುವ ತನಕ ವಿಧವೆಯ ಪಟ್ಟ ಕಟ್ಟಬೇಕೆಂಬ ಅವರ ಹಂಚಿಕೆ—ಇವುಗಳೆಲ್ಲ ನೆನಪಾಗಿ ಅವಳ ಮೈ ಜುಂ ಎನ್ನುತ್ತಿತ್ತು. ಮನಸ್ಸು ಸಿಡಿಸಿಡಿಯಾಗುತ್ತಿತ್ತು. ಆದುದರಿಂದಲೇ ಕಹಿ ನೆನಪುಗಳ ಕೇಂದ್ರವಾದ ಆ ಜೀವನ—ತಂದೆ ತಾಯಿಯ ಜೊತೆಯಲ್ಲಿ ತಾನು ಕಳೆದ ಆ ದಿನಗಳನ್ನು ನೆನೆಯಲು ಅವಳಿಗೆ ಬೇಸರವಾಗುತ್ತಿತ್ತು.

ಶಾರದೆಯ ಜೊತೆಯಲ್ಲಿ ಇರುವ ತನಕ ಅವಳಿಗೆ ತನ್ನ ತಂದೆ ತಾಯಿಗಳ ನೆನಪು ಅಷ್ಟಾಗಿ ಬರುತ್ತಿರಲಿಲ್ಲ. ಈಗ ತಾಯಿಗಿಂತಲೂ ಅತಿಶಯಳಾಗಿದ್ದ ಶಾರದೆ ತನ್ನ ಭಾಗಕ್ಕೆ ಇದ್ದೂ ಇಲ್ಲದ ವ್ಯಕ್ತಿ! ತಂದೆಯಂತೆ ಪ್ರೀತಿಸಿ ವಾತ್ಸಲ್ಯ ತೋರಿಸಿದ್ದ ಕಿಟ್ಟಣ್ಣ, ಸುದರ್ಶನರು ಮರಳದ ಲೋಕಕ್ಕೆ ನಡೆದಿದ್ದರು. ಅವರು ಸುಮಿತ್ರೆಯ ಪಾಲಿಗೆ ಎಂದೆಂದಿಗೂ ಇಲ್ಲವಾದ ವ್ಯಕ್ತಿಗಳು. ಇವರೆಲ್ಲರಿಂದ ದೂರ ಸರಿದ ಮೇಲೆ ಅವಳ ಮನಸ್ಸು ಸಹಜವಾಗಿಯೇ ತನ್ನ ಗಂಡ ಸದಾಶಿವ, ತನ್ನ ಅತ್ತೆ ಮಾವಂದಿರಾದ ಪಾರ್ವತಮ್ಮ, ಮಂಜಯ್ಯನವರ ಕಡೆ ಹರಿಯುತ್ತಿತ್ತು. ಆಗ ಎಂದಾದರೊಮ್ಮೆ ಮಡಿಕೇರಿಯ ಬಾಲ್ಯದ ಗತ ಸ್ಮೃತಿಗಳು ನೆನಪಿಗೆ ಬಂದು—ತನ್ನ ತಾಯಿ ತಂದೆಗಳ ನೆನಪೂ ಅವರ ಬೆನ್ನಿಗೆ ಬಂದುಬಿಡುತ್ತಿತ್ತು. ಆಗಂತೂ ಸುಮಿತ್ರೆ ತುಂಬಾ ಅಸುಖಿಯಾಗುತ್ತಿದ್ದಳು.

ಅವಳ ಗೆಳತಿಯರು ಆ ವೇಳೆಯಲ್ಲಿ, ಸುಮಿತ್ರೆಗೆ ಯಾವ ವಿಧವಾದ ಸಮಾಧಾನ ಹೇಳಲಾರದವರಾಗಿದ್ದರು. ಅವಳಿಗೆ ಕೆಲಮಟ್ಟಿಗಾದರೂ ಸಮಾಧಾನ ಶಾಂತಿಗಳನ್ನು ತರಬಲ್ಲ ವ್ಯಕ್ತಿಎಂದರೆ ಅದು ಸದಾಶಿವ. ಅವನು ಶಾರದೆ ಹಾಗೂ ಸುಮಿತ್ರೆಯರ ಅಪೂರ್ವ ರೀತಿಯ ಸಂಬಂಧವನ್ನು ಮೊದಲಿನಿಂದಲೂ ಕಂಡಿದ್ದವನು. ಶಾರದೆ ತಮ್ಮ ಭಾಗಕ್ಕೆ ಕೈಗೆ ಸಿಗದ ವ್ಯಕ್ತಿಯಾದ ಮೇಲೆ ಸುಮಿತ್ರೆ ತಾಯಿಯನ್ನು ಕಳೆದುಕೊಂಡ ಕರುವಿನಂತೆ ಆಗಿರುವಳೆಂದು ಸದಾಶಿವ ಬಲ್ಲ. ಅವನು ತನ್ನ ಶನಿವಾರ, ಭಾನುವಾರ, ಇನ್ನಿತರ ರಜಾ ದಿನಗಳನ್ನು ಮೈಸೂರಿನಲ್ಲಿಯೇ ಕಳೆಯುತ್ತಿದ್ದ.

ಅವನು ಸುಮಿತ್ರೆಯ ಜೊತೆಯಲ್ಲಿ ಲಲಿತಾದ್ರಿ, ಚಾಮುಂಡಿ ಬೆಟ್ಟ, ಬೃಂದಾವನ, ತಂಡೀಸಾದಕ್, ಕುಕ್ಕರಹಳ್ಳಿಕೆರೆ ಏರಿ ಮೊದಲಾದ ಪ್ರಶಾಂತತಾಣಗಳಲ್ಲಿ ಕುಳಿತು ಸುಮಿತ್ರೆಯ ವೈಮನಸ್ಸಿನ ಅಶಾಂತಿಯನ್ನು ಕಳೆಯಲೆತ್ನಿಸುತ್ತಿದ್ದ. ಎಷ್ಟೋ ಬಾರಿ ಸುಮಿತ್ರೆ ಶಾರದೆ ಕಿಟ್ಟಣ್ಣನನ್ನು ನೆನೆಸಿಕೊಂಡು ಎಳೆ ಮಗುವಿನಂತೆ ಅಳುತ್ತಾ ಕೂತು ಬಿಡುತ್ತಿದ್ದಳು. ಆಗ ಸದಾಶಿವ ಸುಮಿತ್ರೆಯನ್ನು ಮಗುವಿನಂತೆ ಸಮಾಧಾನ ಪಡಿಸುತ್ತಿದ್ದ.

ಪತಿಯ ಸಾನಿಧ್ಯ, ಸ್ನೇಹಮಯ ಮಾತುಗಳಿಂದ ಅವಳ ನೊಂದ ಹೃದಯಕ್ಕೆ ಎಷ್ಟೋ ಹಾಯ್ ಎನಿಸುತ್ತಿತ್ತು. ಅವಳು ಸದಾಶಿವನ ವಕ್ಷಸ್ಥಳದಲ್ಲಿ ತಲೆ ಇಟ್ಟು ತನ್ನ ಹೃದಯದ ದುಗುಡವನ್ನೆಲ್ಲ ಮರೆತು ತಾಸುತಾಸುಗಳ ತನಕ ಕುಳಿತುಬಿಡುತ್ತಿದ್ದಳು. ಅವಳಿಗೆ ಆ ಗಳಿಗೆಯಲ್ಲಿ ತನ್ನ ತಾಯಿ ತಂದೆ, ಬಂಧು ಬಳಗ ಸಮಸ್ತವೂ ಸದಾಶಿವನೇ ಆಗಿರುವಂತೆ ಅನಿಸಿ ಅವಳ ಜೀವಕ್ಕೆ ಎಷ್ಟೋ ಸಮಾಧಾನವಾಗುತ್ತಿತ್ತು. ಸದಾಶಿವನೂ ಸುಮಿತ್ರೆಯ ಸೂಕ್ಷ್ಮ ಭಾವನೆಗಳನ್ನು ಕೂಲಂಕಷವಾಗಿ ತಿಳಿದಿದ್ದುದರಿಂದ ಅವನು ಸಂದರ್ಭಕ್ಕೆ ಅನುಗುಣವಾಗಿ ಗಂಡ, ಮಿತ್ರ, ಬಂಧು ಎಲ್ಲವೂ ಆಗಿ ಅವಳನ್ನು ಸಂತೈಸುತ್ತಿದ್ದ.

ಹೀಗೆ ಸುಮಿತ್ರೆಯ ಕಾಲೇಜಿನ ಜೀವನ ಯಾಂತ್ರಿಕವಾಗಿ ಸಾಗಿತ್ತು. ಈ ಯಾಂತ್ರಿಕ ಜೀವನದಲ್ಲಿ ಸುಮಿತ್ರೆಯ ಭಾಗ್ಯೋದಯವೆಂಬಂತೆ ಅನಿರೀಕ್ಷಿತ ಘಟನೆಯೊಂದು ಸಂಭವಿಸಿ, ಸುಮಿತ್ರೆಯ ಪಾಲಿಗೆ ಕಳೆದು ಹೋಗಿದ್ದ ಸ್ವರ್ಗ ಮರಳಿ ದೊರಕುವಂತಾಯಿತು. ಅವಳ ಜೀವನ ಹೆಚ್ಚು ಅರ್ಥಗರ್ಭಿತವೂ ಹೆಚ್ಚು ಸುಖ ಸಂತೃಪ್ತಿಗಳಿಂದ ಕೂಡಿದುದೂ ಆಯಿತು. ಬಹಳ ಕಾಲದಿಂದ

ಅವಳ ಪಾಲಿಗೆ ಇಲ್ಲವಾಗಿದ್ದ—ಕೇವಲ ನೆಪ ಮಾತ್ರಕ್ಕೆ ತಂದೆ ತಾಯಿಗಳಾಗಿದ್ದ ವೆಂಕಪ್ಪಯ್ಯ ಸೀತಮ್ಮನವರು ಮತ್ತೆ ಸುಮಿತ್ರೆಯ ಪಾಲಿಗೆ ತಂದೆತಾಯಿಗಳೇ ಆದರು!

ಶಾರದೆ ಸುಮಿತ್ರೆಯನ್ನು ಅಗಲಿದ ಆರೇ ತಿಂಗಳಲ್ಲಿ, ಕಳೆದ ಹತ್ತುಹನ್ನೆರಡು ವರ್ಷಗಳಿಂದ ಸಂಪೂರ್ಣವಾಗಿ ಮರೆಯಾಗಿದ್ದ ಅವಳ ತಂದೆ ತಾಯಿಗಳು ಅವಳ ಬಾಳ ದಿಗಂತದಲ್ಲಿ ಮತ್ತೊಮ್ಮೆ ಶೋಭಿಸಿದರು. ಅವರು ಸುಮಿತ್ರೆಯ ಬಾಳಿಗೆ ಮಂಗಳಗ್ರಹವಾದರು. ಹೀಗಾದೀತೆಂದು ಯಾರೂ ತಿಳಿದಿರಲಿಲ್ಲ. ಸುಮಿತ್ರೆಯಂತೂ ಕನಸು ಮನಸಿನಲ್ಲಿ ಊಹಿಸಿರಲಿಲ್ಲ!

ಒಂದು ದಿನ ಸುಮಿತ್ರೆ ಮಧ್ಯಾಹ್ನದ ಫಲಹಾರ ಮುಗಿಸಿ ಓದಲು ಮನಸ್ಸಾಗದೆ, ನಿದ್ರಿಸಲು ಬಾರದೆ ಮಂಚದ ಮೇಲೆ ಅತ್ತಿತ್ತ ಹೊರಳಾಡುತ್ತಾ ಮಲಗಿದ್ದಳು. ಅವಳಿಗೆ ಮಲಗಿದ್ದಂತೆ ಯಾವುಯಾವುದೋ ಜನ್ಮಾಂತರಗಳ ಕನಸು ! ಏಕೋ ಏನೋ ಆ ದಿನ ಆರಂಭವಾಗುತ್ತಿರುವಂತೆಯೇ ಸೋಮಾರಿತನ ಸುಮಿತ್ರೆಯಲ್ಲಿ ಮನೆ ಮಾಡಿಕೊಂಡಿತ್ತು. ಯಾವ ಕೆಲಸ ಮಾಡಲು ಎಂದಿನ ಉತ್ಸಾಹವಿರಲಿಲ್ಲ. ಏನೋ ಒಂದು ಬಗೆಯ ಕಳವಳ. 'ಯಾಕೆ ಇಂದು ಹೀಗೆ ಆಗುತ್ತಿದೆ' ಎಂದು ಆಲೋಚಿಸುತ್ತಾ ಅವಳು ಮಲಗಿರುವಾಗ್ಗೆ ಅಂಚೆಯಾಳು ಬಂದು ಒಂದು ಕಾಗದ ತಂದುಕೊಟ್ಟು ಹೋದ.

ಸುಮಿತ್ರೆ ಆ ಕಾಗದವನ್ನು ಲಗುಬಿಗೆಯಿಂದ ತೆರೆದು ನೋಡಿದಳು ಅದು ಶಾರದೆ ಬರೆದ ಪತ್ರವಿರಬೇಕೆಂಬ ಆಸೆಯಿಂದ. ಆದರೆ ಅವಳ ಆಸೆ ನಿರಾಸೆಯಾಗುವ ಬದಲು ಅವಳ ಮುಖ ಉತ್ಸುಕತೆ, ವಿಸ್ಮಯಗಳಿಂದ ಕೆಂಪಾಯಿತು. ಅವಳು ಪತ್ರ ಓದುತ್ತಿದ್ದಂತೆ ಕಣ್ಣು ಮಂಜಾಯಿತು. ಹಣೆ ಬೆವರಿಟ್ಟಿತು. ಕೈ ನಡುಗತೊಡಗಿತು. ಅವಳು ಒಮ್ಮೆಲೇ ಪತ್ರವನ್ನು ಓದಿ ಮುಗಿಸಲಾರದೆ ಕೆಲಹೊತ್ತು ಸುಮ್ಮನಿದ್ದು ಮತ್ತೆ ಓದಲು ಆರಂಭಿಸಿದಳು. ಅದು ಸುಮಿತ್ರೆಗೆ ಅವಳ ತಂದೆಯ ಅಂಕಿತದಲ್ಲಿ ಅವಳ ತಾಯಿ ಸೀತಮ್ಮನವರು ಯಾರ ಕೈಲೋ ಬರೆಸಿ ಹಾಕಿದ್ದ ಪತ್ರ!

ಮಗು ಸುಮಿತ್ರೆ,

ನಮ್ಮನ್ನು ನೀನು ಸಂಪೂರ್ಣವಾಗಿ ಮರೆತು ಬಿಟ್ಟಿದ್ದರೂ ನಿನ್ನ ನೆನಪು

ನಮಗೆ ಇನ್ನೂ ಉಳಿದಿದೆ. ನಮ್ಮನ್ನು ನೀನು ಮರೆತು ಬಿಟ್ಟಿದ್ದಕ್ಕೆ ನಿನ್ನನ್ನು ನಾವುಗಳಾರೂ ಆಕ್ಷೇಪಿಸುತ್ತಿಲ್ಲ ಮಗು. ನೀನು ನಮ್ಮನ್ನು ಮರೆಯಲು ನಾವೇ ಕಾರಣ. ತಪ್ಪು ನಮ್ಮದು. ಎಂದು ನಿನ್ನನ್ನು ಮನೆಯಿಂದ ಕೈಯಾರೆ ಹೊರಗಟ್ಟಿದೆವೋ ಅಂದೇ ನಿನ್ನ ಪಾಲಿಗೆ ನಾವುಗಳು ಇದ್ದೂ ಇಲ್ಲದಂತೆ ಆಯಿತು. ನಾವು ಅಂದು ವಿವೇಕಶೂನ್ಯರಾಗಿ ದುಡುಕಿದೆವು. ಆದರೆ ನಮ್ಮೆಲ್ಲರ ಭಾಗದ ದೈವ ದೊಡ್ಡದು. ಅದು ನಿನ್ನನ್ನು ಕಾಯಿತು. ಶಾರದೆಯ ರೂಪದಲ್ಲಿ ನಿನ್ನನ್ನು ರಕ್ಷಿಸಿತು. ಆ ಮಹಾ ತಾಯಿ—ನಿನ್ನನ್ನು ಹೆತ್ತ ಮಗಳಿಗೂ ಹೆಚ್ಚಿಗೆ ನೋಡಿಕೊಂಡು ನಿನಗೆ ವಿದ್ಯಾ ಬುದ್ಧಿ ಕಲಿಸಿ, ನಿನ್ನನ್ನು ಒಬ್ಬ ವಿದ್ಯಾಧರೆಯನ್ನಾಗಿ ಮಾಡಿದಳು........ "

ಈಗ ನಮಗೆ ಗೊತ್ತಾಗಿದೆ. ಅಂದು ನಾವು ನಿನ್ನನ್ನು ಮನೆಯಿಂದ ಹೊರಗೆ ಅಟ್ಟಿ ಎಂತಹ ಮೂರ್ಖ ಕೆಲಸ ಮಾಡಿದೆವು ಎಂದು. ಆ ದಿನ ನಾವು ನಮ್ಮ ಬುದ್ಧಿಯನ್ನೂ ವಿವೇಕವನ್ನೂ ಹತೋಟಿಯಲ್ಲಿ ಇರಿಸಿಕೊಂಡಿದ್ದರೆ, ನಿನ್ನ ವ್ಯಕ್ತಿತ್ವ, ಆಸೆ ಆಕಾಂಕ್ಷೆಗಳೇನೆಂದು ತಿಳಿಯಲೆತ್ನಿಸಿದ್ದರೆ ನಿನ್ನಲ್ಲಿ ಇಂದು ಪಶ್ಚಾತ್ತಾಪಪಡುವ ಪ್ರಸಂಗ ಬರುತ್ತಿರಲಿಲ್ಲ.........

ಏನು ಮಾಡುವುದು ಮಗು! ಅಂದು ನಿನ್ನನ್ನು ನಾವು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹೋದೆವು. ನಿನ್ನನ್ನು ಎಲ್ಲರಂತೆ ಒಬ್ಬ ಸಾಮಾನ್ಯ ಹುಡುಗಿ ಎಂದು ತಿಳಿದು ಮೋಸಹೋಗಿ ಕೆಟ್ಟೆವು. ನಿನ್ನ ವಿಚಾರಗಳನ್ನು ಭಾವನೆಗಳನ್ನು ಅರ್ಥಮಾಡಿಕೊಳ್ಳದೆ ನಾವು ನಿನ್ನ ಶ್ರೇಯಾಭಿವೃದ್ಧಿಗೆ, ನಿನ್ನ ಎಲ್ಲ ಆಶೋತ್ತರಗಳಿಗೆ ಕಂಟಕಪ್ರಾಯವಾದೆವು. ನಿನ್ನ ವಿದ್ಯಾಪ್ರಗತಿಯನ್ನು, ಜ್ಞಾನದಾಹವನ್ನು ಕಂಡು ಹೆಮ್ಮೆ ಪಡುವ ಬದಲು ತಿರಸ್ಕರಿಸಿ ತುಂಬಾ ಅಪಚಾರ ಮಾಡಿದೆವು. ಇಷ್ಟೇ ಅಲ್ಲ. ನಿನ್ನ ಜೀವನವನ್ನೇ ಹಾಳುಮಾಡಲು ಪ್ರಯತ್ನಿಸಿದೆವು. ನಿನ್ನ ಇಚ್ಛೆಗೆ ವಿರೋಧವಾಗಿ, ನಿನ್ನ ವಿರೋಧವನ್ನು ಗಣನೆಗೆ ತಾರದೆ, ಒಬ್ಬ ನಿರ್ಭಾಗ್ಯ ಗಂಡನನ್ನು ತಂದು ನಿನ್ನನ್ನು ದುಃಖಕ್ಕೆ ಈಡುಮಾಡಲೂ ಹೇಸಲಿಲ್ಲ. ಅಂತಹ ಪಾಪಿಗಳು ನಾವು. ಆದರೆ ದೇವರು ಕರುಣಾಮಯಿ. ನಮ್ಮ ಸಾವಿರತಪ್ಪುಗಳನ್ನೂ ಮರೆತು ನಿನ್ನನ್ನು ಕಾಪಾಡಿದ್ದಾನೆ. ನಾವು ನಿನ್ನ ಪ್ರಗತಿಗೊಡ್ಡಿದ ಎಲ್ಲ ಅಗ್ನಿ ಪರೀಕ್ಷೆಗಳಿಂದ ಅವನು ನಿನ್ನನ್ನು ಪಾರುಮಾಡಿ

ದ್ದಾನೆ ಮಾತ್ರವೇ ಅಲ್ಲ. ಇಂದು ನೀನು ಸಮಾಜದ ಕಣ್ಣಿನಲ್ಲಿ ಸುಶಿಕ್ಷಿತ ಮಹಿಳೆ, ಸುಮಂಗಲೆ.

ಆದರೆ ನಿನ್ನ ಏಳಿಗೆಯನ್ನು ಕಂಡು ಸಂತೋಷಪಡುವ ಅಧಿಕಾರ ನಮಗಿಲ್ಲ. ಆ ಪುಣ್ಯವನ್ನು ನಾವು ಕೇಳಿಕೊಂಡು ಬರಲಿಲ್ಲವೆಂದೇ ನಿನ್ನನ್ನು ಬಾಲ್ಯದಲ್ಲಿಯೇ ಮನೆಯಿಂದ ಹೊರಗೆ ಅಟ್ಟಿದೆವು. ಅವುಗಳನ್ನೆಲ್ಲ ಮರೆತುಬಿಡು ಮಗು. ನಾವು ತಿಳಿಯದೆ ಮಾಡಿದ ಅಪರಾಧವನ್ನು ಕ್ಷಮಿಸಿಬಿಡು.

ನಿನ್ನ ತಂದೆತಾಯಿಗಳು ಎಷ್ಟೇ ಕೆಟ್ಟವರಿದ್ದರೂ ನೀನು ಅವರ ಪಾಲಿಗೆ ಮಗುವಾಗಿದ್ದೀಯೆ. ನಿನ್ನ ಕಷ್ಟ ಸುಖಗಳಿಗೆ ಒಂದಿಷ್ಟೂ ಆಗದೆ ಇದ್ದ ನಾವು ಈಗ ನಿನ್ನಿಂದ ಯಾವ ಸಹಾಯವನ್ನೂ ಬಯಸುತ್ತಿಲ್ಲ. ಆದರೂ ನಿನ್ನಲ್ಲಿ ಮಾಡಿಕೊಳ್ಳುವ ನಮ್ಮ ಒಂದೇ ಒಂದು ಪ್ರಾರ್ಥನೆ ಇದೆ.

ಸಾವಿನ ದವಡೆಯಲ್ಲಿರುವ, ಮರಣೋನ್ಮುಖರಾಗಿರುವ ನಿನ್ನ ತಂದೆ ನಿನ್ನ ಮುಖವನ್ನೊಮ್ಮೆ ನೋಡಿ, ನಿನ್ನ ಕ್ಷಮಾಪಣೆಯನ್ನೊಮ್ಮೆ ಕೋರಿ, ನಿನ್ನನ್ನೊಮ್ಮೆ ಹರಸಿ, ಇಹಲೋಕವನ್ನು ಬಿಡಬೇಕೆಂಬ ಕಡೆಯ ಆಸೆ ಇಟ್ಟುಕೊಂಡಿದ್ದಾರೆ. ಅದಕ್ಕಾಗಿ ನಾವು ನಿನಗೆ ತೊಂದರೆಕೊಡುತ್ತಿದ್ದೇವೆ. ದಯವಿಟ್ಟು ನಾವು ಮಾಡಿರುವ ತಪ್ಪುಗಳನ್ನು ಮರೆತು ಕೂಡಲೇ ಇಲ್ಲಿಗೆ ಹೊರಟು ಬಾ. ಒಮ್ಮೆ ಒಂದೇ ಒಂದು ಬಾರಿ ನಿನ್ನ ಮುಖವನ್ನು ನಮಗೆ ತೋರಿಸಲು ತಡಮಾಡದೆ-ಹೊರಟು ಬಾ........

ಇಂತು ನಿನ್ನ ದುರ್ದೈವಿ ತಂದೆತಾಯಿಗಳು—

ಸುಮಿತ್ರೆಗೆ ಈ ಕಾಗದವನ್ನು ಓದುತ್ತಿದ್ದಂತೆ ಅನೇಕ ಬಗೆಯ ಭಾವನೆಗಳು ಉಕ್ಕಿಬಂದವು.

ಮೊದಲು ಕಾಗದ ಓದುತ್ತಿದ್ದಂತೆ ಮುಖ ಗಂಭೀರವಾಗಿ ಸಿಟ್ಟಿನಿಂದ ಸೆಡೆದುಕೊಂಡಿತು. ಆದರೆ ಕಾಗದ ಓದುತ್ತ ಓದುತ್ತ ಅವಳ ಕಣ್ಣುಗಳಿಂದ ಪಳಪಳನೆ ನೀರು ತೊಟ್ಟಿಕ್ಕಿದವು. ಅವಳಿಗೆ ತನ್ನ ಭಾವೋದ್ವೇಗವನ್ನು ಬಿಗಿಹಿಡಿಯಲು ಆಗಲಿಲ್ಲ. ಅವಳು ಕಂಬನಿದುಂಬಿದ ಕಣ್ಣುಗಳನ್ನು ಮತ್ತೆ ಮತ್ತೆ ಒರೆಸಿಕೊಂಡು ಕಾಗದವನ್ನು ಮತ್ತೆ ಮತ್ತೆ ಓದಿಕೊಂಡಳು. ಅದರಲ್ಲಿನ ಕಡೆಯ ಮಾತನ್ನು ಓದಿಕೊಂಡಾಗಲಂತೂ ಅವಳ ಹೃದಯಕ್ಕೆ ಶಲ್ಯನಿಟ್ಟಂತೆ ಆಯಿತು.

ತಂದೆ ತಾಯಿಗಳು ಎಷ್ಟೇ ಕೆಟ್ಟವರಿರಲಿ, ಅವರು ಮಗಳಿಗಾಗಿ ಹೀಗೆ ಬರೆದಮೇಲೆ ಯಾವ ಮಗಳಿಗೆ ತಾನೆ ಅಂತಃಕರಣ ಕರಗಿ ನೀರಾಗುವುದಿಲ್ಲ?

ಸುಮಿತ್ರೆಯಂತೂ ಮಂಕು ಹಿಡಿದವಳಂತೆ ವಿಚಾರ ಪರಳಾಗಿ ಕುಳಿತು ಬಿಟ್ಟಳು. ಅವಳ ತಲೆಯಲ್ಲಿ ಏನೇನೋ ಚಿತ್ರವಿಚಿತ್ರವಾದ ಭಾವನೆಗಳು ತಂದೆ ತಾಯಿಗಳನ್ನು ಎಂದೋ ಮರೆತಿದ್ದ ಅವಳಿಗೆ ಒಮ್ಮೆಲೇ ಅವರ ನೆನಪಾಗಿ ಅವರ ಮೇಲಿದ್ದ ಎಲ್ಲ ಅಸಮಾಧಾನ ಅವರು ಬರೆದಿದ್ದ ಪತ್ರದ ನಾಲ್ಕಾರು ಸರಳವಾಕ್ಯಗಳಿಂದ ಅಳಿಸಿಬಿಟ್ಟಿದ್ದವು. ಬಾಲ್ಯದಲ್ಲಿ ತನ್ನ ತಂದೆ ತಾಯಿಗಳು ತನ್ನನ್ನು ನಡೆಯಿಸಿಕೊಂಡಬಗೆಯಿಂದ ಖತಿಗೊಂಡಿದ್ದ ಅವಳ ಮನಸ್ಸಿಗೆ ಈ ಪತ್ರ ಕಂಡು ಮೊದಲು ಒಂದು ಬಗೆಯ ತಿರಸ್ಕಾರವುಂಟಾದರೂ ಮರುಗಳಿಗೆಯಲ್ಲಿ ಅದು ಪಶ್ಚಾತ್ತಾಪವಾಗಿ ಪರಿವರ್ತನಗೊಂಡಿತ್ತು.

ಹಳೆಯ ಕಾಲದವರೂ, ಪೂರ್ವಾಚಾರ ಸಂಪನ್ನರೂ, ವೈದಿಕ ವೃತ್ತಿಯವರೂ ಆದ ತನ್ನ ತಂದೆತಾಯಿಗಳು ತಮ್ಮ ಕಾಲದ ಸಂಪ್ರದಾಯ ನಿಬಂಧನೆಗಳಿಂದ ತನ್ನನ್ನು ಕಟ್ಟಲು ಪ್ರಯತ್ನಿಸಿದರು. ಇದು ಅವರ ತಪ್ಪಲ್ಲ. ಅವರ ಕಾಲಕ್ಕೆ ಸಹಜವೆನಿಸುವ ನಡವಳಿಕೆ. ಅವರನ್ನುದೂರಿ ಏನು ಪ್ರಯೋಜನ?....

ಅವರು ಸಂಪ್ರದಾಯ ಶರಣರಂತೆ ನಡೆದುಕೊಂಡರು. ಆದರೆ ತಾನು ವಿಚಾರಯುಗದ ವ್ಯಕ್ತಿಯಂತೆ ನಡೆದುಕೊಂಡೆ. ಇದರಲ್ಲಿ ಯಾರದೂ ತಪ್ಪಿಲ್ಲ. ಈಗ ಅವರನ್ನು ಅವರ ಹಿಂದಿದ ಕೃತ್ಯಗಳಿಗಾಗಿ ಹಳಿದು ಪ್ರಯೋಜನವಿಲ್ಲ.

ಈಗ ಅವರಿಗೆ ತಮ್ಮ ತಪ್ಪುಗಳು ಅರಿವಾಗಿ ಅವರ ಮನಸ್ಸು ಪಶ್ಚಾತ್ತಾಪದ ಕುಲುಮೆಯಲ್ಲಿ ಚೆನ್ನಾಗಿ ಬೆಂದು ಪರಿಶುದ್ಧವಾಗಿದೆ. ಅವರ ಮೇಲೆ ಅಸಮಾಧಾನದಿಂದ ಸಿಟ್ಟು ಮಾಡುವುದು ಅವಿವೇಕವೇ ಸರಿ. ಅವರು ಹೇಗೆ ವರ್ತಿಸಿದ್ದರೂ ಅವರು ತನ್ನನ್ನು ರೂಪಿಸಿದ ತಂದೆತಾಯಿಗಳು. ಅವರು ತಮ್ಮ ಕಡೆಗಾಲದ ಆಸೆಯೊಂದನ್ನು—ಕೇವಲ ತನ್ನ ಮುಖವನ್ನೊಮ್ಮೆ ನೋಡಿ ಕಣ್ಮುಚ್ಚುವ ಆಸೆಯನ್ನು ವ್ಯಕ್ತಪಡಿಸಿರುವಾಗ ತಾನು ಹೋಗದೆ ಇರುವುದು ಸರಿಯಲ್ಲವೆಂದು ಆನಿಸಿತು. ಕೂಡಲೇ ಸುಮಿತ್ರೆ ಕಾಲೇಜಿಗೆ ರಜಕ್ಕೆ ಬರೆದು ಮಡಿಕೇರಿಗೆ ಪ್ರಯಾಣ ಹೊರಟಳು.

ಮಡಿಕೇರಿಗೆ ಬಂದ ಮೇಲೆ ತನ್ನ ಅತ್ತೆಯಿಂದ ವೆಂಕಪ್ಪಯ್ಯನವರ ಸ್ಥಿತಿ ತಾನು ಊಹಿಸಿದ್ದಕ್ಕಿಂತಲೂ ತುಂಬಾ ಹದಗೆಟ್ಟಿದೆಯೆಂದು ತಿಳಿಯಿತು.

ಅವರು ಇಷ್ಟು ಸಖತ್ ಕಾಹಿಲೆ ಬೀಳದೆ ಇದ್ದರೆ ಅವರು ಖಂಡಿತ ಕಾಗದ ಬರೆಯುತ್ತಿದ್ದರೋ ಇಲ್ಲವೋ. ತಾವು ಈ ಬಾರಿ ತಮ್ಮ ಕಾಹಿಲೆಯಿಂದ ಬದುಕುವುದಿಲ್ಲವೆಂದು ಅವರಿಗೆ ಅನಿಸಿದ್ದರಬೇಕು. ಅಂತಲೇ ಅವರು—ತಮ್ಮ ಬಹಳಕಾಲದ ಬಯಕೆ ವ್ಯಕ್ತಪಡಿಸಿದ್ದರು. ಸುಮಿತ್ರೆಯಲ್ಲಿ ತಮ್ಮ ತಪ್ಪೊಪ್ಪಿಗೆಯನ್ನು ಮಾಡಿಕೊಂಡು ಅವಳ ಕ್ಷಮಾಪಣೆ ಕೇಳದ ಹೊರತು ಅವರ ಮನಸ್ಸಿಗೆ ಸಮಾಧಾನವಿರಲಿಲ್ಲ.

ವೆಂಕಪ್ಪಯ್ಯನವರು ಸುಮಿತ್ರೆಯನ್ನು ಮನೆಯಿಂದ ಹೊರಗೆ ಅಟ್ಟುವಾಗ ಅವಳನ್ನು ಸರಿಯಾಗಿ ಅರ್ಥಮಾಡಿಕೊಂಡಿರಲಿಲ್ಲ. ಅವಳು ಮದುವೆಯಾಗಿದ್ದರೂ ಗಂಡನ ಮನೆಗೆ ಹೋಗಿ ಸಂಸಾರಮಾಡುವ ಬದಲು ಓದುವ ಆಸೆಯನ್ನು ವ್ಯಕ್ತಪಡಿಸಿದ್ದುದು ಅದು ಗೃಹಿಣಿಯ ಲಕ್ಷಣವಲ್ಲವೆಂದು ಅವರ ಭಾವನೆಯಾಗಿತ್ತು. ವೈದಿಕ ಮನೆತನದಲ್ಲಿ ಹುಟ್ಟಿದ ಹೆಣ್ಣು ಕೈಹಿಡಿದ ಗಂಡನ ಜೊತೆಯಲ್ಲಿ ಸಂಸಾರಮಾಡಿಕೊಂಡಿರಲು ಒಪ್ಪದೆ ಹೋಗುವುದೆಂದರೆ ಇದಕ್ಕೂ ಮೀರಿದ ಅಪರಾಧ ಬೇಕೆ ? ಇನ್ನೊಬ್ಬರಿಗೆಧರ್ಮ, ಶಾಸ್ತ್ರಕಲಿಸುವ ತಾನೇ ಹೀಗೆ ಅನಾಚರಣೆಗೆ ಎಡೆಗೊಟ್ಟಮೇಲೆ ತಮ್ಮ ವೃತ್ತಿಗೆ ಇದರಿಂದ ಎಂತಹ ಮರ್ಯಾದೆ ಉಳಿದೀತು ?

ದೈವಶಾಪದಿಂದಲೆಂಬಂತೆ ಸುಮಿತ್ರೆಯ ಗಂಡ ಹಿರಣ್ಣಯ್ಯ ತೀರಿ ಹೋದಮೇಲೆ ಸುಮಿತ್ರೆ ಗಂಡನು ಸತ್ತನೆಂದು ಒಂದು ದಿನವಾದರೂ ಕಣ್ಣೀರು ಸುರಿಸಿರಲಿಲ್ಲ! ಅವನು ಸತ್ತು ಹೋದುದು ಒಂದು ರೀತಿಯಲ್ಲಿ ಅವಳಿಗೆ ಸಂತೋಷದ ಸಂಗತಿಯೇ ಆಗಿತ್ತು. ಅವಳು ಸಂತೋಷದಿಂದಲೇ ತನ್ನ ಕತ್ತಿನಲ್ಲಿದ್ದ ಮಾಂಗಲ್ಯವನ್ನು ಕಿತ್ತು ಗಂಡನ ಶವದಮೇಲೆ ಬಿಸಾಡಿದ್ದಳು. ಅವನು ಸತ್ತ ಮೇಲೆ ಸುಮಿತ್ರೆ ವಿಧವೆ ಎನ್ನುವ ಭಾವ ಅವಳಿಗೆ ಲವಲೇಶ ಬಂದಿರಲಿಲ್ಲ. ಹಿರಣ್ಣಯ್ಯ ಸತ್ತ ಮೇಲೂ ವೈದಿಕರ ಈ ಮನೆಯ ವಿಧವೆಯಂತೆ ತನ್ನ ವೇಷಭೂಷಣಗಳನ್ನು ಬದಲಿಸಲಿಲ್ಲ. ಅವಳು ಎಂದಿನಂತೆಯೇ ಶಾಲೆಗೆ ಹೋಗಲಾರಂಭಿಸಿದಳು. ಇದೇ ಸುಮಿತ್ರೆಯನ್ನು ಅವರು ದ್ವೇಷಿಸಲು ಕಾರಣವಾಗಿತ್ತು. ಈಗ ಅವರಿಗೆ ತಮ್ಮ ಅವಿವೇಕದ ಅರಿವು ಉಂಟಾಗಿತ್ತು. ತಮ್ಮ ಕೃತ್ಯಕ್ಕಾಗಿ ತುಂಬಾ ಪಶ್ಚಾತ್ತಾಪ ಪಟ್ಟಿದ್ದರು !

ಸುಮಿತ್ರೆಯ ಗಂಡ ಹಿರಣ್ಣಯ್ಯ ತೀರಿಕೊಂಡ ಮೇಲೆ ಶನಿವಾರ ಸಂತೆಯಲ್ಲಿ ಅವನ ಸಂಸಾರವನ್ನೂ,ಅವನ ಜಮೀನುಗಳನ್ನೂ ನೋಡಿಕೊಳ್ಳಲು ಬೇರೆ

ಜನ ಇಲ್ಲದೆ ಇದ್ದುದರಿಂದ ವೆಂಕಪ್ಪಯ್ಯ ಸಂಸಾರ ಸಮೇತ ಅಲ್ಲಿಗೆ ಹೋಗಿದ್ದರು. ಸುಮಿತ್ರೆ ತಂದೆಯ ಜೊತೆಯಲ್ಲಿ ಹೋಗಲು ಇಷ್ಟಪಡದೆ ಶಾರದೆಯ ಮನೆಯಲ್ಲಿಯೇ ಇರುವ ಆಸೆ ವ್ಯಕ್ತಪಡಿಸಿದ್ದಳು. ತಮ್ಮ ಮಾತನ್ನು ಕೇಳದ ಅವಳು ತಮ್ಮ ಮಗಳೇ ಅಲ್ಲವೆಂದು ಸಿಟ್ಟಿನ ಭರದಲ್ಲಿ ಗರ್ಜಿಸಿದ್ದರು. ಸುಮಿತ್ರೆಗೆ ಇಷ್ಟೇ ಸಾಕಾಯಿತು. ಅವಳು ಶಾರದೆಯ ಮನೆಯನ್ನು ಸೇರಿಕೊಂಡು ಬಿಟ್ಟಳು.

ಸುಮಿತ್ರೆ ಶಾರದೆಯ ಪೋಷಣೆಯಲ್ಲಿ ಬೆಳೆದು ದೊಡ್ಡವಳಾಗಿ, ಕಾಲೇಜಿನಲ್ಲಿ ವ್ಯಾಸಂಗಮಾಡುತ್ತಿರುವ ಸಂಗತಿ ವೆಂಕಪ್ಪಯ್ಯ ದಂಪತಿಗಳಿಗೆ ತಿಳಿದಾಗ ಅವರಿಗೆ ಒಂದು ಬಗೆಯ ಸಂತೋಷವಾಗಿತ್ತು. ಮಗಳ ಬಗ್ಗೆ ಅವರಿಗೆ ಮಾತಾಪಿತೃಸಹಜ ಪ್ರೀತಿವಾತ್ಸಲ್ಯ ಇದ್ದೇ ಇತ್ತು. ಆದರೆ ಅದು ಹೃದಯಾಂತರಾಳದಲ್ಲಿ ಹುದುಗಿತ್ತು. ಮಗಳ ಪಕ್ಷಪಾತಿಯಾದ ಸೀತಮ್ಮನವರು ಆಗಾಗ್ಗೆ ಸಮಯ ಸಾಧಿಸಿ, ಮಗಳ ಬಗ್ಗೆ ಗಂಡನಿಗೆ ಇದ್ದ ವಿರೋಧಾಭಿಪ್ರಾಯವನ್ನು ಬಗೆಹರಿಸಲು ಪ್ರಯತ್ನಿಸಿ ಬಹುಮಟ್ಟಿಗೆ ಕೃತಕೃತ್ಯರಾಗಿದ್ದರು. ಈಗ ವೆಂಕಪ್ಪಯ್ಯನವರಿಗೆ ತಾವು ಹಿಂದೆ ದುಡುಕಿ ವರ್ತಿಸಿದರೆನ್ನುವ ಭಾವನೆಯುಂಟಾಗಿ ಅದಕ್ಕಾಗಿ ಪಶ್ಚಾತ್ತಾಪವಾಗಿತ್ತು.

ಇದೇ ವೇಳೆಗೆ ವೆಂಕಪ್ಪಯ್ಯನವರು ಕಾಹಿಲೆ ಬಿದ್ದರು. ಸದಾ ಕಾಹಿಲೆ ಬೀಳುತ್ತಿದ್ದ ಅವರ ಸಂಸಾರದಲ್ಲಿ ಈ ಬಾರಿ ವೆಂಕಪ್ಪಯ್ಯನವರು ಹಾಸಿಗೆ ಹಿಡಿದು ಮಲಗಿದರು. ನ್ಯೂಮೋನಿಯದಿಂದ ಅವರು ಉಳಿಯುವುದೇ ಕಷ್ಟವಾಯಿತು. ಅವರ ಜೀವ ದಿನದಿನಕ್ಕೆ ಹಣ್ಣಾಗಿ ಸಾವು ಬದುಕುಗಳ ಹೋರಾಟದಲ್ಲಿ ಇತ್ತು. ತಾವು ಈ ಬಾರಿ ಉಳಿಯುವುದಿಲ್ಲವೆಂದು ಅವರಿಗೆ ಹೋಗೋ ಅನಿಸಿಹೋಗಿತು . ಸಾಯುವ ಮುನ್ನ ಮಗಳ ಮುಖವನ್ನು ನೋಡಿ ಸಾಯಬೇಕೆಂದು ಮಗಳಿಗೆ ಪತ್ರ ಬರೆಸಿದ್ದರು.....

ಮಡಿಕೇರಿಯಲ್ಲಿ ಕೊಂಚಹೊತ್ತು ಸುಧಾರಿಸಿಕೊಂಡು ಸುಮಿತ್ರೆ ತನ್ನ ಅತ್ತೆ ಪಾರ್ವತಮ್ಮನವರನ್ನು ಜೊತೆಯಲ್ಲಿ ಕರೆದುಕೊಂಡು, ಕಾರುಮಾಡಿಕೊಂಡು ಶನಿವಾರ ಸಂತೆಗೆ ಹೊರಟರು.

ದಾರಿಯಲ್ಲಿ ಬರುತ್ತಿದ್ದಂತೆ ಅವಳಿಗೆ ಹತ್ತಾರು ವರ್ಷಗಳ ಹಿಂದಿನ ನೆನಪುಗಳೆಲ್ಲ ಈಗ ಮತ್ತೊಮ್ಮೆ ಸ್ಮೃತಿ ಪಥದಲ್ಲಿ ಸುಳಿದವು.

ಆ ರಸ್ತೆ—ಸುತ್ತೆಲ್ಲ ಕಾಣುವ ಬೆಟ್ಟ ಗುಡ್ಡಗಳು, ಕಾಡು ನದಿ ಬಯಲು

ಗಳು ಎಲ್ಲದರ ಪರಿಚಯ ಅವಳಿಗೆ ಚೆನ್ನಾಗಿ ಇತ್ತು. ಅವಳು ಹುಡುಗಿ ಯಾಗಿರುವಾಗ ಸರೋಜೆಯ ಜೊತೆಯಲ್ಲಿ ಒಂದೆರಡು ಬಾರಿ ಅಲ್ಲಿಗೆ ಬಂದಿದ್ದಳು. ಆಗಿನ ಅವಳ ಉತ್ಸಾಹಕ್ಕೆ ಎಣೆಯೇ ಇರಲಿಲ್ಲ. ಸುತ್ತಲಿನ ವನಶ್ರೀಯನ್ನು ನೋಡಿ ಅವಳು ಸಂತೋಷದಿಂದ ಕುಣಿದಾಡುತ್ತಿದ್ದಳು. ರಸ್ತೆ ಬೆಟ್ಟಗುಡ್ಡಗಳ ನಡುವೆ–ಕಣಿವೆಗಳಲ್ಲಿ ಹಾವಿನಂತೆ ಬಳಸಿಕೊಂಡು ಹೋಗಿತ್ತು. ಅಕ್ಕಪಕ್ಕದಲ್ಲಿ ಎಲ್ಲೆಲ್ಲೂ ಫಲಸಮೃದ್ಧಿಯಾದ ಕಾಫಿ, ಏಲಕ್ಕಿ, ಹಾಗೂ ಕಿತ್ತಳೆ ತೋಟಗಳು ನಯನ ಮನೋಹರವಾಗಿದ್ದವು. ಅವನ್ನುನೋಡುವುದೇ ಕಣ್ಣಿಗೆ ಹಬ್ಬವಾಗಿತ್ತು. ಹೋಗುತ್ತಾ ದಾರಿಯಲ್ಲಿ ಕಿತ್ತಳೆಯ ಕೆಂಪು ಹೂಗಳು ತನಗೆಬೇಕೆಂದು ಸುಮಿತ್ರೆ ಬಾಲ್ಯದಲ್ಲಿ ಹಟಮಾಡಿ ತನ್ನ ತಂದೆಯಿಂದ ಎಷ್ಟೋ ಬಾರಿ ಹೊಡೆಸಿ ಕೊಂಡಿದ್ದುದನ್ನು ನೆನೆಸಿಕೊಂಡಳು.

ಇವುಗಳೊಂದಿಗೇ ಇತರ ಘಟನೆಗಳೂ ನೆನಪಾದವು. ತನ್ನನ್ನು ಧರ್ಮ ಸ್ಥಳಕ್ಕೆ ಕರೆದುಕೊಂಡು ಹೋಗುವುವಾಗಿ ಹೇಳಿ ಇಲ್ಲಿಗೆ ಕರೆತಂದು ಮೋಸ ದಿಂದ ಮದುವೆ ಮಾಡಿದ್ದು, ತಾನು ಮದುವೆಕಾಲದಲ್ಲಿ ಮಾಡಿದ ರಗಳೆ, ಹಿಡಿದ ಚಂಡಿ, ಇವುಗಳೆಲ್ಲದರ ನೆನಪಾಯಿತು. ಈ ಎಲ್ಲ ನೆನಪುಗಳಿಂದ ಅವಳಿಗೆ ದುಃಖವಾಗುವ ಬದಲು ಒಂದು ಬಗೆಯ ವಿನೋದವಾಯಿತು. ವಿಧಿಯ ವೈಚಿತ್ರವೇನೆಂಬುದಕ್ಕೆ ತನ್ನ ಜೀವನವೇ ಸಾಕ್ಷಿಯಾಗಿ ಅವಳಿಗೆ ಕಂಡಿತು. ಇದನ್ನೆಲ್ಲ ಆಲೋಚಿಸುತ್ತಾ, ಮಾತಿಲ್ಲದೆ ಬರುತ್ತಿದ್ದ ಸುಮಿತ್ರೆ ಯನ್ನು ನೋಡಿ ಪಾರ್ವತಮ್ಮನವರು

" ಯಾಕೆ ಸುಮಿತ್ರ ಹೀಗಿರುವೆ ? ಬೆಳಗಿನಿಂದ ಸಂಜೆಯತನಕ ಬಸ್ ಪ್ರಯಾಣ. ಇವತ್ತು ಸುಧಾರಿಸಿಕೊಂಡು ನಾಳೆ ಹೋದರಾಯಿತೆಂದು ನಾನು ಹೇಳಿದರೆ ನೀನೆಲ್ಲಿ ಕೇಳುತ್ತಿ ? ಹೋಗಲಿ, ಹಾಗೇ ಸೀಟಿಗೆ ಒರಗಿಕೊಂಡು ನಿದ್ರೆ ಮಾಡಿಬಿಡು. ಊರು ಬಂದಾಗ ಎಬ್ಬಿಸುತ್ತೇನೆ " —ಎಂದರು.

ವಾಸ್ತವವಾಗಿ ಸುಮಿತ್ರೆಗೆ ಶನಿವಾರ ಸಂತೆಯನ್ನು ಸೇರುವ ಹುರುಪಿನಲ್ಲಿ ಹಿಂದಣರಾತ್ರಿ ನಿದ್ರೆ ಬಂದಿರಲಿಲ್ಲ. ಈ ದಿನವೆಲ್ಲ ಬಸ್ ಪ್ರಯಾಣವೇ ಆಗಿತ್ತು. ಪಾರ್ವತಮ್ಮನವರು ದಣಿದಿದ್ದ ಸುಮಿತ್ರೆಗೆ ಕೊಂಚ ಹೊತ್ತು ಸುಧಾರಿಸಿಕೊಂಡು ಹೋಗೋಣವೆಂದು ಎಷ್ಟು ಹೇಳಿದ್ದರೂ ಅವರ ಮಾತನ್ನು ಕೇಳದೆ ತಂದೆಯನ್ನು ನೋಡಲು ಒಂದೇ ಕಾಲಿನ ಮೇಲೆ ನಿಂತಿದ್ದಳು. ಅವಳ

ಉತ್ಸುಕತೆಯನ್ನು ನೋಡಿ ಅವರು ಬಲವಂತಪಡಿಸಲು ಇದು ತಕ್ಕ ವೇಳೆಯಲ್ಲ ವೆಂದು ಸುಮ್ಮನಾಗಿ ಅವಳ ಜೊತೆಯಲ್ಲಿ ಹೊರಬಿದ್ದರು.

ಸುಮಿತ್ರೆಗೆ ದಿನದ ಪ್ರಯಾಣದಿಂದ ಅಲಸಿಕೆಯಾದರೂ ಅವಳು ಅದ ರಿಂದ ದಣಿದಿರಲಿಲ್ಲ. ಅವಳ ದೇಹ ಪ್ರಯಾಣದಿಂದ ಬಳಲಿದ್ದರೂ ಅವಳ ಮನಸ್ಸು ಮಾತ್ರ ದಣಿದಿರಲಿಲ್ಲ. ಒಮ್ಮೆ ಪುಳಕ, ಒಮ್ಮೆ ದುಃಖ, ಒಮ್ಮೆ ಸಂತೋಷ, ಒಮ್ಮೆ ಬೇಸರ, ಒಮ್ಮೆ ನಿರಾಶೆ, ಒಮ್ಮೆ ಆಸೆ ಹೀಗೆ ಕಾಲ ಪುರುಷನು ಕುಣಿಸಿದಂತೆ ಕುಣಿದ ಅವಳ ಬಾಲ್ಯದ ಜೀವನವನ್ನು ನೆನಪು ಮಾಡಿಕೊಳ್ಳುತ್ತಾ ಹೊರಟಿದ್ದಳು. ಅವಳ ಮನಸ್ಸು ಅವುಗಳೊಂದೂ ತನಗೆ ಸಂಬಂಧಿಸಪಂತೆ ಪ್ರಚಂಡ ಅಲೆಗಳ ಹೊಡೆತಕ್ಕೆ ಸಿಕ್ಕಿದರೂ ಮುಳುಗದೆ ಇರುವ ಈಸುಗುಂಬಳದಂತೆ ಸ್ಥಬ್ಧವಾಗಿತ್ತು. ಸುಮಿತ್ರೆಗೆ ಪಾರ್ವತಮ್ಮನವರ ಮಾತಿನ ಹಿಂದೆ ಅಡಗಿರುವ ಅವರ ವಾತ್ಸಲ್ಯ ಕಂಡು ಮನಸ್ಸಿಗೆ ಹರ್ಷವಾಯಿತು.

ಅವರ ಪ್ರಯಾಣ ಮುಗಿದಂತೆ ಬೆಳಕು ಬಾಡುತ್ತಾ ಬಂದಿತು. ನೋಡ ನೋಡುತ್ತಿದ್ದಂತೆ ದಿನಕನು ಪಶ್ಚಿಮದ ಗುಡ್ಡಗಳಲ್ಲಿ ಮರೆಯಾದ. ಅವನು ಅಸ್ತಮಿಸಿದರೂ ಅವನು ಹೊದೆದಿದ್ದ ಮೇಲ್ವಾಸು ಇನ್ನೂ ಅಲ್ಲಿಯೇ ಉಳಿ ದಿರುವುದೋ ಎನ್ನುವಂತೆ ಪಶ್ಚಿಮಾಂಗಣದಲ್ಲಿ ಹೊಂಬಣ್ಣದ ಮೇಘಮಾಲೆ ಕಾಣಿಸಿಕೊಂಡಿತ್ತು. ಅವು ನಿಮಿಷ ನಿಮಿಷಕ್ಕೆ ಚಿತ್ರವಿಚಿತ್ರಾಕೃತಿಯನ್ನು ಮೆರೆದು ಕೊಂಚ ಕಾಲದಲ್ಲಿಯೇ ಕತ್ತಲೆಯ ಮಬ್ಬಿನಲ್ಲಿ ಲೀನವಾಗಿ ಹೋದವು.

ಇದು ವರೆಗೆ ನಯನ ಮನೋಹರವಾಗಿದ್ದ ನಿಸರ್ಗ ಈಗ ರುದ್ರಗಂಭೀರ ವಾಯಿತು. ಭೀಮಾಕಾರದ ವೃಕ್ಷಗಳು ಹೊಂಚುಹಾಕಿ ನಿಂತ ರಾಕ್ಷಸರಂತೆ ಕಂಡರು. ಅರಣ್ಯ ಮೃಗಗಳಾದ ಹುಲಿ, ಕರಡಿ, ಚಿರತೆ, ಗೂಗೆ, ನರಿಗಳ ಕೂಗು ಆಗೊಮ್ಮೆ ಈಗೊಮ್ಮೆ ಕೇಳಿಸುತ್ತಿತ್ತು. ರಸ್ತೆ ನಿರ್ಜನವಾಗಿದ್ದು ಮಾರ್ಗ ನಿರಾತಂಕವಾಗಿ ಸಾಗಿದ್ದರೂ ಎಲ್ಲೆಲ್ಲೂ ಗಭೋ ಎನ್ನುವ ಭಯಂಕರ ವಾದ ಕತ್ತಲು. ಕತ್ತಲು ಕಣ್ಣು ಮಿಟಿಕಿಸಿದಂತೆ ಆಗ ಈಗ ಕಾಣುತ್ತಿದ್ದ ಮಿಂಚು ಹುಳುಗಳು, ಹುಳು ಹುಪ್ಪಟೆಗಳ ಸಂತತವಾದ ಚೀತ್ಕಾರ—ಸುಮಿತ್ರೆಗೆ ಕಳವಳವನ್ನುಂಟುಮಾಡದೆ ಹೋಗಲಿಲ್ಲ. ಅವಳ ಕಳವಳವನ್ನು ಕಂಡುಕೊಂಡ ನೆಂಬಂತೆ ಕಾರಿನ ಡ್ರೈವರು ಕಾರನ್ನು ವೇಗವಾಗಿ ನಡೆಸಿ ಕೆಲವು ನಿಮಿಷ ಗಳಲ್ಲಿಯೇ ಶನಿವಾರ ಸಂತೆಗೆ ಅವರನ್ನು ತಂದುಬಿಟ್ಟ.

ಕಾರು ನಿಂತೊಡನೆಯೇ ಸುಮಿತ್ರೆ ನೆಲಕ್ಕೆ ಜಿಗಿದಳು. ಮನೆಯತನಕ ದಾರಿ ಚನ್ನಾಗಿ ಇಲ್ಲದೆ ಇದ್ದುದರಿಂದ ನಡೆದುಕೊಂಡೇ ಹೊರಟಳು. ಅವರು ಹೊರ ಟಂತೆ ಡ್ರೈವರ್ ಅವರ ಸಾಮಾನನ್ನು ಹೊತ್ತುಕೊಂಡು ಬಂದ.

ಅವರು ಮನೆಯನ್ನು ತಲುಪುವ ವೇಳೆಗೆ ವರಾಂಡದಲ್ಲಿ ದೀಪಹಚ್ಚಿ ಕೊಂಡು ಸುಮಾರು ಹದಿಮೂರು ವರ್ಷದ ಹುಡುಗನೊಬ್ಬನು ಇಬ್ಬರು ಮೂವರು ಸಣ್ಣ ಹುಡುಗರಿಗೆ ಪಾಠ ಹೇಳುತ್ತಿದ್ದ. ಸುಮಾರು ಏಳೆಂಟು ವರ್ಷದ ಹುಡುಗಿಯೊಬ್ಬಳು ಎಲೆಹಚ್ಚುತ್ತಾ ಕುಳಿತಿದ್ದಳು.

ಸುಮಿತ್ರೆ ಬ್ಯಾಟರಿಯಲ್ಲಿ ಬೆಳಕು ಹಾಯಿಸಿಕೊಂಡು ಅವರ ಎದುರಿಗೆ ಬಂದು ನಿಂತಾಗ ಆ ಹುಡುಗನಿಗೆ ಬಂದವರು ಯಾರೆಂದು ಆಶ್ಚರ್ಯವಾಗಿ ನೋಡಲು ಹೊರಗೆ ಬಂದ. ಅವನಿಗೆ ಕೂಡಲೆ ಸುಮಿತ್ರೆ ಪಾರ್ವತಮ್ಮನವರ ಗುರುತು ಸಿಕ್ಕಲಿಲ್ಲ. ಸುಮಿತ್ರೆಗೂ ಅವನ ಗುರುತು ಸಿಕ್ಕಲಿಲ್ಲ. ಸುಮಿತ್ರೆ ಮನೆಯನ್ನು ಬಿಟ್ಟು ಹೋಗುವಾಗ ಅವನಿನ್ನೂ ನಾಲ್ಕು ವರ್ಷದಹುಡುಗ. ಹೇಗೆ ಗುರುತಾದೀತು ? ಅವನು ಅವರಿಬ್ಬರನ್ನೂ ದಿಟ್ಟಿಸಿನೋಡುತ್ತಾ ನಿಂತ. ಅವರು ಶ್ರೀಮಂತರಂತೆ ಉಡುಪು ತೊಟ್ಟಿದ್ದುದರಿಂದ ಅವರನ್ನು ಹೇಗೆ ಮಾತ ನಾಡಿಸಬೇಕೆಂಬುದೇ ಅವನಿಗೆ ಸಮಸ್ಯೆಯಾಯಿತು.

ಸುಮಿತ್ರೆ ತೆಳು ನೀಲಿಬಣ್ಣದ ಒಂದು ವಾಯಿಲ್ ಸೀರೆಯನ್ನು ಉಟ್ಟು ಚಳಿಗೆ ಬೆಚ್ಚಗಿರಲೆಂದು ಉಲ್ಲನ್ ಓವರ್‌ಕೋಟನ್ನು ಹಾಕಿಕೊಂಡಿದ್ದಳು. ತಲೆಗೆ ಮಫ್ಲರ್ ಸುತ್ತಿಕೊಂಡಿದ್ದಳು. ಹೆಗಲಿಗೆ ಕಾಫಿ ಫ್ಲಾಸು, ಒಂದು ಕೈಯಲ್ಲಿ ಕೆಲವು ವೃತ್ತಪತ್ರಿಕೆ, ಇನ್ನೊಂದು ಕೈಯಲ್ಲಿ ಡಾಕ್ಟರುಗಳು ಉಪ ಯೋಗಿಸುವಂತಹ ಔಷಧಿಗಳ ಪೆಟ್ಟಿಗೆ. ಅವಳ ಈ ಉಡುಪಿನಲ್ಲಿ ಅವಳನ್ನು ಯಾರೋ ಕ್ರಿಶ್ಚಿಯನ್‌ಲೇಡಿ ಎಂದು ಆ ಹುಡುಗ ಭಾವಿಸಿದ.

ಅವನು ತಮ್ಮನ್ನೇ ಎವೆಯಿಕ್ಕದೆ ನೋಡುತ್ತ ನಿಂತುದನ್ನು ಕಂಡು ಸುಮಿತ್ರೆಗೆ ತಾವು ಗುರುತು ತಪ್ಪಿ ಬೇರೆ ಯಾರದೋ ಮನೆಗೆ ಬಂದಿರಬಾರದೇಕೆ? ಎನ್ನುವ ಸಂಶಯವೂ ಆಯಿತು.

“ ವೆಂಕಪ್ಪಯ್ಯನವರ ಮನೆ ಯಾವುದು ? ” ಎಂದು ಅವಳು ಪಶ್ನಿಸು ವಂತಾಯಿತು. ಈ ಪ್ರಶ್ನೆಗೆ ಆ ಹುಡುಗ ಬೆರಗಾಗಿ “ ಇದೇ ಮನೆ ” ಎಂದು ಹೇಳಿ, ಬಂದವರನ್ನು ಒಳಗೆ ಬರಮಾಡಿದ.

ಸುಮಿತ್ರೆ ವರಾಂಡದಲ್ಲಿ ತನ್ನ ಸಾಮಾನುಗಳನ್ನು ಇಳಿಸಿ, ಅಲ್ಲೇ ಇದ್ದ ಗೂಟಕ್ಕೆ ತನ್ನ ಓವರ್ ಕೋಟನ್ನು ಬಿಚ್ಚಿಟ್ಟಳು. ಈ ವೇಳೆಗಾಗಲೇ ಅಡಿಗೆ ಮನೆಯಲ್ಲಿ ಅಡಿಗೆ ತಯಾರಿಯಲ್ಲಿದ್ದ ತಾಯಿ ಸೀತಮ್ಮನಿಗೆ ಹೊಸಬರು ಬಂದಿರುವ ಸಂಗತಿ ವರದಿಯಾಗಿ ಯಾರೆಂದು ನೋಡಲು ಆಕೆ ಬಂದರು.

ಅವರ ಕಣ್ಣಿಗೆ ಮೊದಲು ಬಿದ್ದವರು ಪಾರ್ವತಮ್ಮನವರು. ಅವರ ಗುರುತು ಚೆನ್ನಾಗಿ ಇತ್ತು. ಅವರನ್ನು ಕಾಣುತ್ತಲೇ

"ಯಾರು ಪಾರ್ವತಮ್ಮನವರೇ ? ....ಓ ! ಯಾವಾಗ ಬಂದಿರಿ, ಊರಿನಲ್ಲಿ ಎಲ್ಲರೂ ಕ್ಷೇಮವೇ ?" ಎಂದು ಸಂತೋಷೊದ್ಗಾರ ತೆಗೆದರು. ಅನಂತರ ಕಣ್ಣಿಗೆ ಬಿದ್ದ ಸುಮಿತ್ರೆಯನ್ನು ಕಂಡು ಅವಳ ಗುರುತು ಆ ಕತ್ತಲೆಯಲ್ಲಿ ಬೇಗನೆ ಹತ್ತದೆ—ಅವರು ಯಾರೆಂದು ಕುತೂಹಲದಿಂದ ನೋಡುತ್ತನಿಂತಾಗ

ಪಾರ್ವತಮ್ಮ

"ನನ್ನ ಸೊಸೆ" ಎಂದು ಪರಿಚಯ ಮಾಡಿಕೊಟ್ಟರು.

"ಯಾರು ಮಂಗಳೆಯೆ ?"

"ಅಲ್ಲ. ನನ್ನ ಕಡೆಯ ಸೊಸೆ"

"ಅಂದರೆ........"

"ನಮ್ಮ ಸದಾಶಿವನ ಹೆಂಡತಿ. ಅರ್ಥಾತ್ ನಿಮ್ಮ ಮಗಳು ಸುಮಿತ್ರೆ !"

ಈ ಮಾತು ಕೇಳಿ ಸೀತಮ್ಮನವರಿಗೆ ತಮ್ಮ ಕಿವಿಯನ್ನು ತಾವು ನಂಬದಾದರು. ತಮ್ಮ ಕಣ್ಣನ್ನು ತಾವು ನಂಬದಾದರು. ಇದು ನಿಜವೇ ಎಂದು ಸಂಶಯವಾಯಿತು. ಮೈಸೂರಿನಲ್ಲಿರುವ ತಮ್ಮ ಮಗಳು—ಕಳೆದ ಹತ್ತಾರು ವರುಷಗಳಿಂದ ತಮ್ಮ ಭಾಗಕ್ಕೆ ಇಲ್ಲವಾಗಿದ್ದ ಮಗಳು ಹಠಾತ್ತನೆ ತಮ್ಮನ್ನು ನೋಡಲು ಬಂದಿರುವ ಈ ಸಂಗತಿ ನಿಜವೇ ? ಎಂದು ಪ್ರಶ್ನಿಸಿಕೊಂಡರು. ಅವರು ಸಂತೋಷದ ಉಬ್ಬಿನಲ್ಲಿ ಮಾತು ಮರೆತು ಮಗಳನ್ನು ನೋಡುತ್ತಾ ನಿಂತರು.

ಸುಮಿತ್ರೆಯ ಆ ಉಡುಪಿನಲ್ಲಿ, ಅವಳನ್ನು ಗುರುತಿಸುವುದೇ ಕಷ್ಟವಾಗಿತ್ತು. ಸುಮಿತ್ರೆಯನ್ನು ಅವರು ಹಿಂದೆ ನೋಡಿದ್ದಾಗ ಅವಳಿಗೆ ಹನ್ನೆರಡು ವರ್ಷ. ಈಗ ಅವಳು ಇಪ್ಪತ್ತೆರಡು ಇಪ್ಪತ್ತಮೂರು ವರ್ಷದ ಯುವತಿ. ಅವಳಿಗೆ ಮೈಸೂರು ನೀರು ಹವ ಒಂಟಿತ್ತು. ಅಲ್ಲದೆ ಊಟ ತಿಂಡಿಗಳಲ್ಲಿ

ಯಾವ ಬಗೆಯ ಕೊರತೆ ಕಾಣದಿದ್ದ ಅವಳು ಬಾಳೆಯ ದಿಂಡಿನಂತೆ ಸೊಂಪಾಗಿ ಬೆಳೆದಿದ್ದಳು. ಆದುದರಿಂದಲೇ ಅವಳು ಏಕಾಏಕಿ ಗುರುರು ಸಿಕ್ಕಲಿಲ್ಲ.

ಏಕೋ ಏನೋ ಮಗಳನ್ನು ದಿಟ್ಟಿಸಿ ನೋಡುತ್ತಿದ್ದಂತೆ ಸೀತಮ್ಮನವರಿಗೆ ಕಣ್ಣುಗಳು ಆನಂದ ಭಾಷ್ಪದಿಂದ ತೊಯ್ದು ಹೋದವು. ಅವರಿಗೆ ಸುಮಿತ್ರೆಯನ್ನು ಭರಸೆಳೆದು ಅಪ್ಪಿಕೊಳ್ಳಬೇಕೆನಿಸಿತು. ಆದರೆ ಹಾಗೆ ಮಾಡಲು ಇರಬೇಕಾದ ಸಲಿಗೆ ಇರಲಿಲ್ಲ. ಅವರು ಹಸಿದ ಕಣ್ಣುಗಳಿಂದ ಸುಮಿತ್ರೆಯನ್ನು ನೋಡುತ್ತಿರುವಾಗ ಸುಮಿತ್ರೆಗೂ ತನ್ನ ತಾಯಿಯ ನೆನಪು ಚನ್ನಾಗಿ ತಿಳಿಯಿತು. ಅವರ ಮುಖದಲ್ಲಿನ ಪ್ರತಿಯೊಂದು ಕಲೆ, ಸುಕ್ಕುಗಳು ಅವಳಿಗೆ ಪರಿಚಯವಿರುವಂತೆ ಅನಿಸಿತು. ಆದರೆ ಈ ಹತ್ತು ವರ್ಷಗಳಲ್ಲಿ ಸೀತಮ್ಮನವರೂ ಗುರುತು ಸಿಕ್ಕದಷ್ಟು ತೆಗೆದು ಹೋಗಿದ್ದರು. ಅಷ್ಟು ಬವಲಾಗಿದ್ದರು. ಮೊದಲೇ ಆಕೆ ರೋಗಶರೀರಿ. ಆದರೂ ಪ್ರಾಯದಲ್ಲಿ ಅವರು ಕೊಂಚ ಮೈತುಂಬಿಕೊಂಡೇ ಇದ್ದರು. ಆದರೆ ಈಗ ಅವರ ಶರೀರ ವಯಸ್ಸಿನ ಹೊಡೆತದಿಂದ ಜರ್ಜರಿತವಾಗಿತ್ತು. ಮೈಯಲ್ಲಿದ್ದ ಮಾಂಸ ಖಂಡಗಳು ಕರಗಿ ಮೈಮೂಳೆ ಬಿಟ್ಟುಕೊಂಡಿತ್ತು. ಮುಖದಲ್ಲಿ ವೃದ್ಧಾಪ್ಯದ ಚಿನ್ಹೆಗಳು ಎದ್ದು ಕಾಣುತ್ತಿತ್ತು. ತಲೆಯ ಕೂದಲೆಲ್ಲ ನೆರತು ಹೋಗಿದ್ದವು. ಆ ಸ್ಥಿತಿಯಲ್ಲಿದ್ದ ತನ್ನ ತಾಯಿಯನ್ನು ಗುರುತಿಸುವುದು ಸುಮಿತ್ರೆಗೂ ಕೊಂಚ ಕಷ್ಟವಾಯಿತು.

ಒಬ್ಬರ ಗುರುತು ಒಬ್ಬರಿಗಾಗಿ, ಸುಮಿತ್ರೆಗೆ ಅದೇನೆನಿಸಿತೋ ಓಡಿಹೋಗಿ ತಾಯಿಯ ಕಾಲಿಗೆ ಬಿದ್ದು ಗಳಗಳನೆ ಅಳತೊಡಗಿದಳು.

ಸೀತಮ್ಮನವರು ಮಗಳನ್ನು ಪ್ರೀತಿಯಿಂದ ಮೇಲೆಬ್ಬಿಸಿ, ಅವಳ ತಲೆಯನ್ನು ನೇವರಿಸುತ್ತಾ ಏನೋ ಬಡಬಡಿಸಿದರು. ಒಂದು ನಿಮಿಷ ತಾಯಿ ಮಕ್ಕಳ ಸಮಾಗಮದ ಆ ದೃಶ್ಯವನ್ನು ಪಾರ್ವತಮ್ಮ ಹಾಗೂ ಇತರರು ನೋಡುತ್ತ ಮೂಕರಾಗಿ ನಿಂತರು. ಆ ಹುಡುಗ ಸುಬ್ರಹ್ಮಣ್ಯನಿಗೆ ತಾನು ಯಾರನ್ನು ಕ್ರಿಶ್ಚಿಯನ್ ಹುಡುಗಿ ಎಂದು ತಿಳಿದಿದ್ದನೋ ಅವಳು ಬೇರಾರೂ ಆಗಿರದೆ ತನ್ನ ಅಕ್ಕನೆಂದು ತಿಳಿದು ಆನಂದದಿಂದ ಕುಣಿದಾಡುವಂತೆ ಆಯಿತು. ಅವನು ಮುಖವನ್ನು ಊರಗಲ ಮಾಡಿಕೊಂಡು ಅಕ್ಕನ ಮುಖವನ್ನೇ ನೋಡುತ್ತಾ ನಿಂತುಬಿಟ್ಟ!

ಸೀತಮ್ಮನವರು ತಮ್ಮ ಭಾವೋನ್ಮಾದದಿಂದ ಎಚ್ಚತ್ತುಕೊಂಡು ಮನೆಗೆ ಮಗಳು ಬಂದಿರುವ ಸುದ್ದಿಯನ್ನು ತಮ್ಮ ಯಜಮಾನರಿಗೆ ತಿಳಿಸಲು ಅವರಿದ್ದೆಡೆಗೆ ಧಾವಿಸಿ ನಡೆದರು. ಆದರೆ ವೆಂಕಪ್ಪಯ್ಯ ಆ ವೇಳೆಯಲ್ಲಿ ಗಾಢವಾದ ನಿದ್ರೆಯಲ್ಲಿ ಇದ್ದುದರಿಂದ ಅವರನ್ನು ಎಚ್ಚರಿಸಲು ಮನಬಾರದೆ ಹಿಂದಿರುಗಿ ಬಂದರು.

"ಅಮ್ಮಾ ಅಣ್ಣನಿಗೆ ಈಗ ಕಾಯಿಲೆ ಹೇಗಿದೆ?"

"ಹಾಗೇ ಇದೆ ಮಗು ?"

"ಎಂಥ ಕಾಯಿಲೆ ?"

"ಎಂಥನೋ ಜ್ವರವಂತವಮ್ಮಾ. ಒಬ್ಬೊಬ್ಬರು ಒಂದೊಂದು ಹೇಳ್ತಿದಾರೆ."

"ಯಾರಿಗಾದರೂ ತೋರಿಸಿತೆ ? "

"ಎಲ್ಲರಿಗೂ ತೋರಿಸಿ ಆಯಿತು. ಅವರು ಹೇಳಿದ ಎಲ್ಲ ಔಷಧ ಪಥ್ಯ ಮಾಡಿದರೂ ಕಾಹಿಲೆ ಮಾತ್ರ ಗುಣವಾಗಿಲ್ಲ. ದಿನದಿನಕ್ಕೆ ಇನ್ನೂ ಹೆಚ್ಚಾಗುತ್ತಲೇ ಇದೆ--ಎಲ್ಲ ನಮ್ಮ ಗ್ರಹಚಾರವಮ್ಮ" ಎಂದರು ತಾಯಿ.

ಕೊಂಚ ಕಾಲ ಬಿಟ್ಟುಕೊಂಡು,

"ಈಚೆಗೆ ಎಂಟು ದಿನಗಳಿಂದ ಅವರು ಉಳಿಯುವುದೇ ಇಲ್ಲವೆಂದು ಇದ್ದೆವು. ಮೊನ್ನೆಯಂತೂ ಅವರನ್ನು ಹೊರಗೆ ತಂದಿಡಬೇಕೆಂದು ಅಕ್ಕಪಕ್ಕದ ಮನೆಯವರು ಸೂಚಿಸಿದರು. ಆದರೆ ನಮ್ಮ ಪುಣ್ಯ ದೊಡ್ಡದು. ದೇವರು ಚೀಟಿಯನ್ನು ತಿರುಗಿಸಿ ಹಾಕಿದ. ನಿನ್ನೆಗಿಂತ ಇಂದು ಎಷ್ಟೋ ಮೇಲೆನ್ನಬಹುದು. ಇಂದು ಕೊಂಚ ನಿದ್ರೆಯಾದರೂ ಮಾಡುತ್ತಿದ್ದಾರೆ. ನಿನ್ನೆ ಅದೂ ಇಲ್ಲ. ಈಚೆಗಂತೂ ಅವರಿಗೆ ನಿನ್ನದೇ ಧ್ಯಾನವಾಗಿ ಬಿಟ್ಟಿದೆ ಮಗು. ನಿನ್ನನ್ನೊಮ್ಮೆ ನೋಡಬೇಕು, ಎಂದು ಅವರು ಬಹುವಾಗಿ ಹಂಬಲಿಸುತ್ತಿದ್ದಾರೆ. ನೀನು ದೊಡ್ಡ ಮನಸ್ಸು ಮಾಡಿ ಬಂದೆಯಲ್ಲ—ಇದು ನಮ್ಮ ಭಾಗ್ಯವೇ ಸರಿ" ಎಂದರು ಸೀತಮ್ಮ.

" ಹಾಗಾದರೆ ನನ್ನ ಮೇಲೆ ಸಿಟ್ಟಿಲ್ಲ ತಾನೆ ? "

"ನಿನ್ನ ಮೇಲೆ ಸಿಟ್ಟೆ ? ಮಗು ಏನು ಮಾತನಾಡುವೆ ? ಇನ್ನು ಸಿಟ್ಟು ಮಾಡಬೇಕಾಗಿರುವವಳು ನೀನು. ನೀನು ನಮ್ಮ ಎಲ್ಲ ಅಪರಾಧಗಳನ್ನು ಮನ್ನಿಸಿ ಇಲ್ಲಿಗೆ ಬಂದಿದ್ದೀ. ನಿನ್ನ ಮೇಲೆ, ನಾವು ಸಿಟ್ಟು ಮಾಡುವುದೇ ?" ಎಂದರು.

ಸೀತಮ್ಮ ಮತ್ತೆ ಮಡಿಯುಟ್ಟು ಬೇಗನೆ ಅಡಿಗೆಮಾಡಿ ಎಲ್ಲರಿಗೂ ಒಟ್ಟಿಗೆ ಎಡಿಸಿದರು. ಊಟ ಮಾಡುತ್ತ ಸುಮಿತ್ರೆ ತನ್ನ ತಾಯಿ, ತಮ್ಮ, ತಂಗಿಯ ಡೊಂದಿಗೆ ಸಾವಿರ ಮಾತು ನಡೆಸಿದಳು. ಅವಳ ಮಾತನ್ನು ಕೇಳಿ, "ಇದೇನೇ ಸುಮಿತ್ರೆ, ಮಾತಿನ ಸಂಭ್ರಮದಲ್ಲಿ ನೀನು ಊಟವನ್ನೇ ಮರೆತುಬಿಟ್ಟಿ ದ್ದೀಯಾ? ಮಾತು ಆಮೇಲೆ ಆಡುವೆಯಂತೆ. ಮೊದಲು ಊಟ ಮಾಡು." ಎಂದು ಸೀತಮ್ಮನವರು ಹೇಳಬೇಕಾಯಿತು.

"ನನಗೆ ಯಾಕೋ ಹಸಿವೇ ಇಲ್ಲಮ್ಮ........"

"ಯಾಕೆ ಹಸಿವಿಲ್ಲ—ಮಧ್ಯಾಹ್ನದಿಂದಲೂ ಏನೂ ತಿಂದಿಲ್ಲ?"

"ಇನ್ನೇನು ಹೊಟ್ಟೆಯ ತುಂಬಾ ಸಂತೋಷ ತುಂಬಿರುವಾಗ ಇನ್ನೆಲ್ಲಿ ಹಸಿವಾಗುತ್ತದೆ!" ಎಂದು ಪಾರ್ವತಮ್ಮ ಸೊಸೆಯನ್ನು ಟೀಕಿಸಿದರು.

ಆ ರಾತ್ರಿ ಎಲ್ಲಾ ಸುಮಿತ್ರೆ ತಾಯಿಯೊಂದಿಗೆ ಎಷ್ಟು ಮಾತನಾಡಿದರೂ ಇನ್ನೂ ಮುಗಿಯದ ಮಾತು ಇದ್ದೇ ಇತ್ತು. ತಮ್ಮ ಮಾತುಕತೆಯಿಂದ ಇತ ರರಿಗೆ ನಿದ್ರಾಭಂಗವಾಗಬಾರದೆಂದು ಅವರಿಬ್ಬರು ಬೇರೆಯಾಗಿ ಮಲಗಿದ್ದರು. ಸುಮಿತ್ರೆ ತಾನು ಮೈಸೂರು ಸೇರಿದ ಮೇಲೆ ಇಲ್ಲಿಯ ತನಕ ನಡೆದ ಎಲ್ಲ ಸಂಗತಿಗಳನ್ನು ಒಂದೂ ಬಿಡದೆ ಎಲ್ಲವನ್ನು ವಿಸ್ತರಿಸಿ ಹೇಳಿದಳು.

ಸೀತಮ್ಮನೂ ತಾವು ಮಡಿಕೇರಿಯನ್ನು ಬಿಟ್ಟು ಬಂದಲಾಗಾಯಿತು ನಡೆದ ಎಲ್ಲ ವಿಷಯಗಳನ್ನು ಬಣ್ಣಿಸಿದರು. ಹಿರಣ್ಣಯ್ಯ ತೀರಿಕೊಂಡ ಮೇಲೆ ಅವನ ಆಸ್ತಿಗಾಗಿ ಅವನ ದೂರದಜ್ಞಾತಿಗಳು ವೆಂಕಪ್ಪಯ್ಯನಮೇಲೆ ಮೊಕದ್ದಮೆ ಹೂಡಿದ್ದರು. ಅದರೆ ಹಿರಣ್ಣಯ್ಯ ಮಾಡಿದ್ದ ವಿಲ್ಲಿನ ಸಹಾಯದಿಂದ ವೆಂಕಪ್ಪ ಯ್ಯನ ವಿರುದ್ಧ ಯಾವ ಹಕ್ಕು ನಿಲ್ಲಲಿಲ್ಲ. ಹಿರಣ್ಣಯ್ಯನ ಮಗಳ ಮದುವೆ ಯಾದದ್ದು, ಅವನ ಇನ್ನಿಬ್ಬರು ಗಂಡು ಹುಡುಗರು ಅಕ್ಕನ ಜೊತೆಯಲ್ಲಿ ಮಂಗ ಳೂರನ್ನು ಸೇರಿ ಓದುತ್ತಿರುವುದು, ಸುಬ್ರಮಣ್ಯ ಲೋಯರ್ ಸೆಕೆಂಡರಿಯನ್ನು ಪಾಡಲಾರದೆ, ವೈದಿಕ ವೃತ್ತಿಗೆ ಇಳಿಯಲಾರದೆ, ಕಡೆಗೆ ವ್ಯವಸಾಯಕ್ಕೆ ಇಳಿ ದದ್ದು, ಅವನ ನಂತರ ಹುಟ್ಟಿದ ಸಾಂಬಶಿವ, ಲಲಿತಾಂಬ ಇವರ ಕಥೆ ಬಂತು. ಅದರ ಜೊತೆಯಲ್ಲಿ ವೆಂಕಪ್ಪಯ್ಯನವರು ಘಟ್ಟದ ಕೆಳಗೆ ಯಾರದೋ ಶ್ರೀಮಂ ತರ ಮನೆಯಲ್ಲಿ ಮದುವೆ ಮಾಡಿಸಲು ಹೋಗಿ ಮೂರು ತಿಂಗಳ ಮೇಲೆ ಮನೆಗೆ ಬಂದು ಹಾಸಿಗೆ ಹಿಡಿದದ್ದು, ಅಲ್ಲಿಂದಾಚೆಗೆ ಸೀತಮ್ಮನನ್ನು ಕಿತ್ತು ತಿನ್ನುತ್ತಿದ್ದ

ಕಾಹಿಲೆ ವೆಂಕಪ್ಪಯ್ಯನವರ ಹೆಗಲೇರಿದ್ದು, ಎಲ್ಲ ಸಂಗತಿಗಳನ್ನು ಮಗಳಿಗೆ ತಿಳಿಸಿದರು.

ಘಟ್ಟದ ಕೆಳಗಿನಿಂದ ಬಂದಮೇಲೆ ವೆಂಕಪ್ಪಯ್ಯ ಹಾಸಿಗೆ ಹಿಡಿದು ಮಲಗಿದವರು ಎದ್ದಿರಲಿಲ್ಲ. ಇಂಥದೆಂದು ಹೇಳಲು ಬಾರದ ಕಾಹಿಲೆ. ಅವರ ಕಾಹಿಲೆಯನ್ನು ತೋರಿಸುವವರಿಗೆಲ್ಲ ತೋರಿಸಿ ಮಾಡುವ ಔಷಧಿಗಳನ್ನೆಲ್ಲ ಮಾಡಿದ್ದರು. ಆದರೆ ಇದು ಗುಣವಾಗುವ ಬದಲು ಕೆಡುತ್ತಲೇ ಹೋಗಿತ್ತು. ಕಟ್ಟಕಡೆಗೆ ಅವರು ಉಳಿಯುವುದೇ ಅನುಮಾನವಾಗಿ, ಅವರ ಕಡೆಯ ಆಸೆಯನ್ನು ಹೊತ್ತ ಪತ್ರ ಸುಮಿತ್ರೆಗೆ ಬಂದಿತ್ತು. ಈಗ ಸುಮಿತ್ರೆಯನ್ನು ಕಂಡಮೇಲೆ ವೆಂಕಪ್ಪಯ್ಯ ಉಳಿದರೂ ಉಳಿದುಕೊಂಡಾರು ಎನ್ನುವ ಧೈರ್ಯ ಸೀತಮ್ಮನಿಗೆ ಆಗಿತ್ತು. ಈ ಎಲ್ಲ ಮಾತುಗಳಲ್ಲಿ ಇಬ್ಬರಿಗೂ ದಣಿವಾಯಿತು. ದಿನದ ಬಸ್ ಪ್ರಯಾಣದಲ್ಲಿ ಬಹುವಾಗಿ ದಣಿದಿದ್ದ ಸುಮಿತ್ರೆಗೆ ಮಾತನಾಡುತ್ತಿದ್ದಂತೆಯೇ ನಿದ್ರೆ ಬಂದು ಬಿಟ್ಟಿತು. ಅವಳಿಗೆ ಎಚ್ಚರವಾದಾಗ ಬೆಳ್ಳನೆ ಬೆಳಕಾಗಿತ್ತು.

## ೧೫

ಸುಮಿತ್ರೆ ನಿದ್ರೆಯಿಂದ ಎಚ್ಚತ್ತಾಗ ಮನೆಯಲ್ಲಿ ಎಲ್ಲರೂ ಎಚ್ಚತ್ತು ತಮ್ಮ ದೈನಂದಿನ ಕೆಲಸಗಳಲ್ಲಿ ತೊಡಗಿದ್ದರು. ಪಾರ್ವತಮ್ಮನವರಿಗೆ ಬೆಳಗಿನ ಜಾವದಲ್ಲಿಯೇ ಎಚ್ಚರವಾಗಿದ್ದರೂ ರಾತ್ರಿ ಎಲ್ಲಾ ಮಾತನಾಡುತ್ತ ಕುಳಿತಿದ್ದ ಸೊಸೆಯನ್ನು ಎಬ್ಬಿಸಲು ಮನಸ್ಸಾಗದೆ ತಾವು ಸ್ನಾನ ಮಾಡಿ ಮಡಿಯುಟ್ಟು ಒಂದು ಸಾರಿ ಕಾಫಿ ಕುಡಿದು ಮತ್ತೊಂದು ಸಲದ ಕಾಫಿಗೆ ಅಣಿಯಾಗುತ್ತಿದ್ದರು. ಆಗಲೇ ಸುಮಿತ್ರೆಗೆ ಎಚ್ಚರವಾದದ್ದು.

ಅವಳು ಎಚ್ಚರಗೊಳ್ಳುತ್ತಿದ್ದಂತೆ "ನಿದ್ರೆ ಚೆನ್ನಾಗಿ ಬಂತಾ ಅಕ್ಕ" ಎಂದು ಸುಬ್ರಮಣ್ಯ ವಿಚಾರಿಸಿಕೊಂಡ. "ಇಂಥ ನಿದ್ರೆ ಬಹಳ ಕಾಲದಿಂದ ಮಾಡಿಯೇ ಇರಲಿಲ್ಲ" ಎಂದೆನ್ನುತ್ತ ಸುಮಿತ್ರೆ ತಲೆಕೂದಲನ್ನು ಸರಿಪಡಿಸಿಕೊಳ್ಳುತ್ತಾ ಹಾಸಿಗೆಯಿಂದ ಎದ್ದಳು. ಎಲ್ಲರೂ ತನಗಿಂತ ಮುಂಚೆಯೇ ಎದ್ದಿರುವುದನ್ನು

ಕಂಡು "ಇವತ್ತು ಅದೆಂಥ ನಿದ್ರೆ ಬಂದುಬಿಟ್ಟಿತ್ತು! ಇಷ್ಟು ದಿನಕ್ಕೆ ಇವತ್ತೇ ರಿಕಾರ್ಡು ಬ್ರೇಕ್" ಎಂದಳು.

ಈ ಮಾತು ಸುಬ್ರಮಣ್ಯನಿಗೆ ಅರ್ಥವಾಗದೆ ಅವನು ಪಿಳಪಿಳನೆ ಅಕ್ಕನ ಮುಖ ನೋಡಿದ.

ಸುಮಿತ್ರೆ ಹಾಸ್ಟೆಲಿನಲ್ಲಿ ಇದ್ದಾಗ ಬೆಳಗಿನ ಜಾವಕ್ಕೆ ಎದ್ದು ಸ್ನಾನ ಮಾಡಿ ಓದಿಕೊಳ್ಳುವ ಪರಿಪಾಠವಿಟ್ಟುಕೊಂಡಿದ್ದಳು. ಬೆಳಗಿನ ಜಾವಕ್ಕೇ ಏಳುತ್ತಿದ್ದ ದೊಡ್ಡ ತರಗತಿಗಳ ಹುಡುಗಿಯರೂ, ಬಿ. ಟಿ. ವಿದ್ಯಾರ್ಥಿನಿಯರೂ ನಾಲ್ಕು ಗಂಟೆಗೇ ಸ್ನಾನಕ್ಕೆ ಇಳಿಯುತ್ತಿದ್ದರು.

ಹಾಸ್ಟೆಲಿನ ಸೇವಕ ರಾತ್ರಿಯೇ ಬಾಯಲರ್‌ಗಳಿಗೆ ನೀರು ಭರ್ತಿ ಮಾಡಿ ಮಲಗುವಾಗಲೇ ಒಲೆಗೆ ಉರಿಹಾಕಿ ಮಲಗಿಕೊಳ್ಳುತ್ತಿದ್ದ. ನಾಲ್ಕು ಗಂಟೆಯ ವೇಳೆಗೆ ನೀರು ಕುದಿಯುತ್ತಿತ್ತು. ಸುಮಿತ್ರೆ ಹಾಗೂ ಇತರ ವಿದ್ಯಾರ್ಥಿನಿಯರ ಕಾಟ ತಡೆಯಲಾರದೆ ಅವನು ಬಚ್ಚಲು ಮನೆಯ ಬೀಗದ ಕೈಯನ್ನು ಅವರ ಕೈಗೇ ಕೊಟ್ಟು, ಅವರು ಮನಸ್ಸು ಬಂದಾಗ, ಬೇಕಾದಷ್ಟು ನೀರು ಸ್ನಾನ ಮಾಡಲು ಸ್ವಾತಂತ್ರ್ಯ ಕೊಟ್ಟಿದ್ದ. ಇದರಿಂದಾಗಿ ಸುಮಿತ್ರೆಗೆ ಬೆಳಗಿನ ಜಾವಕ್ಕೆ ಏಳುವುದು ಪರಿಪಾಠವಾಗಿ ಬಿಟ್ಟಿತ್ತು. ಅವಳಿಗೆ ನಾಲ್ಕು ಗಂಟೆಗೆ ಎಚ್ಚರವಾಗಿ ಬಿಡುತ್ತಿತ್ತು. ಸ್ನಾನ ಮಾಡಿ ಬಂದು ಒಂದೆರಡು ತಾಸು ಓದಿದರೆ ಓದಿದುದೆಲ್ಲ ಮನಸ್ಸಿಗೆ ಹಿಡಿಯುತ್ತಿತ್ತು.

ಆದುದರಿಂದಲೇ ಸುಮಿತ್ರೆ ತನ್ನ ರಾತ್ರಿಯ ಓದನ್ನೆಲ್ಲ ಬೆಳಗಿನ ಜಾವಕ್ಕೆ ಇಟ್ಟುಕೊಂಡು ರಾತ್ರಿ ಒಂಬತ್ತು ಗಂಟೆಗೇ ಮಲಗಿಬಿಡುತ್ತಿದ್ದಳು. ಇಂಥವಳು ಇಂದು ಬೆಳಗ್ಗೆ ಎಂಟೂವರೆ ತನಕ ಮೈಮೇಲೆ ಎಚ್ಚರವಿಲ್ಲದೆ ನಿದ್ರೆ ಮಾಡಿದಳೆಂದರೆ ಅವಳು ತನ್ನ ನಿದ್ರೆಯ ರಿಕಾರ್ಡನ್ನು ಬ್ರೇಕ್ ಮಾಡಿದಂತೆಯೇ ಸರಿ.

ಸುಮಿತ್ರೆ ತಾನು ಎದ್ದುದೇ ಹೊತ್ತಾಯಿತೆಂದು ಮುಖ ತೊಳೆಯುವ ಬದಲು ಸ್ನಾನಕ್ಕೆ ಇಳಿದಳು. ಸುಮಿತ್ರೆ ಸ್ನಾನ ಮಾಡಲು ಬಂದಾಗ, ತಾಯಿ ಸೀತಮ್ಮ ಹಸುವಿನ ಹಾಲು ಕರೆಯುತ್ತಿದ್ದರು. ಮನೆಯಲ್ಲಿ ಎರಡು ಕರೆಯುವ ಹಸುಗಳು ಇದ್ದವು. ಹಿಂದೆ ಮಡಿಕೇರಿಯಲ್ಲಿ ಇದ್ದಾಗ ಹಾಲು ಮೊಸರಿಗೆ ತುಂಬಾ ಅಭಾವವಾಗಿತ್ತು.

ಈಗ ಅವರಿಗೆ ಯಾವ ಕೊರತೆ ಇರಲಿಲ್ಲ. ಮನೆಯ ಹಿಂದೆ ಯಥೇಚ್ಛ

ವಾಗಿ ಮೇವು ಇತ್ತು. ಹಸುಗಳು ಸಮೃದ್ಧಿಯಾಗಿ ಹಾಲು ಕರೆಯುತ್ತಿದ್ದ
ಸುಮಿತ್ರೆ ಹುಡುಗಿಯಾಗಿರುವಾಗ ಹಸುವಿನ ನೊರೆಹಾಲಿಗಾಗಿ ಹಠ ಮಾಡು
ದ್ದಳು. ಆದರೆ ಆಗ ಕಟ್ಟಿದ್ದ ಹಸು ತುಂಬಾ ಬಡಕಲು. ಒಂದು ಪಾವಿ
ಹೆಚ್ಚಿಗೆ ಕರೆಯುತ್ತಿರಲಿಲ್ಲ. ಅವರ ಬಡತನಕ್ಕೆ ತಕ್ಕಂತೆ ಅದೂ ಬಡವಾಗಿತ
ಹಾಲು ಬೇಡುವ ಮಕ್ಕಳಿಗೆ ಮನಪೂರೆ ಉಣಿಸುವ ಚೈತನ್ಯವಿಲ್ಲದೆ ಇದ್ದ
ಕ್ಕಾಗಿ ಸೀತಮ್ಮ ತಮ್ಮ ದುಃಸ್ಥಿತಿಯನ್ನು ಹಳಿದುಕೊಳ್ಳುತ್ತಿದ್ದರು. ಇಂ
ಸುಮಿತ್ರೆಯನ್ನು ಕಂಡಾಗ ಅವುಗಳೆಲ್ಲ ನೆನಪಾಗಿ "ನೊರೆ ಹಾಲು ಬೇ
ಸುಮಿತ್ರಾ" ಎಂದು ಅವಳ ಬಾಲ್ಯದ ಸ್ಮೃತಿಯನ್ನು ಕೆದಕಿದರು.

ಸುಮಿತ್ರೆ ತಮಾಷೆಗೆ "ಬೇಕು" ಎಂದಳು.

"ಮೊದಲು ಮುಖ ತೊಳೆದುಕೊಂಡು ಬಾ. ಆಮೇಲೆ ಹಾಲು!"

ಎಂದು ಸುಮಿತ್ರೆಯನ್ನು ಮುಖ ತೊಳೆಯಲು ಹೇಳಿ ಅವಳು ತಮಾ
ಹೇಳಿದ ಮಾತನ್ನೇ ನಿಜ ಮಾಡಿದರು.

ಸುಮಿತ್ರೆ ಸ್ನಾನ ಮಾಡಿ, ಬಟ್ಟೆಗಳನ್ನು ಬದಲಿಸಿ, ಹೆರಳನ್ನು ಹ
ಕೊಂಡಳು. ಈ ವೇಳೆಗೆ ತಂದೆಯವರು ಎಚ್ಚತ್ತಿದ್ದರಿಂದ ಅವರ ಬಳಿಗೆ ಧಾ
ದಳು. ಆಗ ಅಲ್ಲೆ ಇದ್ದ ಪಾರ್ವತಮ್ಮನವರು ಸುಮಿತ್ರೆಯನ್ನು ಬಳಿಗೆ ಕರೆ
ಅವಳ ಮುಖವನ್ನೇ ದಿಟ್ಟಿಸಿದರು.

"ಯಾಕೆ ಅತ್ತೆ?"

"ಬೆಳಗಾಗೆದ್ದು ಯಾಕೆ ಬರಿ ಹಣೆಯಲ್ಲಿ ಇದ್ದಿ? ಕುಂಕುಮ ಹ
ಕೊಳ್ಳಬಾರದೆ?" ಎಂದರು.

ಕುಂಕುಮದ ಭರಣಿ ಸುಮಿತ್ರೆಯ ಹೋಲ್ಡಾಲಿನಲ್ಲಿ ಇದ್ದುದು ಎಲಿ
'ಸ್ಟೈರುವಿಲೇ' ಯಾಗಿತ್ತು. ಅದನ್ನು ಹುಡುಕಿ ಹಚ್ಚಿಕೊಂಡು ಅನಂತರ ತ
ಯನ್ನು ನೋಡಲು ಹೋಗುವ ವ್ಯವಧಾನವಿರಲಿಲ್ಲ ಅವಳಿಗೆ.

ಈ ವೇಳೆಗಾಗಲೇ ವೆಂಕಪ್ಪಯ್ಯನವರಿಗೆ ಎಚ್ಚರವಾಗಿತ್ತು. ಈಮೊದ
ಸೀತಮ್ಮನವರು ಮನೆಗೆ ಸುಮಿತ್ರೆ ಬಂದಿರುವ ಸುದ್ದಿಯನ್ನು ಸೂಕ್ಷ್ಮವಾಗಿ
ಸಿದ್ದರು. ಅವರು ಸುಮಿತ್ರೆಯನ್ನು ಎಂದು ನೋಡೇನು ಎಂದು ಕಾತರರ
ಕುಳಿತಿದ್ದರು. ಆದರೆ ಕುಂಕುಮದ ಕಾರಣದಿಂದ ಅವಳು ಬರುವುದು ಕೊ
ಹೊತ್ತಾಯಿತು.

ಸುಮಿತ್ರೆ ಬಂದು ತಂದೆಯ ಬಳಿ ನಿಂತುಕೊಂಡಾಗ ವೆಂಕಪ್ಪಯ್ಯನಿಗೆ ಒಮ್ಮೆಲೆ ಮಗಳ ಗುರುತು ಸಿಗಲಿಲ್ಲ. ಆಗ ನೋಡಿದ್ದಕ್ಕೂ ಈಗ ಇರುವುದಕ್ಕೂ ಯಾವ ಹೋಲಿಕೆ ಇರುವಂತೆ ಅವರಿಗೆ ಕಾಣಲಿಲ್ಲ. ಅವರು ಇವಳೇ ಸುಮಿತ್ರೆ ಹೌದೋ ಅಲ್ಲವೋ ಎಂದು ಅನುಮಾನ ಪಡುವವರಂತೆ ಮಿಕಮಿಕನೆ ನೋಡುತ್ತಾ ಕುಳಿತರು.

ಆಗ ಸುಮಿತ್ರೆಯೇ ಹೇಳಬೇಕಾಯಿತು.

"ಯಾಕೆ ಅಣ್ಣಾ ಹಾಗೆ ನೋಡುತ್ತೀ? ನಾನು ನಿಮ್ಮ ನಿರ್ಭಾಗ್ಯ ಸುಮಿತ್ರೆ" ಎಂದಳು.

"ಮಗು ಸುಮ್ಮಿ, ಕಡೆಗೂ ನನ್ನ ಮೇಲೆ ಕೃಪೆ ಮಾಡಿ ಬಂದೆಯಲ್ಲಾ ಮಗು! ನೀನು ನಿರ್ಭಾಗ್ಯಳೇ ಮಗು? ಅಲ್ಲ. ನಿನ್ನಂಥ ರತ್ನವನ್ನು ಇಷ್ಟು ದಿನ ಕಳೆದುಕೊಂಡಿದ್ದ ನಾವು ನಿರ್ಭಾಗ್ಯರು. ಬಾ ಮಗು. ಬಳಿಗೆ ಬಾ. ಇಷ್ಟು ದಿನ ಈ ಜೀವ ನೀನು ಬರುವೆ ಎಂದು ಕಚ್ಚಿಕೊಂಡಿತ್ತು. ನಿನಗಾಗಿ ನನ್ನ ಹೃದಯ ಎಷ್ಟು ಪರಿತಪಿಸಿತೆಂಬುದನ್ನು ನೀನು ಅರಿಯೆ. ನಿನ್ನನ್ನು ನೋಡದೆ, ನಿನ್ನ ಕೂಡ ನಾನು ಮಾತನಾಡದೆ ನಾನು ಎಲ್ಲಿ ತೀರಿಕೊಳ್ಳು ತ್ತೇನೋ ಎಂದು ನನಗೆ ತುಂಬಾ ಕಳವಳವಾಗಿತ್ತು. ದೇವರ ದಯದಿಂದ ನೀನು ದೊಡ್ಡ ಮನಸ್ಸು ಮಾಡಿ ಬಂದಿರುವೆ. ನೀನು ಸಾವಿರ ವರ್ಷ ಬದುಕು ಮಗು. ಇನ್ನು ನನಗೆ ಬದುಕುವ ಆಸೆ ಇಲ್ಲ. ಇದ್ದ ಒಂದೇ ಆಸೆ–ನಿನ್ನನ್ನು ನೋಡುವುದು—ಅದು ಪೂರೈಸಿತು. ಇನ್ನೊಂದು ಪ್ರಾರ್ಥನೆ ಇದೆ............ ಅದನ್ನು ನಡೆಸಿಕೊಡು........

"ನಾವು–ಮುಖ್ಯವಾಗಿ ನಾನು–ನಿನ್ನನ್ನು ಸಂಪೂರ್ಣವಾಗಿ ಅರ್ಥಮಾಡಿ ಕೊಳ್ಳದೆ ಬಹಳ ಕಿರುಕುಳ ಕೊಟ್ಟೆವು. ನಿನ್ನನ್ನು ನಮ್ಮ ಅಂಧಶ್ರದ್ಧೆಗೆ ಬಲಿ ಕೊಡಲು ಹೊಂಚಿದೆವು. ಈ ದಿನ ನಾವು ಮಾಡಿರುವ ಅಪರಾಧದ ಕಲ್ಪನೆ ಬಂದಿದೆ. ತಂದೆ ತಾಯಿ ಎನಿಸಿಕೊಂಡ ನಾವು ನಿನ್ನ ಮೇಲೆ ಕತ್ತಿ ಕಟ್ಟಿ ನಿನ್ನ ಭವಿಷ್ಯ ಹಾಳಾಗುವುದನ್ನು ಹಾರೈಸಿದೆವು. ಆದರೆ ದೈವಾನುಗ್ರಹದಿಂದ ನೀನು ಇಂದು ಈ ಸ್ಥಿತಿಯಲ್ಲಿ ಇರುವೆ. ನಿನ್ನನ್ನು ಇಷ್ಟು ದಿನ ಕಾಪಾಡಿದ ಆ ತಾಯಿ—ಶಾರದೆಯನ್ನು ಈ ಗಳಿಗೆಯಲ್ಲಿ ಸ್ಮರಿಸಬೇಕಾದ್ದು ನಮ್ಮ ಪರಮ ಕರ್ತವ್ಯವಾಗಿದೆ" ಎಂದು ಹೇಳಿದರು.

ಈ ಮಾತು ವೆಂಕಪ್ಪಯ್ಯನವರ ಬಾಯಲ್ಲಿ ಬರುತ್ತಿದ್ದಂತೆ ಅವರ ಧ್ವನಿ ಗದ್ಗದಿತವಾಯಿತು. ಶಾರದೆಯ ಮಾತು ವೆಂಕಪ್ಪಯ್ಯನ ಬಾಯಲ್ಲಿ ಬಂದೊಡನೆ ಶಾರದೆ ತನಗಾಗಿ ಮಾಡಿರುವ ತ್ಯಾಗದ ನೆನಪಾಗಿ, ಅವಳ ಪುಟ್ಟ ಹೃದಯ ದುಃಖದಿಂದ ತುಂಬಿ ಕಣ್ಣೀರು ಧಾರಾಕಾರವಾಗಿ ಸುರಿಯಿತು. ಇದನ್ನು ಕಂಡು ವೆಂಕಪ್ಪಯ್ಯ ಹೇಳಿದರು.

"ಯಾಕೆ ಅಳುತ್ತೀಯಾ ಸುಮ್ಮಿ. ನಾನು ಸಾಯುವೆನೆಂದು ನೀನು ಅಳುತ್ತಿರುವೆಯಾ ಮಗು ? ನೀನು ಬಂದ ಮೇಲೆ ಸಾವಿನ ದೂತರು ಎಂದೋ ಓಡಿಹೋದರು. ನೀನು ಬಂದಿರುವಾಗ ನಾನು ಸಾಯುವೆನೆಂದುಕೊಂಡಿರುವೆಯಾ ! ನಿನ್ನನ್ನು ಕಾಣುತ್ತಲೇ ಎದೆಯ ಮೇಲೆ ನರ್ತಿಸುತಿದ್ದ ಯಮಕಿಂಕರರು ನನ್ನನ್ನು ಬಿಟ್ಟು ಕದಲಿದರು. ನೋಡು, ನನ್ನ ಎದೆ ಎಷ್ಟು ಹಗುರವಾಗಿದೆ........" ಎಂದು ಅವಳನ್ನು ಸಮಾಧಾನ ಮಾಡಿದರು.

ಸುಮಿತ್ರೆ ಮಾತಿಲ್ಲದೆ ಸುಮ್ಮನೆ ನಿಂತಿದ್ದಳು.

"ಸುಮ್ಮಿ, ಎಲ್ಲಿ, ಮುಖ ಈ ಕಡೆ ತಿರುಗಿಸು. ನಿನ್ನನ್ನು ನೋಡಿ ಎಷ್ಟೊಂದು ವರ್ಷಗಳಾಯಿತು. ನೀನು ಎಷ್ಟು ಬೆಳೆದು ಬಿಟ್ಟಿದ್ದಿ? ನನಗೆ ಗುರುತೇ ಸಿಗಲಿಲ್ಲ ಮೊದಲು. ಚೋಟುದ್ದ ಹುಡುಗಿಯಾಗಿದ್ದ ನೀನು ಈಗ ಎಷ್ಟು ದೊಡ್ಡವಳಾಗಿದ್ದಿ ? ಎಲ್ಲಿಯಾದರೂ ಚನ್ನಾಗಿ ಇರು ಮಗು. ನಮ್ಮ ಹೊಟ್ಟೆಯಲ್ಲಿ ಹುಟ್ಟಿದುದಕ್ಕೆ ಅಷ್ಟನ್ನೇ ನಾವು ಹಾರೈಸುವುದು." ಎಂದು ಮಗಳ ತಲೆಯನ್ನು ಸವರಿದರು.

ಸುಮಿತ್ರೆ ಇನ್ನೂ ಮಾತಿಲ್ಲದೆ ತಂದೆಯ ಮುಖವನ್ನೇ ನೋಡುತ್ತಾ ನಿಂತಿದ್ದಳು.

"ಯಾಕೆ ಸುಮ್ಮಿ, ನನ್ನೊಂದಿಗೆ ಮಾತನಾಡುತ್ತಿಲ್ಲ. ನನ್ನ ಮೇಲೆ ನಿನಗೆ ಕೋಪವೆ ?" ಎಂದು ಪ್ರಶ್ನಿಸಿದರು.

ಸುಮಿತ್ರೆ ಇಲ್ಲವೆಂದು ತಲೆಯಲ್ಲಾಡಿಸಿದಳು.

ಸುಮಿತ್ರೆಯಿಂದ ಇಲ್ಲಿಯ ತನಕ ಒಂದು ಮಾತು ಬಾರದೆ ಇರುವುದನ್ನು ಕಂಡ ವೆಂಕಪ್ಪಯ್ಯನಿಗೆ ತುಂಬಾ ನಿರಾಶೆಯಾಯಿತು.

"ಹೌದು ಸುಮ್ಮಿ, ನಿನ್ನನ್ನು ನಾನು ತುಂಬಾ ಕೆಟ್ಟ ರೀತಿಯಲ್ಲಿ ನಡೆಸಿಕೊಂಡಿದ್ದೇನೆ. ನೀನು ನಮ್ಮೊಡನೆ ಇದ್ದಷ್ಟು ದಿನ ನಿನಗೆ ಚಿತ್ರಹಿಂಸೆ ಕೊಟ್ಟೆ.

ನಿನ್ನ ವಿದ್ಯಾಪ್ರಗತಿಯನ್ನು ಕಂಡು ಸಂತೋಷ ಪಡುವ ಬದಲು ಅಸೂಯೆಪಟ್ಟೆ ಇಷ್ಟೇ ಸಾಲದೆಂಬಂತೆ ನಿನ್ನನ್ನು ಬಲವಂತನಾಗಿ ಆ ಹಿರಣ್ಯನ ಕೊರಳಿಗೆಕಟ್ಟಿದೆ. ಹಾಗೆಯೇ ನಿನ್ನ ತಲೆಯಮೇಲೆ ಬಂಡೆಯುನ್ನೂ ಎಳೆದೆ. ದೇವರು ನನ್ನಂಥ ಪಾಪಿಗೆ ಸರಿಯಾದ ಶಿಕ್ಷೆಯನ್ನೇ ಕೊಟ್ಟ. ನನ್ನಂಥ ಪಾಪಿ ಇನ್ನು ಬದುಕಿರ ಬಾರದು........ಇನ್ನೊಂದು ಕ್ಷಣಕಾಲ ಬದುಕಿರಬಾರದು" ಎಂದು ಬಾಯಿಗೆ ಬಂದಂತೆ ಹೇಳತೊಡಗಿದರು.

ಅವರ ಬಾಯಿಂದ ಬರುತ್ತಿದ್ದ ಮಾತುಗಳು ಶರಗಳಂತೆ ಸುಮಿತ್ರೆಯ ಹೃದಯವನ್ನು ಭೇದಿಸಿದವು. ಸುಮಿತ್ರೆ ಹೇಳಿದಳು.

"ಆಗಿ ಹೋದುದನ್ನು ನೆನೆದು ದುಃಖಿಸಬೇಡ. ಅಣ್ಣಾ........ ಹಣೆಯಲ್ಲಿ ಏನೇನು ಬರೆದಿತ್ತೋ ಅದೆಲ್ಲ ಆಯಿತು. ಅದಕ್ಕಾಗಿ ನೀವೇಕೆ ಪರಿತಪಿಸ ಬೇಕು? ನನಗೇನಾಗಿದೆ? ನಾನು ಸುಖವಾಗಿಯೇ ಇದ್ದೇನೆ. ದೇವರು ಇದುವರೆಗೆ ನನಗೆ ಯಾವುದಕ್ಕೂ ಕಡಿಮೆ ಮಾಡಿಲ್ಲ!" ಎಂದು ಹೇಳುತ್ತಾ ತಂದೆಯನ್ನು ದಿಟ್ಟಿಸಿದಳು. ವೆಂಕಪ್ಪಯ್ಯನೂ ಮಗಳ ಮುಖವನ್ನು ಕೆಲವು ಕಾಲ ನೋಡಿ, ಅವಳ ಹಣೆಯಲ್ಲಿ ಇದ್ದ ಕುಂಕುಮವನ್ನು ಕಂಡು ಅವರ ಮನಸ್ಸು ಅರಳಿತು. ಅಳಿಸಿ ಹೋಗಿದ್ದ ಕುಂಕುಮ ಮತ್ತೆ ಸುಮಿತ್ರೆಯ ಹಣೆ ಯಲ್ಲಿ ರಾರಾಜಿಸುತ್ತಿದೆ! ಇದು ಅವರಿಗೆ ಒಂದು ದೊಡ್ಡ ಪವಾಡವೆಂದೇ ಅನಿಸಿತು.

ಸುಮಿತ್ರೆಗೆ ಗಂಡ ಸತ್ತುಹೋಗಿರುವ ವಿಷಯವನ್ನು ನಂಬಿದ್ದರೇಹೊರತು ಸುಮಿತ್ರೆ ಮತ್ತೆ ಮದುವೆಯಾದುವನ್ನು ಅವರೆಷ್ಟು ಪ್ರಯತ್ನಿಸಿದರೂ ನಂಬಲಾಗಿರ ಲಿಲ್ಲ. ವೈದಿಕ ಮನೆತನದ ಹುಡುಗಿಗೆ ಎರಡನೆಯ ಮದುವೆಯಾಗುವುದೆಂದ ರೇನು? ಎಂದು ಅವರ ಮನಸ್ಸು ಕೇಳಿದ್ದರೂ ಅವರ ಅಂತಃಕರಣ ಸುಮಿತ್ರೆ ಮಾಡಿದುದರಲ್ಲಿ ಯಾವ ತಪ್ಪು ಇಲ್ಲವೆಂದು ಸಾರಿ ಹೇಳಿತ್ತು. ಇಂದು ಆ ಅಂತಃಕರಣವೇ ಮೇಲುಗೈಯಾಗಿತ್ತು. ಸುಮಿತ್ರೆ ಮತ್ತೆ ಮದುವೆಯಾದು ದಕ್ಕೆ ಅವರು ಸಿಟ್ಟಾಗುವಬದಲು ಸಂತೋಷಿಸಿದ್ದರು. ಈಗ ಅವರಿಗೇನೆನಿಸಿತೋ ಹೆಂಡತಿಯನ್ನು ಕರೆದು, ಅವರಿಂದ ಕುಂಕುಮದ ಭರಣಿಯನ್ನು ತರಿಸಿಕೊಂಡು ತಾವೇ ಕೈಯಾರ ಸುಮಿತ್ರೆಯ ಹಣೆಗೆ ಮತ್ತೆ ಕುಂಕುಮವಿಟ್ಟು 'ದೀರ್ಘ ಸುಮಂಗಲಿ ಭವ' ಎಂದು ಆಶೀರ್ವದಿಸಿದರು.

"ನನ್ನ ತಪ್ಪನ್ನು ಕ್ಷಮಿಸುವೆಯಾ ಮಗು ?" ಎಂದು ಮರುಗಳಿಗೆಯಲ್ಲೇ ಪ್ರಾರ್ಥಿಸಿದರು.

ಸುಮಿತ್ರೆ ತಂದೆಯ ಕೈಗಳನ್ನು ಕಣ್ಣಿಗೊತ್ತಿಕೊಂಡಳು. ಅವಳ ವರ್ತನೆ ಯಿಂದ ವೆಂಕಪ್ಪಯ್ಯನಿಗೆ ಮಗಳು ತನ್ನನ್ನು ಕ್ಷಮಿಸಿರುವಳೆಂದು ಮನದಟ್ಟಾ ಯಿತು. ಅವರು ತಮಗಾದ ಸಂತೋಷದ ಹೆಚ್ಚಳವನ್ನು ಮಾತಿನಿಂದ ವ್ಯಕ್ತ ಪಡಿಸಲಾರದೆ ಮೂಕರಾಗಿ ಮಲಗಿದರು. ಅವರ ತಲೆ ಹಣೆಗಳನ್ನು ಮುಟ್ಟಿ ನೋಡಿದ ಸುಮಿತ್ರೆಗೆ ಅವರ ದೇಹದಲ್ಲಿ ಇದ್ದ ಜ್ವರ ಎಷ್ಟೆಂದು ಗೊತ್ತಾಯಿತು. ವೆಂಕಪ್ಪಯ್ಯನವರ ಮನಸ್ಸಿಗಾದ ಉದ್ವೇಗದಿಂದ ಅವರ ದೇಹದಲ್ಲಿ ಜ್ವರ ಕಾಣಿಸಿ ಕೊಂಡಿತ್ತು.

ಸುಮಿತ್ರೆ ಕೂಡಲೇ ತನ್ನ ಸ್ಟೆತಸ್ಕೋಪನ್ನು ತೆಗೆದುಕೊಂಡು ತಂದೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ಅವರಿಗೆ ಬಂದಿರುವ ಕಾಹಿಲೆ ಇಂಥದೆಂದು ಪತ್ತೆ ಮಾಡಿ ದಳು. ಅವರ ಕಾಹಿಲೆ ಎಂತು ದೈಹಿಕವೋ ಅಂತೇ ಮಾನಸಿಕವಾಗಿದೆ ಎಂಬುದು ಅವಳಿಗೆ ಮನದಟ್ಟಾಯಿತು. ತಂದೆಯ ಮನಸ್ಸು ಹೆಚ್ಚು ತಲ್ಲಣಗೊಳ್ಳದಿರಲು ತನ್ನಿಂದಾದಷ್ಟು ಪ್ರಯತ್ನಿಸಿದಳು. ಅವಳು ಕೂಡಲೇ ಮಡಿಕೇರಿಯಿಂದ ತನಗೆ ಬೇಕಾದ ಔಷಧಗಳನ್ನೂ ಇಂಜಕ್ಷನ್‌ಗಳನ್ನೂ ತರಿಸಿ, ತಂದೆಯ ಇಚ್ಛೆಯ ವಿರುದ್ಧ ಅವರಿಗೆ ಕೊಟ್ಟಳು. ತಾನೇ ಕೂತು ಬಲವಂತವಾಗಿ ಟಾನಿಕ್ಕು, ಔಷಧಗಳನ್ನು ಕುಡಿಸಿದಳು.

ಇದರಿಂದಾಗಿ, ವೆಂಕಪ್ಪಯ್ಯನವರ ಜ್ವರ ಒಂದೆರಡು ದಿನಗಳಲ್ಲಿ ಕಡಿಮೆ ಯಾಗಿ, ಅವರ ಉಷ್ಣಾಂಶ ಸಾಮಾನ್ಯ ಸ್ಥಿತಿಗೆ ಬಂದಿತು. ಆದರೂ ವೆಂಕಪ್ಪ ಯ್ಯನವರ ಕಾಹಿಲೆ ಒಂದು ದಿನಕ್ಕೆ ವಾಸಿಯಾಗುವ ಕಾಹಿಲೆಯಲ್ಲ. ಅವರದು ಹಳೆಯ ಕಾಹಿಲೆ. ಅವರಿಗೆ ಸಂತತವಾದ ಔಷಧೋಪಚಾರವಾಗಬೇಕೆಂದು ಮನೆಯವರೆಲ್ಲರನ್ನು ಒಡಂಬಡಿಸಿ, ವೆಂಕಪ್ಪಯ್ಯನನ್ನು ತನ್ನೊಡನೆ ಮಡಿಕೇರಿಗೆ ಕರೆದುಕೊಂಡು ಹೋಗಿ ಅಲ್ಲಿನ ಸರಕಾರಿ ಆಸ್ಪತ್ರೆಗೆ ಸೇರಿಸಬೇಕೆಂದುಕೊಂಡಳು.

ಪಾರ್ವತಮ್ಮನವರೂ ಮಡಿಕೇರಿಗೆ ವೆಂಕಪ್ಪಯ್ಯನವರು ಬರುವುದಾದರೆ ಅಲ್ಲಿ ತಮ್ಮಿಂದಾಗುವ ಎಲ್ಲ ಸಹಾಯ ಮಾಡಿಕೊಡುವುದಾಗಿ ಭರವಸೆ ಇತ್ತರು. ಆದರೆ ಮನೆಯಲ್ಲಿ ಹುಡುಗರನ್ನೇ ಬಿಟ್ಟಿರುವುದು ಹೇಗೆಂದು ಸದ್ಯಕ್ಕೆ ವೆಂಕ ಪ್ಪಯ್ಯ ಮಾತ್ರ ಸುಮಿತ್ರೆಯೊಂದಿಗೆ ಹೊರಟರು. ಅವರು ಆಸ್ಪತ್ರೆಯಲ್ಲಿ ಇರು

ವಾಗ ಅವರನ್ನು ನೋಡಿಕೊಳ್ಳಲು ಅವರ ಹಿರಿಯ ಮಗ ಅವರ ಹಿಂದೆ ಹೊರಟಿದ್ದ. ಸುಮಿತ್ರೆ ಊರಿಗೆ ಹೊರಡುವಾಗ ಸೀತಮ್ಮನವರು ಕಣ್ಣೀರು ತಂದುಕೊಂಡು ಹೇಳಿದರು—

"ಇನ್ನು ನೀನು ಬರುವುದೆಂದು ಸುಮ್ಮಿ? ನೀನು ಆತುರದಲ್ಲಿ ಬಂದೆ, ಆತುರದಲ್ಲಿ ಹೋಗುತ್ತಿದ್ದಿ. ಇನ್ನು ಒಂದೆರಡು ದಿನ ಇದ್ದಿದ್ದರೆ ಚನ್ನಾಗಿತ್ತು."

"ನಿಮ್ಮನ್ನೆಲ್ಲ ಇಷ್ಟು ಬೇಗ ಬಿಟ್ಟುಹೋಗಲು ನನಗೂ ಮನಸ್ಸಿಲ್ಲ ಅಮ್ಮ; ಆದರೆ ನಾನು ಇಲ್ಲಿ ಇದ್ದರೆ ಅಲ್ಲಿ ನನಗೆ ಕಾಲೇಜು ಹೋಗುತ್ತೆ. ಈ ವರ್ಷದ ಪಾಠಗಳಿಗೆ ತಪ್ಪಿಸಿಕೊಂಡರೆ ಪರೀಕ್ಷೆಯ ವೇಳೆಯಲ್ಲಿ ತೊಂದರೆಯಾಗುತ್ತೆ. ಈ ಬಾರಿ ಬಲವಂತ ಮಾಡಬೇಡ. ಇನ್ನೊಮ್ಮೆ ನೀನು ನೆನಪು ಮಾಡಿಕೊಂಡಾಗ ತಪ್ಪದೆ ಬರುತ್ತೇನೆ" ಎಂದು ಆಶ್ವಾಸನ ಕೊಟ್ಟಳು.

ಸುಮಿತ್ರೆ ವೆಂಕಪ್ಪಯ್ಯನವರನ್ನು ಬಹಳ ಜಾಗರೂಕತೆಯಿಂದ ಮಡಿಕೇರಿಗೆ ಸಾಗಿಸಿ ಅಲ್ಲಿನ ಆಸ್ಪತ್ರೆಗೆ ಸೇರಿಸಿದಳು. ಅಲ್ಲಿನ ಸ್ಪೆಷಲ್ ವಾರ್ಡಿನಲ್ಲಿ ಔಷಧೋಪಚಾರ ನಡೆಯುವಂತೆ ಏರ್ಪಡಿಸಿ, ಅವರಿಗೆ ಬೇಕಾಗುವ ಇಂಜಕ್ಷನ್ ಟಾನಿಕುಗಳನ್ನು ತಾನು ಮೈಸೂರಿನಿಂದ ಕಳುಹಿಸಿ ಕೊಡುವುದಾಗಿ ಹೇಳಿ ಮೈಸೂರಿಗೆ ಹೊರಟುನಿಂತಳು. ಹೊರಡುವ ಮುನ್ನ ಬಾಲ್ಯದ ಗೆಳತಿಯಾಗಿದ್ದ ಶೈಲಜೆಯನ್ನು ಮಾತನಾಡಿಸಿಕೊಂಡು ಬರಲು ಅವರ ಮನೆಗೆ ಹೋದಳು.

ಸುಮಿತ್ರೆ ಅವರ ಮನೆಗೆ ಬಂದಾಗ ಶೈಲಜೆ ತನ್ನ ಮಗಳು ಜಯಶ್ರೀಗೆ ಮೊಗ್ಗಿನ ಜಡೆ ಹಾಕಿ ಸಿಂಗಾರ ಮಾಡುತ್ತಿದ್ದಳು. ಅವಳಿಗೆ ತಾನು ಸೀರೆ ಉಡಬೇಕೆಂಬ ಆಸೆಯಾಗಿತ್ತು. ತುಂಬಾ ರಗಳೆ ಮಾಡಿ ದೊಡ್ಡದೊಂದು ಸೀರೆಯನ್ನು ಉಡಿಸಿಕೊಂಡಿದ್ದಳು. ಅವಳು ತನ್ನ ಸಿಂಗಾರವನ್ನು ಮನೆಯವರೆಲ್ಲರಿಗೆ ತೋರಿಸುವ ಸಂಭ್ರಮದಲ್ಲಿದ್ದಾಗ ಸುಮಿತ್ರೆ ಬಂದಳು.

ಸುಮಿತ್ರೆ ಬಂದುದನ್ನು ಅವಳೇ ತಾಯಿಗೆ ವರದಿ ಮಾಡಿದವಳು—

"ಅಮ್ಮ ಯಾರೋ ಬಂದಿದ್ದಾರೆ"

ಶೈಲಜೆ ಯಾರೆಂದು ನೋಡಲು ಬಂದಾಗ ಎದುರಿಗೆ ಸುಮಿತ್ರೆ! ಅನೇಕ ವರ್ಷಗಳ ಮೇಲೆ ಮಡಿಕೇರಿಯಲ್ಲಿ ಮತ್ತೆ ಅವಳ ದರ್ಶನವಾಗಿತ್ತು.

"ಸುಮಿತ್ರೆ ಯಾವಾಗ ಬಂದೆ? ಇವತ್ತು ಬೆಳಿಗ್ಗೆ ತಾನೇ ನಿನ್ನ ಮಾತನ್ನೇ ಆಡಿಕೊಳ್ಳುತ್ತಿದ್ದೆವು. ಮೊನ್ನೆ ಇಲ್ಲಿಗೆ ಬಂದಿದ್ದೆಯಂತೆ. ಮನೆಯ

ಕಡೆ ಏಕೆ ಬರದೆ ಹೋದಳು ಎಂದುಕೊಳ್ಳುತ್ತಿದ್ದೆವು. ಅಂತು ವಿಶ್ವಾಸವಿಟ್ಟು ಬಂದೆಯಲ್ಲ." ಎಂದು ಸುಮಿತ್ರೆಯನ್ನು ಪ್ರೀತಿಯಿಂದ ಬರಮಾಡಿಕೊಂಡಳು.

"ಇನ್ನು ಮೇಲೆ ಅವರನ್ನು ಹಾಗೆಲ್ಲ ಏಕವಚನದಲ್ಲಿ ಮಾತನಾಡಿಸಬೇಡ. ಈಗ ಅವರು ಸಾಮಾನ್ಯರಲ್ಲ—ಡಾಕ್ಟರು. ಎಂ. ಬಿ. ಬಿ. ಎಸ್. ಓದುತಿರೋರು" ಎಂದು ಅಲ್ಲೇ ಏನೋ ಕೆಲಸ ಮಾಡುತ್ತಿದ್ದ ಜಯಂತ ಶೈಲಜೆಗೆ ಹೇಳಿದ.

"ಅವೆಲ್ಲ ನಿಮಗೆ—ಗಂಡಸರಿಗೆ. ನೀವು ಬೇಕಿದ್ದರೆ ಹಾಗೇ ಕರೆಯಿರಿ. ನನಗಂತೂ ಇವಳು ಸುಮಿತ್ರೆ—ಸುಮ್ಮಿಯೇ."

ಈ ಮಾತು ಕೇಳಿ ಸುಮಿತ್ರೆಗೆ ನಗುಬರದೆ ಇರಲಿಲ್ಲ.

ಮುಂದೆ ಎಲ್ಲರ ಕ್ಷೇಮ ಸಮಾಚಾರದ ಮಾತಾಯಿತು. ಸುಮಿತ್ರೆ ತನ್ನ ಕತೆಯನ್ನೆಲ್ಲಾ ಸವಿಸ್ತಾರವಾಗಿ ಹೇಳಿದಳು.

"ಅಂತೂ ಹೆತ್ತ ಕರುಳಿನ ಕರೆಗಿಂತ ಬೇರೆ ಬಂಧನವಿಲ್ಲ." ಎಂದಳು ಶೈಲಜೆ ಎಲ್ಲ ಕಥೆ ಕೇಳಿ. ಅನಂತರ ಶಾರದೆಯ ವಿಷಯ ಬಂತು. ಸುದರ್ಶನ ತೀರಿಕೊಂಡದ್ದು, ತತ್ಫಲವಾಗಿ ಕಿಟ್ಟಣ್ಣನೂ ತೀರಿಕೊಂಡದ್ದು, ಆಮೇಲೆ ಶಾರದೆ ಬಂಗಾಳಕ್ಕೆ ಹೊರಟು ಹೋದದ್ದು—ಎಲ್ಲವನ್ನು ಕೇಳಿ ಶೈಲಜೆ ರೋಮಾಂಚನಗೊಂಡಳು. ಅವಳಿಗೆ ಈ ಘಟನೆಗಳೆಲ್ಲವೂ ಹೊಸವು. ಅವಳಿಗೆ ಶಾರದೆ ಬೊಂಬಾಯಿಯಲ್ಲಿ ಇರುವಳೆಂದು ಮಾತ್ರ ತಿಳಿದಿತ್ತು. ಉಳಿದ ವಿಷಯ ತಿಳಿದಿರಲಿಲ್ಲ. ಅವಳು ಸುದರ್ಶನ ಕಿಟ್ಟಣ್ಣನ ಸಾವಿಗಾಗಿ ಮರುಗಿದಳು. ಶಾರದೆಗಾಗಿ ಹಂಬಲಿಸಿದಳು. ಅವಳು ಅಳುವುದನ್ನು ಕಂಡು ಅವಳ ಮುಂಗಡಿ ಕೂಸು 'ಶಾರದೆ' ಅಳತೊಡಗಿದಳು. ಅವಳನ್ನು ಸಮಾಧಾನ ಪಡಿಸುತ್ತಾ, ಗೋಡೆಗೆ ಹಾಕಿದ್ದ ಕಿಟ್ಟಣ್ಣ ಶಾರದೆಯರ ಭಾವಚಿತ್ರ ಒಂದನ್ನು ತೋರಿಸುತ್ತಾ ಶೈಲಜೆ ಎಂದಳು. "ನೋಡು ಸುಮ್ಮಿ. ಎಷ್ಟೋ ದಿನಗಳಿಂದ ಈ ಕೆಲಸ ಮಾಡಬೇಕೆಂದಿದ್ದೆವು. ಮೊನ್ನೆ ಸಾಧ್ಯವಾಯಿತು. ಚಿಕ್ಕಮ್ಮನದು ಒಂದು ಸಣ್ಣ ಫೋಟೋ ಇತ್ತು. ಅದನ್ನು ಮಂಗಳೂರಿಗೆ ಕಳುಹಿಸಿ ದೊಡ್ಡದುಮಾಡಿಸಿ ತೂಗಿ ಹಾಕಿದ್ದೇವೆ."

ಸುಮಿತ್ರೆ ಚಿತ್ರವನ್ನು ನೋಡಿ 'ಚೆನ್ನಾಗಿದೆ' ಎಂದಳು.

"ಎಲ್ಲವೂ ಅವಳದೆ ಪ್ರಯತ್ನ" ಎಂದ ಜಯಂತ

" ನೀವೇ ಅಲ್ಲವೇನೋ ಮಂಗಳೂರಿಗೆ ಹೋದಾಗ ಅದೇ ಕೆಲಸವಾಗಿ ಇದನ್ನು ದೊಡ್ಡದು ಮಾಡಿಸಿಕೊಂಡು ತಂದವರು "

—ಗಂಡನ ಮಾತನ್ನು ಗಂಡನಿಗೇ ತಿರುಗಿಸಿದಳು ಶೈಲಜೆ.

ಅಂತೂ ಶಾರದೆಯ ಬಗ್ಗೆ ಅವರಿಬ್ಬರಿಗೂ ಇರುವ ಅನನ್ಯಭಕ್ತಿಯನ್ನು ನೋಡಿ ಸುಮಿತ್ರೆಗೆ ಬಹಳ ಸಂತೋಷವಾಯಿತು.

ಸುಮಿತ್ರೆ ಮನೆಗೆ ಹೊರಡಲು ಎದ್ದಳು. ಹೋಗುವಾಗ ಶೈಲಜೆಯು ಮಗು ಶಾರದೆಯನ್ನು ಎತ್ತಿಕೊಂಡು ಮುದ್ದಾಡಿದಳು. ಅದನ್ನು ಕಂಡು ಶೈಲಜೆ ಹೇಳಿದಳು. " ಏನೇ ಸುಮಿತ್ರ ನಿನ್ನ ಆಸೆಯನ್ನೆಲ್ಲ ಇವಳನ್ನು ಎತ್ತಿ ಮುದ್ದಾಡುವುದರಲ್ಲಿಯೇ ಮುಗಿಸಿಬಿಡುವೆ ಏನು?"

ಈ ಮಾತು ಅರ್ಥವಾಗದೆ "ಹಾಗೆಂದರೆ ಏನಮ್ಮ?" ಎಂದಳು ಸುಮಿತ್ರೆ.

" ಅಲ್ಲ ನೀನು ಇನ್ನು ಓದು ಓದು ಅಂತಲೇ ಇದ್ದಿ. ಯಾವಾಗ ಸಂಸಾರ ಹೂಡುವುದು? ಯಾವಾಗ ನಾವೂ ನಿನ್ನ ಮಕ್ಕಳನ್ನು ಆಡಿಸುವುದು"?

" ಓ " ಎಂದಳು ಸುಮಿತ್ರೆ. ಅನಂತರ

ನಗುತ್ತ " ಅದೂ ಒಂದು ದಿನ. ಈಗಲೇ ಏನು ಅವಸರ " ಎಂದಳು ಮೆಲ್ಲನೆ.

" ಚನ್ನಾಯಿತು ನಿನ್ನ ಮಾತು ! ಇನ್ನು ಎಷ್ಟು ವರ್ಷ ನಿನ್ನ ಯಜಮಾನ ರನ್ನು ಹೋಟಲು ಊಟದಲ್ಲಿ ಇಡಬೇಕೆಂದಿದ್ದಿ ? "

" ಇನ್ನೂ ನನ್ನ ಕೋರ್ಸು ಮುಗಿದಿಲ್ಲವಲ್ಲ. ಅಲ್ಲಿಯತನಕ ಇಬ್ಬರಿಗೂ ವನವಾಸ" ಎಂದು ಹೇಳಿ ತಾನೂ ನಕ್ಕು ಶೈಲಜೆಯನ್ನೂ ನಗಿಸಿದಳು. ಸುಮಿತ್ರೆ ಶಾರದೆಯ ಕಡೆ ನೋಡುತ್ತಾ "ಬರ್‍ತೀಯೇನೇ ಶಾರದ ನಮ್ಮೂರಿಗೆ?" ಎಂದಳು.

ಮಗು ಇಲ್ಲವೆಂದು ತಲೆಯಲ್ಲಾಡಿಸಿತು.

" ಯಾಕೆ ಬರೊಲ್ಲ ? ನಮ್ಮೂರಿನಲ್ಲಿ ತಿಂಡಿ ಇದೆ. ಬೊಂಬೆ ಇದೆ ಬಾ ಕೊಡ್ತಿನಿ. ಸಿನಿಮಾ ಇದೆ ತೋರಿಸ್ತಿನಿ ಬಾ" ಎಂದಳು. ಅದಕ್ಕೂ "ಉಹೂಂ" ಎಂದಿತು. ಆ ಮಗು.

" ಇನ್ನೇನು ಬೇಕು ನಿಂಗೆ ? "

" ಪಾಪ ! " ಮಗು ಪಕ್ಕನೆ ಹೇಳಿತು.

ಈ ಮಾತು ಕೇಳಿ ಅಲ್ಲಿದ್ದವರಿಗೆಲ್ಲ ನಗು ಬರದೆ ಇರಲಿಲ್ಲ.

" ನೋಡಿದೆಯಾ ಸುಮಿತ್ರ, ನಮ್ಮ ಶಾರಿ ಹೇಳಿದ ಮಾತು. ನೀನು

ಒಂಟಿಯಾಗಿರುವುದು ನಮ್ಮ ಶಾರಿಯ ಮನಸ್ಸಿಗೂ ಬಂದಿಲ್ಲ. ಬೇಗನೆ ಸಂಸಾರಹೂಡು" ಎಂದು ಶೈಲಜೆ ವ್ಯಾಖ್ಯಾನ ಮಾಡಿದಳು. ಸುಮಿತ್ರೆಗೆ ಈ ಮಾತು ಮಗು ಹೇಳಿದ ಮಾತಾಗಿ ತೋರದೆ—ಸ್ವಯಂ ಶಾರದೆ ಅವಳ ಮೂಲಕ ತನ್ನ ಆಸೆ ವ್ಯಕ್ತ ಪಡಿಸುತ್ತಿರುವಳೇನೋ ಎಂದೆನಿಸಿತು.

ತಾನು ಇನ್ನು ಒಂಟಿಯಾಗಿರುವುದು ಶಾರದೆಯ ಮನಸ್ಸಿಗೆ ಬಂದಿಲ್ಲ ವೇನೋ ಎಂದುಕೊಂಡಳು.

ಸುಮಿತ್ರೆ ಮಡಿಕೇರಿಯಲ್ಲಿ ಹೆಚ್ಚುದಿನ ನಿಲ್ಲದೆ ಮೈಸೂರಿಗೆ ಬಂದು ಬಿಟ್ಟಳು. ಅವಳ ಮನಸ್ಸು ಈಗ ಒಂದು ಬಗೆಯ ಸಮಾಧಾನ ಸ್ಥಿತಿಗೆ ಬಂದಿತ್ತು. ವೆಂಕಪ್ಪಯ್ಯ ಸೀತಮ್ಮನವರು ಅವಳ ದಿಗಂತದಲ್ಲಿ ಮತ್ತೆ ಕಾಣಿಸಿ ಕೊಂಡಂತಾಗಿತ್ತು. ಸಾವಿನ ಉಡಿಯಲ್ಲಿದ್ದ ತಂದೆಯನ್ನು ತಾನು ತನ್ನ ವೈದ್ಯ ಶಾಸ್ತ್ರದಿಂದ ಉಳಿಸಿಕೊಂಡಿದ್ದಳು. ಅದಕ್ಕಾಗಿ ಅವಳಿಗೆ ತನ್ನ ವೃತ್ತಿಯ ಬಗ್ಗೆ ಆದರ ಅಭಿಮಾನ ಉಂಟಾಗಿತ್ತು. ದೇವರ ಕರುಣೆಯ ಬಗ್ಗೆ ಕೃತಜ್ಞತೆ ಉಂಟಾಗಿತ್ತು. ವೆಂಕಪ್ಪಯ್ಯನವರು ಮಡಿಕೇರಿಯ ಆಸ್ಪತ್ರೆಯಲ್ಲಿ ಕೆಲವು ದಿನಗಳಲ್ಲೇ ಗುಣಮುಖರಾದರು. ತಾವು ಗುಣಹೊಂದಲು ಸುಮಿತ್ರೆಯೇ ಕಾರಣವೆಂದು ಅವರಿಗೆ ತಿಳಿದಿತ್ತು. ಅವಳು ವೈದ್ಯವಿದ್ಯೆ ಕಲಿತದರಿಂದ ಕಾಹಿಲೆ ಇಂತಹದೆಂದು ಗೊತ್ತು ಹಚ್ಚಿ ಅದಕ್ಕೆ ಸರಿಯಾದ ಔಷಧ ಅನುಪಾನ ಗಳನ್ನು ಮಾಡಿ ವಾಸಿಮಾಡಿದ್ದಳು. ಅವರಿಗೆ ಮಗಳು ವೈದ್ಯ ಕಲಿತುದು ಸಾರ್ಥಕವೆನಿಸಿತ್ತು. ಈ ಬಗೆಯ ತೃಪ್ತಿ ಸುಮಿತ್ರೆಯಲ್ಲಿಯೂ ಇತ್ತು. ಆ ವರ್ಷದ ಓದು ನಿರಾತಂಕವಾಗಿ ಸಾಗಿ, ಪರೀಕ್ಷೆಗಳೂ ಮುಗಿದು ಬಂದವು. ಪರೀಕ್ಷೆಗಳಲ್ಲಿ ಸುಮಿತ್ರೆಗೆ ಹಾಗೂ ಅವಳ ಗೆಳತಿಯರು ಚನ್ನಾಗಿಯೇ ಮಾಡಿ ದ್ದರು. ಸುಮಿತ್ರೆಗೆ ಪಾಸಾಗುವ ಧೈರ್ಯವಿತ್ತು. ಅವಳು ಮೊದಲಿನಿಂದಲೂ ಯಾವ ಕ್ಲಾಸಿನಲ್ಲಿಯೂ ಫೇಲಾಗಿರಲಿಲ್ಲ. ಆದರೂ ಎಲ್ಲ ವಿದ್ಯಾರ್ಥಿಗಳಂತೆ ಪರೀಕ್ಷೆಯ ಫಲಿತಾಂಶ ಹೊರಬೀಳುವ ತನಕ ಏನಾಗುವುದೋ ಎಂಬ ಹೆದರಿಕೆ ಇದ್ದೇ ಇತ್ತು. ಒಂದು ದಿನ ಆ ಬಗ್ಗೆ ಚಿಂತಿಸುತ್ತಾ ಮಂಕಾಗಿ ಕುಳಿತ ಸುಮಿತ್ರೆಯನ್ನು ನೋಡಿ ಸದಾಶಿವ ಪ್ರಶ್ನಿಸಿದ.

"ಯಾಕೆ ಸುಮ್ಮಿ ಹೀಗೆ ಮಂಕಾಗಿದ್ದಿ ?"

"ಯಾಕೂ ಇಲ್ಲ"

"ಏನೋ ಕಾರಣವಿಲ್ಲದೆ ನೀನು ಹೀಗೆ ಇರುವವಳಲ್ಲ"

"ನೋಡಿ, ಯಾಕೋ ಈ ದಿನವೆಲ್ಲ ಚಿಕ್ಕಮ್ಮನ ನೆನಪು ಮೇಲಿಂದ ಮೇಲೆ ಆಗುತ್ತಿದೆ. ಈ ಜನ್ಮದಲ್ಲಿ ಮತ್ತೆ ಅವಳನ್ನು ನೋಡುವ ಭಾಗ್ಯ ನನಗಿದೆಯೋ ಇಲ್ಲವೋ. ಅವಳಿಗೆ ಕಾಗದ ಬರೆಯೋಣವೆಂದರೆ ಅವಳು ಇಂಥ ಕಡೆ ಇರುವಳೆಂದು ಕೂಡ ತಿಳಿಯದಾಗಿದೆ. ಅವಳು ಬಂಗಾಳಕ್ಕೆ ಹೋದ ಲಾಗಾಯಿತು ಕಾಗದವನ್ನೂ ಬರೆದಿಲ್ಲ; ಅಡ್ರೆಸ್ಸನ್ನೂ ಕೊಟ್ಟಿಲ್ಲ. ಅವಳಿಗೆ ನಾವುಗಳು ಯಾರೂ ಬೇಡ. ಅವಳಿಗೆ ಬೇಕಾಗಿರುವುದು ಸೇವೆ. ಸೇವೆ........ ಅವಳು ಎಲ್ಲಿ ಇರುವಳೋ ದೇವರಿಗೇ ಗೊತ್ತು"

—ಎಂದಳು ಬೇಸರ ಮಿಶ್ರಿತ ದುಃಖದಿಂದ.

ಆ ದಿನವೆಲ್ಲ ಸುಮಿತ್ರೆಗೆ ಶಾರದೆಯದೇ ಧ್ಯಾನವಾಯಿತು. ಶಾರದೆ ಮಣ್ಣಿನ ಮುದ್ದೆಯಾಗಿದ್ದ ತನ್ನನ್ನು ಮನುಷ್ಯಳಾಗಿ ಮಾಡಿದ್ದಳು. ಅವಳು ತನಗೆ ಆಶ್ರಯಕೊಡದೆ ಇದ್ದಿದ್ದರೆ, ತಾನು ಬೀದಿಯ ಭಿಕಾರಿಯಾಗುತ್ತಿದ್ದೆನೋ ಏನೋ........ತನ್ನ ಓದುವ ಆಸೆ ಕೇವಲ ಗಗನ ಕುಸುಮವಾಗುತ್ತಿತ್ತೋ ಏನೋ. ಆದರೆ ಅವಳ ಭಾಗದ ಭಾಗ್ಯದೇವತೆಯಂತೆ ಶಾರದೆ ಅವಳ ಜೀವನ ದಲ್ಲಿ ಕಾಣಿಸಿಕೊಂಡು, ಅವಳ ಜೀವನದಲ್ಲಿ ಅಮೃತ ವೃಷ್ಟಿಯನ್ನು ಕರೆದಿದ್ದಳು. ಅವಳ ಬದುಕನ್ನು ಸಾರ್ಥಕವಾಗುವಂತೆ ಮಾಡಿದ್ದಳು. ತಾನು ಹೆಚ್ಚು ಕಲಿಯುವ ಆಸೆ ವ್ಯಕ್ತಪಡಿಸಿದಾಗ ಶಾರದೆ ಅದನ್ನು ಉಪೇಕ್ಷೆಮಾಡಿ, ನಕ್ಕು ಬಿಡದೆ—ಎಷ್ಟೊಂದು ರೀತಿಯಲ್ಲಿ ಪ್ರೋತ್ಸಾಹಿಸಿದ್ದಳು? ಅದಕ್ಕಾಗಿ ಎಷ್ಟೊಂದು ತ್ಯಾಗಮಾಡಿದ್ದಳು. ಶಾರದೆ ಆ ದಿನ ಹೇಳಿದ ಮಾತು ಇನ್ನೂ ಸುಮಿತ್ರೆಯ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿತ್ತು.

"ಓದು ಗಂಡಿನ ಗುತ್ತಿಗೆಯಲ್ಲ ಸುಮ್ಮಿ. ಜ್ಞಾನ ಸಂಪಾದನೆ ಗಂಡಿಗೆ ಎಷ್ಟು ಮುಖ್ಯವೋ ಹೆಣ್ಣಿಗೂ ಅಷ್ಟೇ ಮುಖ್ಯ. ಆದರೆ ಗಂಡು ಹೆಣ್ಣನ್ನು ಶಾರದೆಯ ಗುಡಿಯಿಂದ ಹೊರದಬ್ಬಿ ಅವಳನ್ನು ಅಡಿಗೆಯ ಮನೆಯಲ್ಲಿ ಕೊಳೆ ಹಾಕಿದ್ದಾನೆ. ನಿನ್ನಂಥ ಹುಡುಗಿಯರು ಹೆಚ್ಚು ಕಲಿಯಬೇಕು ಸುಮ್ಮಿ, ಕಲಿತು ಅಜ್ಞಾನ ಕೂಪದಲ್ಲಿ ತೊಳಲಾಡುತ್ತಿರುವ ಸೋದರಿಯರಿಗೆ ಜ್ಞಾನ ದೀಪವಾಗಬೇಕು. ಹೆಣ್ಣಿನ ಅನಕ್ಷರತೆ ಹೋಗದ ಹೊರತು ಅವರು ಎಚ್ಚೆತ್ತು ಕೊಳ್ಳರು. ತಮ್ಮ ಹಕ್ಕು ಬಾಧ್ಯತೆಗಳು ಏನೆಂದು ತಿಳಿದುಕೊಳ್ಳಲಾರರು. ಆದುದರಿಂದ ನಿನಗೆಷ್ಟು ಆಸೆ ಇದೆಯೋ ಅಷ್ಟೂ ಓದಿ ಪಂಡಿತೆಯಾಗು ಮಗು." ಎಂದು ಹರಸಿದ್ದಳು.

ಮತ್ತೊಮ್ಮೆ ಸುಮಿತ್ರೆ ತಾನು ಡಾಕ್ಟರಾಗುವ ಆಸೆ ವ್ಯಕ್ತಪಡಿಸಿದಾಗ ಶಾರದೆ ಹೇಳಿದ್ದಳು.

"ಮಗು,ನಿನ್ನಂಥ ಹೆಣ್ಣಿಗೆ ಒಪ್ಪುವ ಯೋಗ್ಯವೃತ್ತಿಇದು. ದೀನದಲಿತರ, ದರಿದ್ರ ನಾರಾಯಣನ ಸೇವೆಗೆ ಅದು ರಾಜಮಾರ್ಗ. ಸಮಾಜದಲ್ಲಿ ಎಷ್ಟೊಂದು ಬಗೆಯ ರೋಗರುಜಿನಗಳಿವೆ ? ಅದರಲ್ಲಿಯೂ ಹೆಣ್ಣು ಸಾವಿರ ಬಗೆಯ ರೋಗ ರುಜಿನಗಳಿಗೆ ತುತ್ತಾಗಿದ್ದಾಳೆ. ಹೆರಿಗೆ ಮೊದಲಾದ ಕಷ್ಟಾಯದ ಆಪತ್ತು ಗಳಿಗೆ ಬಲಿಯಾಗಿ ಎಷ್ಟೊಂದು ಜನ ಬಾಲಮಾತೆಯರು ಜೀವನ್ಮೃತರಾಗಿಲ್ಲ. ಅಂಥವರ ಉದ್ಧಾರಕ್ಕಾಗಿ, ನಿನ್ನಂಥ ಹೆಣ್ಣು ಮಾಡಬೇಕಾದ ಕೆಲಸ ಬಹಳ ವಾಗಿದೆ ಮಗು...."ಎಂದು ಸುಮಿತ್ರೆಯ ಆದರ್ಶವನ್ನು ಸ್ಪಷ್ಟಪಡಿಸಿ ಅವಳನ್ನು ಹುರಿದುಂಬಿಸಿ ಗುರಿಯತ್ತ ಒಯ್ದಿದ್ದಳು.

ಈ ಮಾತುಗಳೆಲ್ಲ ಈ ದಿನ ಸುಮಿತ್ರೆಯ ಸ್ಮೃತಿಪಥದಲ್ಲಿ ಮತ್ತೊಮ್ಮೆ ಸುಳಿದು ಹೋದವು. ದೊಡ್ಡವರ ರೀತಿಯೇ ಹಾಗೆ. ತಮ್ಮ ಕಷ್ಟಗಳಲ್ಲಿ ಎಂತೋ ಸುಖದಲ್ಲಿಯೂ ಇನ್ನೊಬ್ಬರನ್ನು ನೆನೆಯುತ್ತಾರೆ. ಶಾರದೆಯಿಂದ ರೂಪಗೊಂಡ ವಿಗ್ರಹ ತಾನು. ತಾನು ಇಂದು ಈ ಸ್ಥಿತಿಗೆ ಬಂದುದಾದರೂ ಅದು ಶಾರದೆಯ ಆಶೀರ್ವಾದದಿಂದ. ಅವಳು ಎಲ್ಲಿಯೇ ಇರಲಿ, ಏನೇ ಮಾಡು ತ್ತಿರಲಿ ಅವಳ ಮನಸ್ಸಿಗೆ ಸಂತೋಷವಾಗಬೇಕಾದರೆ ಅವಳಿಗೆ ಇಷ್ಟವಾದ ಕೆಲಸ ಮಾಡಬೇಕು ಎಂದುಕೊಂಡಳು ಸುಮಿತ್ರೆ.

ಸುಮಿತ್ರೆ ತನ್ನ ಒಂಟಿ ಜೀವನಕ್ಕೆ ಕೊನೆತಂದು ತಾನು ಎಲ್ಲರಂತೆ ಸಂಸಾರಿಯಾಗುವ ಕನಸು ಕಂಡಳು. ತನ್ನದೇ ಆದ ಔಷಧಾಲಯವನ್ನು ತೆರೆದು ಬಡಬಗ್ಗರ ಉದ್ಧಾರಕ್ಕಾಗಿ ತನ್ನ ಕೈಲಾಗುವಷ್ಟು ಶ್ರಮಿಸುವುದೇ ಅವಳ ಎಲ್ಲ ಕನಸಿನ ಸೂತ್ರವಾಗಿತ್ತು. ಅವಳ ಮನಸ್ಸು ಶಾರದೆಯನ್ನು ನೆನೆಯುತ್ತಿ ದ್ದಂತೆ, ಗೋಡೆಯ ಮೇಲಿದ್ದ ಬಾಪುವಿನ ಚಿತ್ರ ಕಣ್ಣಿಗೆ ಬಿತ್ತು. ಅದನ್ನು ನೋಡುತ್ತಾ ಕುಳಿತ ಅವಳ ಕಣ್ಣು ಏಕೋ ಮಂಜಾಯಿತು. ಅವಳ ಹೃದಯ ಅವಳಿಗೆ ಅರಿವಾಗದಂತೆ ಹಾಡಿಕೊಂಡಿತು.

" ತನು ನಿನ್ನದು ಸ್ವಾಮಿ. ಜೀವನ ನಿನ್ನದು...."

ಇದು ಅವಳ ಹೃದಯಗೀತೆ—ಇದು ಅವಳ ಬಾಳಗೀತೆ.